# ನವಕರ್ನಾಟಕ ೫೦ರ ಸಂಭ್ರಮದಲ್ಲಿ

## ಚಿನ್ನದ ಹಬ್ಬಕ್ಕೆ ಚಂದದ ಕೊಡುಗೆ

ಆಗಸ್ಟ್ 29, 2010ರಂದು ಬೆಳಗ್ಗೆ 10 ಕ್ಕೆ
ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ

## ಲೋಕಾರ್ಪಣೆ

ಅಧ್ಯಕ್ಷತೆ : ಡಾ|| ಚಂದ್ರಶೇಖರ ಕಂಬಾರ, ಅನಾವರಣ : ಡಾ|| ಬಿ. ಜಯಶ್ರೀ ಮತ್ತು ಶ್ರೀ ಎಸ್. ಜಿ. ವಾಸುದೇವ




ಸಂಪಾದಕರು :
ಪ್ರೊ|| ಎಂ. ಎಚ್. ಕೃಷ್ಣಯ್ಯ, ಡಾ|| ವಿಜಯಾ, ಶ್ರೀ ಸಿ. ಆರ್. ಕೃಷ್ಣರಾವ್

1200 ಪುಟಗಳು. ಆಕಾರ : ಡೆಮಿ ¼ (22 x 28 ಸೆಂಮೀ).
ಎರಡು ಸಂಪುಟಗಳು,
ಸಂದರ್ಭಸೂಚಿ ಮತ್ತು ಸಿಡಿ ರಟ್ಟಿನ ಪೆಟ್ಟಿಗೆಯಲ್ಲಿ.

ಆರ್ಟ್ ಕಾಗದದ ಮೇಲೆ ಬಹುವರ್ಣದಲ್ಲಿ
ಮುದ್ರಣವಾಗುವ ಮಹತ್ವದ ಕೃತಿ.
ಕರ್ನಾಟಕ ಕಲಾ ಪರಂಪರೆಯನ್ನು ಅನಾವರಣಗೊಳಿಸುವ
ಮಹಾಪ್ರಯತ್ನ. ಸುಮಾರು 4300 ಅಪೂರ್ವ
ವರ್ಣ ಹಾಗೂ ಕಪ್ಪುಬಿಳುಪು ಚಿತ್ರಗಳು. 9 ಅಧ್ಯಾಯಗಳು,
55 ಪರಿಣತರ 50 ಲೇಖನಗಳ ಬೃಹತ್ ಗ್ರಂಥ.

**ನವಕರ್ನಾಟಕ ಪ್ರಕಾಶನದ ಈ ವಿಶಿಷ್ಟ ಯೋಜನೆ ಸಾಂಸ್ಕೃತಿಕ ರಂಗಕ್ಕೆ ಮಹಾನ್ ಕೊಡುಗೆ. ನಾಡು ನುಡಿಗೆ ವಿಶೇಷ ಕಾಣಿಕೆ**

- ರೂ. 3000 ಮುಖಬೆಲೆಯ ಈ ಕೃತಿ ಆ ದಿನವೂ ರೂ. 2000ಕ್ಕೆ ಲಭ್ಯ.
- ಈಗಾಗಲೇ ಪೂರ್ತಿ ಮುಂಗಡ ಪಾವತಿಸಿದವರು ಅಂದು ತಮ್ಮ ರಶೀದಿಯನ್ನು ತೋರಿಸಿ ಕೃತಿಯನ್ನು ಪಡೆಯಬಹುದು.
- ಭಾಗಶಃ ಪಾವತಿಸಿದವರು ಮತ್ತು ಹೊಸದಾಗಿ ಬೇಡಿಕೆ ಸಲ್ಲಿಸುವವರು ಹಣವನ್ನು ಬ್ಯಾಂಕ್ ಡ್ರಾಫ್ಟ್ ಅಥವಾ ಮನಿ ಆರ್ಡರ್ ಮೂಲಕ ಕಳಿಸಿ. ಇಲ್ಲವೇ ನಮ್ಮ ಬ್ಯಾಂಕ್ ಅಕೌಂಟ್‌ಗೆ ಜಮಾ ಮಾಡಬಹುದು. (Current A/c No. 0788201010612; IFSC Code CNRB0000788; Canara Bank, Madhavnagar Branch. ಹೀಗೆ ಜಮಾ ಮಾಡುವವರು ಬ್ಯಾಂಕ್ ಚಲನ್‌ನ ಜೆರಾಕ್ಸ್ ಪ್ರತಿ ಹಾಗೂ ತಮ್ಮ ಹೆಸರು, ವಿಳಾಸವನ್ನು ಕೆಳಕಂಡ ನಮ್ಮ ಪ್ರಧಾನ ಕಛೇರಿಗೆ ಕಳಿಸಬೇಕು).

(ಹಣವನ್ನು ನವಕರ್ನಾಟಕದ ಶಾಖೆಗಳಲ್ಲಿ, ಮಳಿಗೆಗಳಲ್ಲಿ ಅಥವಾ ಪುಸ್ತಕ ಪ್ರದರ್ಶನಗಳಲ್ಲಿ ಕೂಡ ಪಾವತಿಸಬಹುದು)

ಕೃತಿಯ ಮುಖ ಬೆಲೆ
**ರೂ. 3000**
ಪ್ರಕಟಣಪೂರ್ವ ಬೆಲೆ
**ರೂ. 2000**
ಭಾರಿ ಉಳಿತಾಯ
**ರೂ. 1000**




ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :


## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com


**ಕರ್ನಾಟಕ ಕಲಾದರ್ಶನದ ಮಾದರಿ ಪುಟಗಳಿಗೆ ನೋಡಿ : http://navakarnataka.blogspot.com**

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಕಮಲಂ ಅರಸು, ಶ್ರೀಹರಿ, ವಿವೇಕಾನಂದ,
ಎನ್. ಆರ್. ಬೊಮ್ಮಳ್ಳಿ, ಜಿ. ಎಂ. ಬೊಮ್ಮಳ್ಳಿ
ಮುಖಚಿತ್ರ : ಮಳೆರಾಯ ಬಂದ ಆಲಿಕಲ್ಲು ತಂದ
ವರ್ಣಚಿತ್ರ : ಕೆ. ಪಿ. ಸ್ವಾಮಿ, ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


### ಈ ತಿಂಗಳು

**ಪ್ರ**ಧಾನ ಮಂತ್ರಿಗಳು ಅಮೆರಿಕಾದ, ವಿಶ್ವಬ್ಯಾಂಕು, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಆಜ್ಞಾಪಾಲಕರಾಗಿ ಉದಾರವಾದಿ ಆರ್ಥಿಕ ನೀತಿಗಳನ್ನು ಜಾರಿಗೆ ತರುತ್ತ ವಿವಿಧ ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳ ಬರಮಾಡಿಕೊಳ್ಳಲು ಹಾತೊರೆಯುತ್ತಿರುವಾಗಲೇ ಕೃಷಿ ಕ್ಷೇತ್ರವು ಕೇಂದ್ರ ಸರ್ಕಾರದ ತೀವ್ರ ಅನಾದರಕ್ಕೆ ಗುರಿಯಾಗಿ ಸೊರಗಿಹೋಗುತ್ತಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಲಕ್ಷಾಂತರ ರೈತರು ಆತ್ಮಹತ್ಯೆಗೆ ಮೊರೆಹೋಗುತ್ತಿದ್ದಾರೆ. ಗ್ರಾಮೀಣ ಪ್ರದೇಶಗಳಿಂದ ಬಡ ರೈತಾಪಿ ಜನರು ನಗರಗಳಿಗೆ ವಲಸೆ ಹೋಗುತ್ತಿದ್ದಾರೆ.

ಈ ಮಧ್ಯೆ ರೈತಾಪಿಜನರ ಬದುಕನ್ನು ಹಸನುಗೊಳಿಸುವ ದಿಶೆಯಲ್ಲಿ ಆ ಜನರ ಸಂಕಷ್ಟಗಳಿಗೆ ಸ್ಪಂದಿಸಬೇಕಿರುವ ಕೇಂದ್ರ ಕೃಷಿ ಮಂತ್ರಿ ನ್ಯಾಷನಲಿಸ್ಟ್ ಕಾಂಗ್ರೆಸ್ ಪಕ್ಷದ ಶರದ್ ಪವಾರ್ ಅವರಿಗೆ ಇವಾವುದರ ಕುರಿತು ಕನಿಷ್ಠ ಕಾಳಜಿಯೂ ಇಲ್ಲ. ಅವರ ಆದ್ಯತೆಗಳೇ ಬೇರೆ. ಈತ ಮಹಾರಾಷ್ಟ್ರದ ಇಡೀ ಸಕ್ಕರೆ ಲಾಬಿಯ ಅನಭಿಷಿಕ್ತ ದೊರೆ. ಇದೀಗ ಅಂತರರಾಷ್ಟ್ರೀಯ ಕ್ರಿಕೆಟ್ ಮಂಡಳಿಯ ಅಧ್ಯಕ್ಷನಾಗಿರುವ ಈ ಮಹಾನ್ ರಾಜಕಾರಣಿ ತನ್ನ ಪಕ್ಷವನ್ನು ಕಟ್ಟಬೇಕಿದೆ, ಕ್ರಿಕೆಟ್ ಮಂಡಳಿಯ ವ್ಯವಹಾರಗಳನ್ನು ನಿರ್ವಹಿಸಲು ಹೆಚ್ಚಿನ ಸಮಯ ಬೇಕಿದೆ ಎಂಬ ಬೇಡಿಕೆಗಳನ್ನು ಮುಂದಿಟ್ಟು ತಾವು ನಿರ್ವಹಿಸುತ್ತಿರುವ ಕೃಷಿ ಸಚಿವಾಲಯದಲ್ಲಿನ ಜವಾಬ್ದಾರಿಯನ್ನು ಕಡಿತಗೊಳಿಸಬೇಕೆಂದು ಪ್ರಧಾನಿಯವರನ್ನು ಕೇಳಿಕೊಂಡಿದ್ದಾರೆ. ಎಲ್ಲ ಸಂಸದರು, ಶಾಸನಸಭೆ ಸದಸ್ಯರು, ಜನಪ್ರತಿನಿಧಿಗಳು ಪೂರ್ಣಾವಧಿ ಕಾರ್ಯಕರ್ತರಾಗಿ ಜನಪರ ಕೆಲಸಗಳಲ್ಲಿ ತೊಡಗಿಕೊಳ್ಳಬೇಕು, ಸಂವಿಧಾನೇತರ ಬೇರಾವುದೇ ಸಂಘಟನೆಗಳ ಅಧಿಕಾರಸ್ಥ ಇಲ್ಲವೇ ಲಾಭದಾಯಕ ಹುದ್ದೆಗಳನ್ನು ಹೊಂದಿರಬಾರದು ಎಂಬ ಕನಿಷ್ಠ ಪರಿಜ್ಞಾನವೂ ಈತನಿಗಿಲ್ಲದಿರುವುದು ಶೋಚನೀಯ. ಈತ ತನ್ನ ಹೆಚ್ಚಿನ ಸಮಯ ಕಳೆಯುವುದು ಅಂತರರಾಷ್ಟ್ರೀಯ ಕ್ರಿಕೆಟ್ ಮಂಡಳಿಯ ಕೇಂದ್ರ ಕಛೇರಿಗಳಿರುವ ಲಂಡನ್ ಮತ್ತು ದುಬೈನಲ್ಲಿ. ಅಸಲು, ಈ ಮಹಾಶಯ ಒಬ್ಬ ಕೃಷಿ ಮಂತ್ರಿಯಾಗಿ ಇದುವರೆವಿಗೂ ಜವಾಬ್ದಾರಿಯುತವಾಗಿ ವರ್ತಿಸಿದ ಯಾವ ಉದಾಹರಣೆಯೂ ಇಲ್ಲ. ನಶಿಸಿಹೋಗುತ್ತಿರುವ ಕೃಷಿಕ್ಷೇತ್ರದ ಬಗೆಯಾಗಲಿ, ಆಹಾರ ಭದ್ರತೆಯ ಬಗ್ಗೆಯಾಗಲಿ, ದಿನನಿತ್ಯ ಏರುತ್ತಿರುವ ಬೆಲೆಗಳ ಬಗ್ಗೆಯಾಗಲಿ ಯಾವತ್ತಿಗೂ ತಲೆಕೆಡಿಸಿಕೊಳ್ಳದೆ ಉದ್ಧಟತನದ ಹೇಳಿಕೆಗಳನ್ನು ನೀಡುತ್ತ ಕ್ರಿಕೆಟ್ ರಾಜಕಾರಣದಲ್ಲೇ ಮುಳುಗಿಹೋಗಿರುವ ಶರದ್ ಪವಾರ್ ಎಂಬ ಈ ವ್ಯಕ್ತಿ ಸಚಿವ ಸಂಪುಟದಲ್ಲಿ ಮುಂದುವರಿಯುವುದರಲ್ಲಿ ಯಾವ ಅರ್ಥವೂ ಇಲ್ಲ. ಆಂತರಿಕವಾಗಿ ಕಾಂಗ್ರೆಸ್ ಪಕ್ಷದ ಧುರೀಣರೂ ಈತನ ಕಾರ್ಯವೈಖರಿಯ ಬಗ್ಗೆ ತೀವ್ರ ಅತೃಪ್ತಿ ವ್ಯಕ್ತಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ವಸ್ತುಸ್ಥಿತಿಯನ್ನು ಎದುರಿಸಲಾಗದೇ ಮಂತ್ರಿ ಪದವಿಯನ್ನು ಬಿಟ್ಟುಕೊಡುವುದೇ ಲೇಸು ಎಂದು ಬಗೆದು ಶರದ್ ಪವಾರ್ ಈ ಹೊಸ ಸೋಗುಹಾಕುತ್ತಿರುವ ಸಾಧ್ಯತೆಯೂ ಇಲ್ಲದಿಲ್ಲ. ಮನಮೋಹನ್ ಸಿಂಗ್ ಮತ್ತು ಸೋನಿಯಾ ಗಾಂಧಿ ಇಬ್ಬರೂ ದೊಡ್ಡ ಮನಸ್ಸು ಮಾಡಿ ಕ್ರಿಕೆಟ್ ಆಟಕ್ಕೇ ಸೀಮಿತಗೊಂಡ ಒಂದು ಪ್ರತ್ಯೇಕ ಸಚಿವಾಲಯವನ್ನು ಮಾನ್ಯ ಪವಾರ್ ಅವರ ಸಲುವಾಗಿಯೇ ರೂಪಿಸುವುದು ಸೂಕ್ತ. ಇದರಿಂದಾಗಿ 'ಕ್ರಿಕೆಟ್ ಈಸ್ ಎ ರಿಲಿಜನ್' ಎಂದು ನಮ್ಮ ಟಿ.ವಿ. ಮಾಧ್ಯಮಗಳು ಬಿಂಬಿಸುವ ಘೋಷ ವಾಕ್ಯಕ್ಕೆ ಹೆಚ್ಚಿನ ಮಹತ್ವ ನೀಡಿದಂತಾಗುತ್ತದೆ. ನಮ್ಮ ದೇಶದ ಕ್ರಿಕೆಟ್ ಅಭಿಮಾನಿಗಳಿಗೂ ಕ್ರಿಕೆಟ್ ಎಂಬ ಅಫೀಮು ಬಾಟಲುಗಟ್ಟಲೆ ದೊರೆಯುವಂತಾಗುತ್ತದೆ. ಐಪಿಎಲ್‌ನಂತಹ ಟೂರ್ನಮೆಂಟ್‌ಗಳನ್ನು ಇನ್ನೂ ಹೆಚ್ಚು ಅದ್ದೂರಿಯಿಂದ ನಡೆಸಲು, 'ಚೀಯರ್ ಗರ್ಲ್ಸ್' ಮನಬಂದಂತೆ ಕುಣಿದು ನೋಡುಗರ ಮನತಣಿಸಲು ಹೆಚ್ಚು ಅವಕಾಶಗಳನ್ನು ಸೃಷ್ಟಿಸಿದಂತಾಗುತ್ತದೆ. ಜೊತೆಗೆ, ಇಂತಹ 'ಕ್ರಿಕೆಟ್ ಹಬ್ಬ'ಗಳನ್ನು ಗ್ರಾಮೀಣ ಪ್ರದೇಶಗಳಲ್ಲೂ ಸಂಘಟಿಸುತ್ತೇವೆ ಎಂದು ಯುಪಿಎ ಸರ್ಕಾರದ ರೂವಾರಿ ಮನಮೋಹನ ಸಿಂಗ್ ಘೋಷಿಸುವ ಮೂಲಕ ಆತ್ಮಹತ್ಯೆಗೆ ಮೊರೆಹೋಗುತ್ತಿರುವ ರೈತರಿಗೆ ಸಾಂತ್ವನ ನೀಡಬಹುದಲ್ಲವೇ !

* * *

**ಭೋ**ಪಾಲ್ ದುರಂತದ ಬಗ್ಗೆ ಚರ್ಚೆ ಇನ್ನೇನು ನಿಂತೇಹೋಯಿತೇನೋ ಎನ್ನುವಂತೆ ಭಾಸವಾಗುತ್ತಿದೆ. ಅದು ಅನಿರೀಕ್ಷಿತವಲ್ಲ. ಸರ್ಕಾರದ ಈ ಜಾಯಮಾನ ತಿಳಿದದ್ದೇ. ಆದರೆ ಮಾಧ್ಯಮಗಳು ಇಡೀ ಪ್ರಶ್ನೆಯು ಇತ್ಯರ್ಥವಾಗಬೇಕಾದ ದಿಕ್ಕಿನಲ್ಲಿ ಸತತವಾಗಿ ಯತ್ನಿಸಬೇಕಾದ್ದು ಕರ್ತವ್ಯ. ಒಂದು ವಾರವೋ ಹತ್ತು ದಿನವೋ ಅದನ್ನು ಕುರಿತಂತೆ ಇನ್ನಿಲ್ಲದ ಕಾಳಜಿ ತೋರುವ ಪತ್ರಿಕೆಗಳು ಹಾಗೂ ಟಿ.ವಿ. ಚಾನೆಲ್‌ಗಳು ಆಮೇಲೆ ಅದನ್ನು ಮರೆತುಬಿಟ್ಟಿವೆ. ಹದಿನೈದು ವರ್ಷಗಳಿಂದ ನೋವುಣ್ಣುತ್ತಿರುವ ಜನಕ್ಕೆ ನೋವು

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆಚ್ಚಿಬಿಟಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ


ಸಂಪುಟ-೧೨ ಸಂಚಿಕೆ - ೧ ಆಗಸ್ಟ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ಕೆ. ಎಸ್. ಪಾರ್ಥಸಾರಥಿ

ಕೆ. ಪಿ. ಸ್ವಾಮಿ

ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್

ವ್ಯವಸ್ಥಾಪಕ ನಿರ್ದೇಶಕ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**

೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ

೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ

ಬೆಂಗಳೂರು - ೫೬೦ ೦೫೮

ದೂರವಾಣಿ : ೨೮೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೪೯

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೩೦೫೭೮೦೨೯, ೨೨೨೦೩೫೮೦

ಫ್ಯಾಕ್ಸ್ : ೩೦೫೭೮೦೨೩

**e-mail : navakarnataka@gmail.com**

**hosathu@gmail.com**

**URL : www.navakarnataka.com**

**http://navakarnataka.blogspot.com**

**http://hosathu.blogspot.com**


**ಸಂಪಾದಕೀಯ**

# ಲೋಕಾಯುಕ್ತ : ಎದುರಿಸಬೇಕಾಗಿರುವ ಸವಾಲುಗಳು

ಅಧಿಕಾರ ವಹಿಸಿಕೊಂಡಾಗಿನಿಂದಲೂ ಭ್ರಷ್ಟಾಚಾರದ ವಿರುದ್ಧ ಸತತವಾಗಿ ಸಮರ ಸಾರುತ್ತ ಸರ್ಕಾರದ ಹಲವಾರು ಭ್ರಷ್ಟ ಅಧಿಕಾರಿಗಳ ದುಷ್ಕೃತ್ಯಗಳನ್ನು, ಸಾವಿರಾರು ಕೋಟಿ ರೂಪಾಯಿಗಳ ಹಗರಣಗಳನ್ನು ಬಯಲಿಗೆಳೆದಿರುವ ರಾಜ್ಯದ ಲೋಕಾಯುಕ್ತರಾದ ನ್ಯಾಯಮೂರ್ತಿ ಸಂತೋಷ ಹೆಗ್ಡೆಯವರು ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಅಧಿಕಾರಶಾಹಿ ವಲಯಗಳಲ್ಲಿ, ಸರ್ಕಾರಿ ಇಲಾಖೆಗಳಲ್ಲಿ ಭ್ರಷ್ಟಾಚಾರ, ಲಂಚ, ರುಸುವತ್ತು ಎಷ್ಟು ವ್ಯಾಪಕವಾಗಿ ಬೇರೂರಿವೆ ಎಂಬುದನ್ನು ಮತ್ತೆಮತ್ತೆ ಸಾಬೀತುಪಡಿಸಿದ್ದಾರೆ. ದುರಂತವೆಂದರೆ ತಪ್ಪಿತಸ್ಥರ ಮೇಲೆ ನಮ್ಮ ಸರ್ಕಾರ ಯಾವುದೇ ಶಿಸ್ತಿನ ಕ್ರಮ ಕೈಗೊಳ್ಳಲು ಇದುವರೆವಿಗೂ ಮುಂದೆ ಬಂದಿಲ್ಲ. ಕಾರಣ, ಎಲ್ಲರಿಗೂ ತಿಳಿದಿರುವಂತೆ ಎಲ್ಲ ರಾಜಕಾರಣಿಗಳೂ, ಮುಖ್ಯಮಂತ್ರಿಯಾದಿಯಾಗಿ ಎಲ್ಲ ಮಂತ್ರಿಗಳೂ ಇಂತಹ ಹಗರಣಗಳಲ್ಲಿ ಶಾಮೀಲಾಗಿರುತ್ತಾರೆ. ಹಾಗೆ ದಕ್ಕುವ ಹಣದಲ್ಲಿ ಅವರ ಪಾಲೂ ನಿಗದಿಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮೀ ಬಂಡವಾಳಶಾಹಿ ಆಡಳಿತ ವರ್ಗ ಭ್ರಷ್ಟ ಅಧಿಕಾರಿಗಳನ್ನು ಶಿಕ್ಷೆಗೆ ಗುರಿಪಡಿಸಲು ಯಾವತ್ತೂ ತಯಾರಿರುವುದಿಲ್ಲ. ಇದು ಲೋಕಾಯುಕ್ತ ಸಂಸ್ಥೆ ಸ್ಥಾಪನೆ ಆದಾಗಿನಿಂದ ನಡೆದುಕೊಂಡು ಬಂದಿರುವ ಸರಿಸುಮಾರು ೨೪ ವರ್ಷಗಳ ಕತೆ.

ಆಡಳಿತ ಸುಧಾರಣಾ ಆಯೋಗವು ೧೯೮೦ರಲ್ಲಿ ಮಾಡಿದ ಶಿಫಾರಸ್ಸಿನಂತೆ ಕೆಲವು ರಾಜ್ಯಗಳಲ್ಲಿ ಲೋಕಾಯುಕ್ತ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಅವುಗಳಲ್ಲಿ ಕರ್ನಾಟಕವೂ ಒಂದು. ಆಗ ಮೊರಾರ್ಜಿ ದೇಸಾಯಿ ರಾಷ್ಟ್ರದ ಪ್ರಧಾನಿ. ನಮ್ಮ ರಾಜ್ಯದಲ್ಲಿ ಲೋಕಾಯುಕ್ತ ಸಂಸ್ಥೆ ಸ್ಥಾಪನೆಯಾದ ಆರು ತಿಂಗಳ ಒಳಗೇ 'ಮೌಲ್ಯಾಧಾರಿತ ರಾಜಕಾರಣದ ಆಧಾರದ ಮೇಲೆ ಆಡಳಿತ ನಡೆಸುತ್ತೇವೆ' ಎಂಬ ಘೋಷಣೆಯೊಂದಿಗೆ ಅಧಿಕಾರ ವಹಿಸಿಕೊಂಡ ಅಂದಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರು ಲೋಕಾಯುಕ್ತರಿಗಿದ್ದ ಅಧಿಕಾರವನ್ನು ಬಲಗೊಳಿಸುವ ಬದಲು, ಅದನ್ನು ಮೊಟಕುಗೊಳಿಸಿ ತಮ್ಮ ಅದ್ವಿತೀಯ 'ಸಾಧನೆ' ಮೆರೆದರು. ಅಂದಿನಿಂದಲೂ ಎ. ಡಿ. ಕೌಶಾಲ್, ರಬೀಂದ್ರನಾಥ್ ಪೈನೆ, ಎಸ್. ವಿ. ಹಕೀಂರಂತಹ ಲೋಕಾಯುಕ್ತರು ಬಂದು ಹೋಗಿದ್ದಾರೆ. ಆದರೆ ಲೋಕಾಯುಕ್ತ ಸಂಸ್ಥೆ ಎಂಬುದೊಂದಿದೆ, ಅದು ನಿಜಕ್ಕೂ ಕ್ರಿಯಾಶೀಲವಾಗಿ, ಜನಪರವಾಗಿ ಕಾರ್ಯವೆಸಗಿಸಿದರೆ ಆಡಳಿತ ವರ್ಗದಲ್ಲಿನ ಹಗರಣಗಳನ್ನು ಜಗಜ್ಜಾಹೀರುಗೊಳಿಸಬಹುದು, ಭ್ರಷ್ಟ ಅಧಿಕಾರಿಗಳನ್ನು, ಈ ವ್ಯವಸ್ಥೆಯಲ್ಲಿರುವ ಇತಿಮಿತಿಗಳಲ್ಲೇ, ತರಾಟೆಗೆ ತೆಗೆದುಕೊಳ್ಳಬಹುದು ಎಂಬ ವಾಸ್ತವಾಂಶ ಜನರ ಅರಿವಿಗೆ ಬಂದದ್ದು ನ್ಯಾಯಮೂರ್ತಿ ವೆಂಕಟಾಚಲ ಅವರು ಅಧಿಕಾರ ವಹಿಸಿಕೊಂಡಾಗ ಮಾತ್ರ. ಇದೇ ಬಗೆಯಲ್ಲಿ ಚುನಾವಣಾ ಆಯೋಗವೂ ತನ್ನ ಪರಮಾಧಿಕಾರ ಚಲಾಯಿಸಿದರೆ ಎಷ್ಟು ಪರಿಣಾಮಕಾರಿಯಾಗಿ ಕೆಲಸ ಮಾಡಬಹುದು, ಚುನಾವಣೆಗಳಲ್ಲಿ ಜರುಗುವ ಅಕ್ರಮಗಳನ್ನು ನಿಗ್ರಹಿಸಬಹುದು ಎಂಬುದು ಜನರಿಗೆ ಮನವರಿಕೆಯಾದುದು ಶೇಷನ್ ಅವರು ಮುಖ್ಯ ಚುನಾವಣಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಾಗ. ದುರದೃಷ್ಟಕರ ಸಂಗತಿ ಎಂದರೆ ನಿವೃತ್ತಿಯಾದ ನಂತರ ಶೇಷನ್ ಸಂಘಪರಿವಾರದ ಪರಮಮಿತ್ರ ಪಕ್ಷ, ಮರಾಠಿ ಅಂಧಾಭಿಮಾನದ ಪ್ರತೀಕವಾಗಿರುವ ಶಿವಸೇನೆಯ ಸದಸ್ಯರಾದದ್ದು. ಅಂತೆಯೇ ಮಾನ್ಯ ವೆಂಕಟಾಚಲ ಅವರು ತಮ್ಮ ಅಧಿಕಾರಾವಧಿ ಮುಗಿದನಂತರ ಭ್ರಷ್ಟಾಚಾರದಲ್ಲೇ ಮುಳುಗಿಹೋಗಿರುವ ಕೋಮುವಾದಿ ಭಾರತೀಯ ಜನತಾ ಪಕ್ಷದ ಸದಸ್ಯರಾಗಿದ್ದು ವಿಪರ್ಯಾಸವಲ್ಲದೆ ಮತ್ತೇನು ? ಆ ಕುರಿತು ಹೆಚ್ಚಿನ ಚರ್ಚೆ ಇಲ್ಲಿ ಅಪ್ರಸ್ತುತ.

ಮಾನ್ಯ ವೆಂಕಟಾಚಲ ಅವರ ನಂತರ ಲೋಕಾಯುಕ್ತರಾಗಿ ಅಧಿಕಾರ ವಹಿಸಿಕೊಂಡ ನ್ಯಾಯಮೂರ್ತಿ ಸಂತೋಷ ಹೆಗ್ಡೆ ಅವರು ತಮ್ಮ ಸಂಸ್ಥೆಯ ಘನತೆಯನ್ನು ಇಮ್ಮಡಿಗೊಳಿಸಿರುವುದು ಹೆಮ್ಮೆಯ ವಿಷಯ. ಕಳೆದೆರಡು ವರ್ಷಗಳಲ್ಲಿ ಅವರು ಬಯಲುಗೊಳಿಸಿರುವ ಹಲವಾರು ಹಗರಣಗಳು ಆಡಳಿತಾರೂಢ ಪಕ್ಷಗಳಾದ ಕಾಂಗ್ರೆಸ್, ಜನತಾದಳ ಮತ್ತು ಭಾರತೀಯ ಜನತಾ ಪಕ್ಷಗಳನ್ನು ಮುಜುಗರಕ್ಕೀಡುಮಾಡಿವೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ದುರಂತವೆಂದರೆ ಕೇವಲ ಬರಡು ಘೋಷಣೆಗಳು, ಅರ್ಥಹೀನ ಕಾರ್ಯಕ್ರಮಗಳನ್ನು ಮುಂದಿಟ್ಟು ಜಾತಿ ಹಾಗೂ ಕೋಮು ಆಧಾರಿತ ರಾಜಕಾರಣದಲ್ಲೇ ತಲ್ಲೀನರಾಗಿ ಹಣ, ಹೆಂಡ ಹರಿಸುವುದರ ಮೂಲಕ ಅಧಿಕಾರದ ಗದ್ದುಗೆಗೇರುವ ಈ ಪಕ್ಷಗಳಿಗೆ ಲೋಕಾಯುಕ್ತರು ಬಯಲುಗೊಳಿಸುವ ಕೋಟ್ಯಂತರ ರೂ.ಗಳ ಹಗರಣಗಳಿಗೆ ಸ್ಪಂದಿಸುವ ಸೂಕ್ಷ್ಮತೆಯಿಲ್ಲ, ಕನಿಷ್ಠ ಕಾಳಜಿ ಇಲ್ಲ; ಏಕೆಂದರೆ ಆಗಲೇ ಪ್ರಸ್ತಾಪಿಸಿದಂತೆ ಆ ಪಕ್ಷಗಳ ನಾಯಕರೇ ಅಂತಹ ಎಲ್ಲ ಭ್ರಷ್ಟಾಚಾರದ ಹಗರಣಗಳ ರೂವಾರಿಗಳಾಗಿರುತ್ತಾರೆ.

ಇತ್ತೀಚೆಗಂತೂ ಭಾರತೀಯ ಜನತಾ ಪಕ್ಷದ ಎರಡು ವರ್ಷಗಳ ಅಧಿಕಾರಾವಧಿಯಲ್ಲಿ ಜರುಗುತ್ತಿರುವ ರಾಜ್ಯದ ಸಂಪನ್ಮೂಲಗಳ ಲೂಟಿ ಮುಗಿಲು ಮುಟ್ಟಿದೆ. ಈ ಮಟ್ಟದ ಭ್ರಷ್ಟ ರಾಜಕಾರಣವನ್ನು ಕರ್ನಾಟಕದ ಜನತೆ ಕಂಡಿಲ್ಲ, ಕೇಳಿಲ್ಲ. ಅದರಲ್ಲೂ ಬಳ್ಳಾರಿ ರೆಡ್ಡಿಗಳ ಗಣಿ ಲೂಟಿ, ರಾಜ್ಯದ ಬೊಕ್ಕಸಕ್ಕೆ ಆಗುತ್ತಿರುವ ಸುಮಾರು ೨೦,೦೦೦ ಕೋಟಿ ರೂ.ಗಳ ನಷ್ಟ, ಕೇವಲ ರೆಡ್ಡಿಗಳ ಆಜ್ಞಾಪಾಲಕರಾಗಿ ಮುಖ್ಯಮಂತ್ರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಯಡಿಯೂರಪ್ಪನವರ ಕಾರ್ಯವೈಖರಿ, ವ್ಯಾಪಕ ಭ್ರಷ್ಟಾಚಾರ ಎಲ್ಲವೂ ಜನತೆಯನ್ನು ರೊಚ್ಚಿಗೆಬ್ಬಿಸಿವೆ. ಇದೇ ಅವಧಿಯಲ್ಲಿ ಭ್ರಷ್ಟಾಚಾರದ ವಿರುದ್ಧ ತಾವು ಸಾರುತ್ತಿರುವ ಸಮರ ಸರ್ಕಾರದ ಅಸಹಕಾರದಿಂದಾಗಿ ಅರ್ಥಹೀನವಾಗುತ್ತಿರುವುದು, ಭ್ರಷ್ಟಾಚಾರದ ಆಪಾದನೆಗೆ ಗುರಿಯಾಗಿರುವ ಅಧಿಕಾರಿಗಳ ಮೇಲೆ ಯಾವುದೇ ಕ್ರಮ ಕೈಗೊಳ್ಳದಿರುವುದು ಇತ್ಯಾದಿಗಳ ವಿರುದ್ಧ ಸಿಡಿದೆದ್ದ ಲೋಕಾಯುಕ್ತರು ತಪ್ಪಿತಸ್ಥರನ್ನು ಶಿಕ್ಷಿಸಲು ತಮಗೆ ಹೆಚ್ಚಿನ ಅಧಿಕಾರ ನೀಡಬೇಕೆಂದು ಪಟ್ಟುಹಿಡಿದು ಕಡೆಗೂ ರಾಜೀನಾಮೆ ಸಲ್ಲಿಸುವ ಮಟ್ಟಕ್ಕೆ ಹೋದುದು ರಾಜ್ಯ ರಾಜಕಾರಣದಲ್ಲಿ ಒಂದು ಮಹತ್ವದ ಬೆಳವಣಿಗೆ.

ಈ ಪ್ರಕರಣದ ನಂತರ ಲೋಕಾಯುಕ್ತರಿಗೆ ಹೆಚ್ಚಿನ ಅಧಿಕಾರ ದೊರಕಿದೆ. ಇನ್ನು ಮುಂದೆ ಕೆಲವು ಹಂತಗಳ ಭ್ರಷ್ಟ ಅಧಿಕಾರಿಗಳ ವಿರುದ್ಧ ಲೋಕಾಯುಕ್ತರು ತಾವೇ ಶಿಕ್ಷಾರ್ಹ ಕ್ರಮಗಳನ್ನು ಕೈಗೊಳ್ಳಬಹುದಾಗಿದೆ. ಮುಖ್ಯಮಂತ್ರಿಗಳೂ, ಇತರ ಮಂತ್ರಿಗಳೂ ಲೋಕಾಯುಕ್ತರ ಪರೀಕ್ಷಣದಲ್ಲಿ ಬರಬೇಕಾದುದು ಬಹಳ ಅಗತ್ಯ. ಆದರೆ ಮುಖ್ಯಮಂತ್ರಿ ಯಡಿಯೂರಪ್ಪನವರು ತಮ್ಮನ್ನೂ ಸೇರಿದಂತೆ, ತಮ್ಮ ಸಚಿವ ಸಂಪುಟದ ಇತರ ಸದಸ್ಯರ ವ್ಯವಹಾರಗಳ ಕುರಿತು ತನಿಖೆ ನಡೆಸಲು ಲೋಕಾಯುಕ್ತರಿಗೆ ಅಧಿಕಾರ ನೀಡಲು ಮುಂದಾಗದಿರುವುದು ಭಾಜಪ ಸರ್ಕಾರದ ಇಬ್ಬಗೆಯ ನೀತಿಯನ್ನು ಬಯಲುಗೊಳಿಸಿದೆ. ಈ ಕುರಿತು ಎಲ್ಲ ಪ್ರಗತಿಪರ ಪಕ್ಷಗಳು, ಪ್ರಜ್ಞಾವಂತ ಜನ ವಿಭಾಗಗಳು, ಸಂಘಸಂಸ್ಥೆಗಳು ರಾಜ್ಯವ್ಯಾಪಿ ಜನಾಂದೋಲನವನ್ನು ಸಂಘಟಿಸಬೇಕಿದೆ. ಆದರೆ

ಇಂದಿನ ನಮ್ಮ ರಾಜಕೀಯ ಕ್ಷೇತ್ರದ ಇತಿಮಿತಿಗಳನ್ನು ಪರಿಗಣಿಸಿದಾಗ ಇಷ್ಟಾದರೂ ಆದುದು ಒಂದು ಸ್ವಾಗತಾರ್ಹ ಬೆಳವಣಿಗೆಯೆ.

ಇತ್ತೀಚೆಗೆ ಲೋಕಾಯುಕ್ತರು ತೆಗೆದುಕೊಂಡ ನಿಲುವಿಗೆ ರಾಜ್ಯದೆಲ್ಲೆಡೆ ಜನಸಾಮಾನ್ಯರು ಬೆಂಬಲ ವ್ಯಕ್ತಪಡಿಸಿದ್ದಾರೆ. ಇನ್ನು ಮುಂದೆ ಅವರು ತೆಗೆದುಕೊಳ್ಳುವ ಎಲ್ಲ ಕ್ರಮಗಳಿಗೂ ಈ ಅಂಶವು ಸ್ಫೂರ್ತಿಯ ಸೆಲೆಯಾಗಬೇಕು. ಉಳಿದಿರುವ ಇನ್ನು ಒಂದು ವರ್ಷದ ಅವಧಿಯಲ್ಲಿ ನ್ಯಾಯಮೂರ್ತಿ ಸಂತೋಷ ಹೆಗ್ಡೆಯವರು ಸಾಧಿಸಬೇಕಾದುದು ಬಹಳಷ್ಟಿದೆ. ಈ ಹಿನ್ನೆಲೆಯಲ್ಲಿ ಲೋಕಾಯುಕ್ತರು ಹೆಚ್ಚಿನ ಆತ್ಮವಿಶ್ವಾಸದಿಂದ ಕಾರ್ಯ ನಿರ್ವಹಿಸಲಿದ್ದಾರೆ ಎಂಬ ಆಶಯ ನಮ್ಮದು.

ಕಡೆಯಲ್ಲಿ ಒಂದು ಮಾತು. ಲೋಕಾಯುಕ್ತರು ತಾವು ನೀಡಿರುವ ರಾಜೀನಾಮೆಯನ್ನು ಹಿಂತೆಗೆದುಕೊಳ್ಳಬೇಕು, ಭ್ರಷ್ಟಾಚಾರದ ವಿರುದ್ಧ ತಾವು ನಡೆಸಿರುವ ಹೋರಾಟವನ್ನು ಮುಂದುವರಿಸಬೇಕು ಎಂಬ ಬೇಡಿಕೆ ರಾಜ್ಯದೆಲ್ಲೆಡೆಯಿಂದ ಬಂದಿತ್ತು. ಹಲವಾರು ಪ್ರಗತಿಪರ ಪಕ್ಷಗಳು, ಸಂಘಸಂಸ್ಥೆಗಳು, ಜನಸಾಮಾನ್ಯರು, ಅವರು ತೆಗೆದುಕೊಂಡ ನಿಲುವಿಗೆ ಬೆಂಬಲ ಸೂಚಿಸಿದ್ದರು. ಇಷ್ಟಾದರೂ ಮಾನ್ಯ ಸಂತೋಷ ಹೆಗ್ಡೆಯವರು ಇವೆಲ್ಲವನ್ನೂ ಬದಿಗೆ ಸರಿಸಿ ಹವಾಲಾ ಹಗರಣದಲ್ಲಿ ಆರೋಪಕ್ಕೆ ಗುರಿಯಾಗಿರುವ, ಕಟ್ಟಾ ಕೋಮುವಾದಿ ಲಾಲ್ ಕೃಷ್ಣ ಅಡ್ವಾನಿಯವರ ಮಾತಿಗೆ ಓಗೊಟ್ಟು ರಾಜೀನಾಮೆ ಹಿಂತೆಗೆದುಕೊಂಡಿದ್ದೇನೆ ಎಂಬ ಹೇಳಿಕೆ ನೀಡಿ ಅನವಶ್ಯಕವಾಗಿ ಮುಜುಗರಕ್ಕೆ ಸಿಲುಕಿಕೊಂಡದ್ದು ಶೋಚನೀಯ.

ಅದೇನೇ ಇರಲಿ, ಭ್ರಷ್ಟಾಚಾರದ ವಿರುದ್ಧ ಲೋಕಾಯುಕ್ತರ ಕಾರ್ಯವೈಖರಿ, ಬದ್ಧತೆಗಳ ಬಗ್ಗೆ ರಾಜ್ಯದ ಜನತೆಗೆ ಅಪಾರ ಗೌರವವಿದೆ. ಅವರ ಬೇಡಿಕೆಗಳು ಸ್ವಲ್ಪಮಟ್ಟಿಗಾದರೂ ಈಡೇರಿವೆ. ಈ ಹಿನ್ನೆಲೆಯಲ್ಲಿ ನ್ಯಾಯಮೂರ್ತಿ ಹೆಗ್ಡೆಯವರು ಇನ್ನೂ ಹೆಚ್ಚಿನ ದಕ್ಷತೆಯಿಂದ ಕಾರ್ಯ ನಿರ್ವಹಿಸಲಿ, ಭ್ರಷ್ಟಾಚಾರವನ್ನು ಬಗ್ಗುಬಡಿಯುವುದರಲ್ಲಿ ಯಶಸ್ವಿಯಾಗಲಿ ಎಂದು ಹಾರೈಸೋಣ.

## ಉದಯೋನ್ಮುಖ ತಾರೆ ಸೈನಾ ನೆಹ್ವಾಲ್

**ಭಾ**ರತದ ಕ್ರೀಡಾರಂಗದ ಏಳುಬೀಳುಗಳು ಚಿತ್ರವಿಚಿತ್ರ, ಕ್ರಿಕೆಟ್ ಬರಬರುತ್ತಾ ತನ್ನ ಮೊದಲಿನ ಸ್ವರೂಪವನ್ನೇ ಕಳೆದುಕೊಂಡು ಒಂದು ಧಂಧೆಯಾಗಿಬಿಟ್ಟಿದೆ, ಜೂಜುಕಟ್ಟೆಯಾಗಿ ಪರಿವರ್ತನೆಗೊಂಡಿದೆ.

ಭಾರತದ ಆಟಗಾರರೂ ಸೇರಿದಂತೆ ವಿದೇಶೀ ಆಟಗಾರರೂ ಐ.ಪಿ.ಎಲ್.ನಂತಹ ಟೂರ್ನಮೆಂಟ್‌ಗಳಲ್ಲಿ ಹರಾಜಿನ ಸರಕುಗಳಾಗುತ್ತಿರುವ ಕಾಲ ಬಂದಿದೆ. ಹಿಂದೊಮ್ಮೆ ರೋಮ್ ಸಾಮ್ರಾಜ್ಯದಲ್ಲಿ, ಅಮೆರಿಕಾದಲ್ಲಿ ಬಿಳಿಯರು ಕರಿಯರನ್ನು ಹರಾಜಿನಲ್ಲಿ ಕೊಂಡುಕೊಂಡು ಗುಲಾಮಗಿರಿಯ ಕೂಪಕ್ಕೆ ತಳ್ಳುತ್ತಿದ್ದ ಕಾಲವೊಂದಿತ್ತು. ಇದೀಗ ಕ್ರಿಕೆಟ್‌ನ ಹೆಸರಿನಲ್ಲಿ ಜರುಗುತ್ತಿರುವ ಅಂತಹ ಅಸಹ್ಯಕರ ಪ್ರಕ್ರಿಯೆಯನ್ನು ನೋಡುವ ದೌರ್ಭಾಗ್ಯ ನಮ್ಮದು.

ಇನ್ನು ಅಂತರರಾಷ್ಟ್ರೀಯ ಬಯಲು ಕ್ರೀಡಾರಂಗದಲ್ಲಿ ನಮ್ಮ ದೇಶದ ಫುಟ್‌ಬಾಲ್, ಹಾಕಿ ಮತ್ತಿತರ ಕ್ರೀಡೆಗಳ ಸ್ಥಿತಿ ಹೀನಾಯ ಪರಿಸ್ಥಿತಿ ತಲುಪಿದೆ. ಇಂತಹ ಹಲವಾರು ನೇತ್ಯಾತ್ಮಕ ಬೆಳವಣಿಗೆಗಳ ನಡುವೆಯೂ ಬ್ಯಾಡ್ಮಿಂಟನ್ ಕ್ರೀಡೆಯಲ್ಲಿ ವಿಶ್ವದಲ್ಲೇ ಅಗ್ರಸ್ಥಾನ ಅಲಂಕರಿಸುವತ್ತ ದಾಪುಗಾಲು ಹಾಕುತ್ತಿದ್ದಾಳೆ ಹೈದರಾಬಾದ್‌ನ ಯುವ ಆಟಗಾರ್ತಿ ಸೈನಾ ನೆಹ್ವಾಲ್. ಈಗ ಈಕೆ ವಿಶ್ವದ ನಂ. ೨ನೇ ಬ್ಯಾಡ್ಮಿಂಟನ್ ಪಟು. ಇಂಡಿಯನ್ ಗ್ರ್ಯಾನ್ ಪ್ರೀ ಮತ್ತು ಸಿಂಗಾಪೂರ್ ಓಪನ್ ಸೂಪರ್ ಟೂರ್ನಮೆಂಟ್‌ಗಳಲ್ಲಿ ಅದ್ಭುತ ಪ್ರದರ್ಶನ ನೀಡಿದ ಸೈನಾ ವಿಶ್ವದ ನಂ. ೩ನೇ ಆಟಗಾರ್ತಿ ಪಟ್ಟಕ್ಕೇರಿದ್ದು ಪ್ರಚಂಡ ಸಾಧನೆ ಎನಿಸಿಕೊಂಡಿತು. ಅದಾದ ಕೆಲವೇ ದಿನಗಳಲ್ಲಿ ಜರುಗಿದ ಇಂಡೋನೇಶ್ಯಾದ ಓಪನ್ ಟೂರ್ನಿಯಲ್ಲಿ ಗೆದ್ದು ವಿಶ್ವದ ನಂ. ೧ ಚೀಣಾದ ಯಹಾನ್ ವಾಂಗ್‌ಗಿಂತ ಕೆಲವೇ ಪಾಯಿಂಟ್‌ಗಳಿಂದ ಹಿಂದಿದ್ದಾಳೆ. ಈ ಯುವತಿಯ ಅದ್ಭುತ ಪ್ರದರ್ಶನ ೧೯೮೦-೮೩ರ ಅವಧಿಯಲ್ಲಿ ವಿಶ್ವದ ನಂ. ೧ ಆಟಗಾರನಾಗಿ ಮೆರೆದ ಪ್ರಕಾಶ್ ಪಡುಕೋಣೆಯ ಮಹತ್ಸಾಧನೆಯನ್ನು ನೆನಪಿಸುತ್ತದೆ. ಸಣ್ಣ ಹುಡುಗಿಯಾಗಿದ್ದಾಗಲೇ ಈ ಸೈನಾಗೆ ಇದ್ದ ಪ್ರತಿಭೆಯನ್ನು ಗುರುತಿಸಿ ಈಕೆಯನ್ನು ವಿಶ್ವ ಮಟ್ಟದ ತಾರೆಯನ್ನಾಗಿ ರೂಪಿಸಿದ್ದು ಅವಳ ಗುರು ಮಹಮ್ಮದ್ ಅರಿಫ್. ಆನಂತರ ಮಾರ್ಗದರ್ಶನ ನೀಡಿದ್ದು ಇಸವಿ ೨೦೦೦ದಲ್ಲಿ ಜರುಗಿದ ಆಲ್ ಇಂಗ್ಲೆಂಡ್ ಟೂರ್ನಿಯಲ್ಲಿ ಅಗ್ರಸ್ಥಾನ ಪಡೆದ ಪುಲ್ಲಾಲ ಗೋಪಿಚಂದ್. ಅನುಪಮ ನಿಷ್ಠೆ, ನಿರಂತರ ಅಭ್ಯಾಸ, ಎಡೆಬಿಡದ ಛಲ ಈಕೆಯ ಬೆನ್ನೆಲುಬು.

ಮುಂದಿನ ತಿಂಗಳು ಜರುಗಲಿರುವ ವಿಶ್ವ ಬ್ಯಾಡ್ಮಿಂಟನ್ ಚಾಂಪಿಯನ್‌ಶಿಪ್ ಮತ್ತು ಆನಂತರದ ಕಾಮನ್‌ವೆಲ್ತ್ ಕ್ರೀಡೆಗಳಲ್ಲಿ ಸಹ ಸೈನಾ ನೆಹ್ವಾಲ್ ತನ್ನ ಅದ್ಭುತ ಪ್ರತಿಭೆ ಮೆರೆದು ವಿಶ್ವದ ನಂ. ೧ ಪಟ್ಟವನ್ನು ತನ್ನದಾಗಿಸಿಕೊಳ್ಳಬೇಕೆಂಬುದು ಎಲ್ಲ ಕ್ರೀಡಾಭಿಮಾನಿಗಳ ಆಶಯ.

## ಯುರುಗ್ವಾಯ್‌ನ ಪಾಪಿ ಸ್ವಾರೆಜ್

**ಅ**ಸೋಸಿಯೇಟೆಡ್ ಫ್ರೀ ಪ್ರೆಸ್ ಎಂಬ ವಾರ್ತಾಸಂಸ್ಥೆಯೊಂದಿದೆ. ಅದು ಸಿದ್ಧಗೊಳಿಸಿ ಹಂಚುವ ವಾರ್ತಾತುಣುಕು ಹಾಗೂ ವ್ಯಾಖ್ಯೆಗಳನ್ನು ಹಲವು ಪತ್ರಿಕೆಗಳು ಬಿತ್ತರಿಸುತ್ತವೆ. ಎಎಫ್‌ಪಿ ವಾರ್ತೆಗಳು ಬಹುತೇಕ ಬೊಗಳೆ; ಸಮಾಜವಾದಿ ಹಾಗೂ ಅಭಿವೃದ್ಧಿನಿರತ ದೇಶಗಳ ವಿರುದ್ಧದ ಪೂರ್ವಗ್ರಹಗಳ ಪ್ರಚಾರವೇ ಅದರ ಮುಖ್ಯೋದ್ದೇಶ. ನಮ್ಮ ಮೌಲ್ಯರಹಿತ ಮಾಧ್ಯಮಗಳು ಎಎಫ್‌ಪಿಯ 'ವಾರ್ತೆ'ಗಳನ್ನು ಎಂದೂ ಪರಿಶೀಲಿಸದೆ ಮುದ್ರಿಸಿಹಾಕುತ್ತವೆ. ಉದಾಹರಣೆಗೆ, ಹಿಂದೆ ಜರ್ಮನ್ ಪ್ರಜಾಪ್ರಭುತ್ವವಾದಿ ಗಣರಾಜ್ಯದ ಈಜುಗಾರರು ಒಲಿಂಪಿಕ್ಸ್‌ನಲ್ಲಿ ಪದಕ ಪಡೆದಾಗೆಲ್ಲಾ ಎಎಫ್‌ಪಿ ಹೇಳುತ್ತಿದ್ದುದು: ಪದಕ ಪಡೆಯದೆ ಹಿಂದಿರುಗಿದರೆ ಈಜುಗಾರರನ್ನು ಸರ್ಕಾರವು ಜೈಲಿಗೆ ಕಳಿಸುತ್ತದೆ; ತರಬೇತಿ ಸಮಯದಲ್ಲಿ ಬಂದೂಕು ಹಿಡಿದ ಸೈನಿಕರು ಈಜುಗಾರರ ಹಿಂದೆಯೇ ಇರುತ್ತಾರೆ, ಸ್ವಲ್ಪ ವಿಮನಸ್ಕರಾದರೂ ಅವರನ್ನು ಚುಚ್ಚುತ್ತಾರೆ; ಈಜುಗಾರರಿಗೆ ಗುಳಿಗೆಗಳನ್ನು ತಿನ್ನಿಸಿ ಕೃತ್ರಿಮವಾಗಿ ಅವರ ಶಕ್ತಿಯನ್ನು ಹೆಚ್ಚಿಸಲಾಗುತ್ತದೆ, ಇತ್ಯಾದಿ. ಹಾಗೆಯೇ

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಅಭ್ಯಾಸವಾಗಿಹೋಗಿದೆ, ಇನ್ನೇಕೆ ಅವರ ಚಿಂತೆ, ಎಂಬ ಹೀನ ಧೋರಣೆಯ ಸೂಚನೆ ಇದು. ಸರ್ಕಾರಕ್ಕಂತೂ ಮಾನವೀಯತೆ ಲವಲೇಶವೂ ಉಳಿದಿಲ್ಲ, ಎಲ್ಲಾ ಸುಳ್ಳು, ತಟವಟ, ಅಸಡ್ಡೆ. ಒಂದಷ್ಟು ಮಂತ್ರಿಗಳು ಭೋಪಾಲ್ ದುರಂತದ ಹಿಂದು-ಮುಂದುಗಳ ತನಿಖೆ ನಡೆಸಿ ವರದಿ ಕೊಡಲು ಆದೇಶಿತರಾಗಿದ್ದರು. ಅವರ ಒಂದು ಸಭೆಯಲ್ಲಿ ನಮ್ಮ ವಿದೇಶಾಂಗ ಸಚಿವಾಲಯದ ಪ್ರತಿನಿಧಿ ಹೇಳಿದರಂತೆ, ತಮ್ಮಲ್ಲಿ ಕಾರ್ಬೈಡ್ ದುರುಳ ಆ್ಯಂಡರ್‌ಸನ್ ಭಾರತಕ್ಕೆ ಬಂದು ಹೋದುದಕ್ಕೆ ದಾಖಲೆಯೇನೂ ಇಲ್ಲ, ಎಂದು. ಆ ಸಚಿವಾಲಯದ ಪ್ರಕಾರ ಅವನು ಬರಲೂ ಇಲ್ಲ, ಹೋಗಲೂ ಇಲ್ಲ; ಹಾಗಿರುವಾಗ ಅವನನ್ನು ಬಂಧಿಸಿದ್ದು, ಬಿಟ್ಟಿದ್ದು, ತನ್ನೂರಿಗೆ ಕ್ಷೇಮವಾಗಿ ತಲುಪುವಂತೆ ಏರ್ಪಾಟು ಮಾಡಿದ್ದು, ಎಲ್ಲಾ ಹೇಗಿರಲು ಸಾಧ್ಯ! ನಮ್ಮ ಕಾರ್ಪೊರೇಷನ್, ಬಿಡಿಎ, ವಿಧಾನಸೌಧ, ಮುಂತಾದ ಕಚೇರಿಗಳಲ್ಲಿ ಕಡತಗಳು ಆಗಾಗ್ಗೆ ಮಾಯವಾಗುತ್ತವೆ; ಲಂಚ ಕೊಟ್ಟಾಗ ಪ್ರತ್ಯಕ್ಷವಾಗುತ್ತವೆ; ಇನ್ನೂ ಹೆಚ್ಚು ಚಿತ್ರಾನ್ನ ತಿನ್ನಿಸಿದರೆ ಕಡತವನ್ನು ನಿರ್ನಾಮ ಮಾಡಲು ಸಿದ್ಧರಿರುತ್ತಾರೆ, ಎಂದೆಲ್ಲಾ ಕೇಳಿದ್ದೇವೆ. ಆ್ಯಂಡರ್‌ಸನ್ ಕಡತ ಮಾಯವಾಗಲು ಯಾರು ಎಷ್ಟು ನಿಧಿ ಪಡೆದರು? ಹೋಗಲಿ, ರಾಜೀವ ಗಾಂಧಿ ನಮ್ಮ ದೇಶದ ಪ್ರಧಾನಿಯಾಗಿದ್ದರು ಎಂಬುದಕ್ಕಾದರೂ ವಿದೇಶಾಂಗ ಸಚಿವಾಲಯದಲ್ಲಿ ದಾಖಲೆಗಳುಂಟೊ ಅಥವಾ ಆ ಸಂಬಂಧದ ಕಡತವೂ ಮಂಗಮಾಯವಾಗಿದೆಯೊ? ಅಮೆರಿಕಾಕ್ಕೆ ಭಂಟರಾಗುವುದಕ್ಕೆ ವಿದೇಶಾಂಗ ಸಚಿವಾಲಯದ ಅಧಿಕಾರಿಗಳು ಬೇರೆಲ್ಲರಿಗಿಂತಲೂ ಹೆಚ್ಚು 'ಅರ್ಹತೆ' ಹೊಂದಿದ್ದಾರೆಂದರ್ಥ.

* * *

**ನ**ಮ್ಮ ನ್ಯಾಯಾಂಗದ ವರಿಷ್ಠರಿಗೆ ಎಂತೆಂತಹ ನಿಗೂಢವಾದ ಸತ್ಯಗಳೆಲ್ಲಾ ತಿಳಿದಿವೆಯೆಂಬುದರ ಅರಿವು ಹುಲು ಮಾನವರಿಗೆ ದೊರೆಯಲು ಸಾಧ್ಯವಿಲ್ಲವಂತೆ. 'ನ್ಯಾಯಯುತವಾಗಿ' ಎಷ್ಟು ದೊಡ್ಡದೊಡ್ಡ ಮಾಲೀಕರು ಎಂತೆಂತಹ 'ರಕ್ಷಣೆ' ಮತ್ತು 'ನ್ಯಾಯ' ಪಡೆಯುತ್ತಿದ್ದಾರೆ ಎಂಬುದರ ಯಾದಿ ತಯಾರಿಸಿದರೆ ಅನೇಕ ಅದ್ಭುತಗಳು ಹೊರಬಂದಾವು. ಇತ್ತೀಚೆಗಿನ ಒಂದು ಅನುಭವ ಮೈನವಿರೇಳಿಸುವಂಥದು. ಬಹುಶಃ ಯಾವ ಉದ್ಯಮಿ, ಅರ್ಥಶಾಸ್ತ್ರಜ್ಞ, ಪರಿಸರವಾದಿ, ಸಾಮಾಜಿಕ ಹೋರಾಟಗಾರರಿಗೂ ತಿಳಿದಿರಲಾಗದಂತಹ ವಿಶೇಷ ಜ್ಞಾನ ಸರ್ವೋಚ್ಚನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರೊಬ್ಬರಿಂದ ದಕ್ಕಿದ್ದು ನಮ್ಮ ಸೌಭಾಗ್ಯ! ಏನದು ಅಂತಹ ಗಹನವಾದ ತಿಳುವಳಿಕೆ?

ಒರಿಸ್ಸಾ, ಕರ್ನಾಟಕ, ಛತ್ತೀಸಗಢ, ಅಸ್ಸಾಂ, ಮುಂತಾದ ರಾಜ್ಯಗಳಲ್ಲಿ ಕಬ್ಬಿಣದ ಅದಿರು, ಬಾಕ್ಸೈಟ್, ಮ್ಯಾಂಗನೀಸ್, ಯುರೇನಿಯಂ, ಮುಂತಾದ ಖನಿಜಗಳನ್ನು ಭೂಗರ್ಭದಿಂದ ಹೊರತೆಗೆದು ಅವನ್ನು ಮಾರುವುದು ಇಲ್ಲವೆ ಮೌಲ್ಯವರ್ಧನೆ ಮಾಡಲು ಬಳಸುವುದು ಎಲ್ಲರಿಗೂ ಗೊತ್ತು. ಅದರಲ್ಲಿರುವ ಅವ್ಯವಹಾರಗಳು ಮನೆಮಾತಾಗಿವೆ. ವಿಧಾನಸೌಧದಲ್ಲಿ ಇರುವ ಶಾಸನಸಭೆಯ ಆವರಣದಲ್ಲಿ ಅಂತಹ ಒಂದು ಹಗರಣ ಕುರಿತಂತೆ ಶಾಸಕರು ಕೈಕೈ ಮಿಲಾಯಿಸಲು ಉತ್ಸುಕತೆಯನ್ನೂ ತೋರಿದ್ದಾರೆ. ಒರಿಸ್ಸಾದಲ್ಲಿ ಪಾಸ್ಕೋ ಕಂಪೆನಿಯ ಪರವಾಗಿ ಪೊಲೀಸರು ಪ್ರತಿಭಟನಕಾರರನ್ನು ಚೆನ್ನಾಗಿ ಥಳಿಸಿದ್ದಾರೆ. ಇದೆಲ್ಲದರ ಹಿನ್ನೆಲೆಯಲ್ಲಿ ಒಬ್ಬ ನ್ಯಾಯಾಧೀಶರು ಕಂಡುಕೊಂಡ ಸತ್ಯವೇನೆಂದರೆ ಖನಿಜಗಳನ್ನು ಹೊರತೆಗೆಯುವುದಕ್ಕೆ ಅಡ್ಡಿಯುಂಟು ಮಾಡಿರುವವರೆಲ್ಲಾ ಶುದ್ಧ ಅಜ್ಞಾನಿಗಳು ಎಂದು. ಹಾಗಾದರೆ ಜ್ಞಾನ ಯಾವುದು? ಉತ್ತರ ಇಲ್ಲಿದೆ: ಭೂಗರ್ಭದಲ್ಲಿರುವ ಖನಿಜಗಳ ಬಾಳುವಿಕೆ ಮತ್ತು ಉಪಯುಕ್ತತೆ ಬಹಳ ಸೀಮಿತವಾದ್ದು; ಆದ್ದರಿಂದ ಇಂದೇ ಅವನ್ನು ಬಳಸಿಕೊಳ್ಳದಿದ್ದರೆ ನಾಳೆ ಅವು ಬೆಲೆಯಿಲ್ಲದ ರದ್ದಿಯಾಗಿಬಿಡುತ್ತವೆ. ತಂತ್ರಜ್ಞಾನ ಸದಾ ಬೆಳೆಯುತ್ತಿರುವಾಗ ಯಾವ ಖನಿಜದ ಮೌಲ್ಯವೂ ಸ್ಥಿರವಲ್ಲ, ಇಂದಿನ ತಂತ್ರಜ್ಞಾನದ ನಂತರ ಈ ಖನಿಜ ಬೇಕಾಗದೆ ಹೋಗುತ್ತದೆ, ಏಕೆಂದರೆ ಉಕ್ಕು 'ಔಟ್‌ಡೇಟೆಡ್' ಆಗಿಬಿಟ್ಟು ಬೇರಾವುದೋ ಅದರ ಜಾಗಕ್ಕೆ ಬಂದುಬಿಡುತ್ತದೆ. ಆಗ ಈ ಖನಿಜವನ್ನೇನು ಮಾಡುವುದು! ಆದ್ದರಿಂದ ಎಲ್ಲವನ್ನೂ ಹೊರತೆಗೆದು ಬಳಸುವುದು ಸೂಕ್ತ ಮತ್ತು ಸಾಧುವಾದ ಕ್ರಮ.

ಆಶ್ಚರ್ಯವೆನಿಸುತ್ತದೆಯೆ? ಮಾನ್ಯ ಯಡಿಯೂರಪ್ಪನವರ ಪೋಷಕರಾದ ರೆಡ್ಡಿ ಸಹೋದರರನ್ನು ಕಾನೂನು ಬಾಹಿರ ಗಣಿಗಾರಿಕೆ ಮಾಡುತ್ತಾರೆಂದು ದೂಷಿಸುವುದು ಎಷ್ಟು ಅಸಮಂಜಸ, ಅಲ್ಲವೆ?

* * *

**ನ**ಮ್ಮ ('ಮುಖ್ಯವಾಹಿನಿ') ಮಾಧ್ಯಮಗಳಿಗೆ ಆಗ್ರಾ ಬಳಿಯಿರುವ ಉಧನ್‌ಪುರಕ್ಕೆ ಹೋಗಲು ಪುರುಸೊತ್ತಿಲ್ಲವಾದ್ದರಿಂದ ಆ ಪುಟ್ಟ ಗ್ರಾಮದಲ್ಲಿ ಈಚೆಗೆ ಘಟಿಸಿದ ಭೀಕರ ಪಾತಕವು ಸಾರ್ವಜನಿಕರ ಗಮನಕ್ಕೆ ಬಂದಿಲ್ಲ. ಮಾನವೀಯ ಅಂತಃಕರಣವಿರುವ ಒಬ್ಬ 'ಹೊಸತು' ಬೆಂಬಲಿಗ ದೆಹಲಿಯಿಂದ ಆ ಊರಿಗೆ ಹೋಗಿ ಅಲ್ಲಿಯ ತಲ್ಲಣಗಳ ಮಾಹಿತಿಯನ್ನು ನೀಡಿದ್ದಾನೆ: ಆ ಊರಿನ ಬಹುಮಂದಿ ಬ್ರಾಹ್ಮಣ ಜಾತಿಯವರು. ಯಾವುದೋ ಒಂದು ಕುಟುಂಬದ ಹಿರಿಯನೊಬ್ಬನ ಮೇಲೆ ಎಂಥದೋ ಅಪಾದನೆ ಇತ್ತು. ಅದರ ತನಿಖೆಗಾಗಿ ಒಬ್ಬ ಪೊಲೀಸ್ ಅಧಿಕಾರಿ ಅವನ ಮನೆಗೆ ಹೋದ. ಅದೂ ರಾತ್ರಿಯ ವೇಳೆ. ಮನೆಯಲ್ಲಿ ತನಿಖೆ ನಡೆಸುತ್ತಿದ್ದಾಗ ಮನೆ ಯಜಮಾನನ ಸೊಸೆ ಅವಳ ಮಾವನ ಸನಿಹದಲ್ಲಿ ಇರಲೆಂದು ಹೊರಗೆ ಬಂದಳು. ಅಲ್ಲಿಗೆ ತನಿಖೆ ಮುಕ್ತಾಯ. ಪೊಲೀಸಪ್ಪ ಅವಳನ್ನು ಬರಸೆಳೆದ. ಮುಂದಿನ ಒಂದೆರಡು ಕ್ರಿಯೆಗಳನ್ನು ನಾವೇ ಊಹಿಸಿಕೊಳ್ಳೋಣ. ಸಹಜವಾಗಿಯೇ ಆಕೆಯ ಮಾವ ಕೂಗಿಕೊಂಡ. ಮನೆಯವರೆಲ್ಲಾ ಕಕ್ಕಾಬಿಕ್ಕಿಯಾದರು. ಚಿಕ್ಕ ಊರು, ಅಕ್ಕಪಕ್ಕದ ಜನ ಓಡಿಬಂದರು. ಅವರು ಕಂಡ ದೃಶ್ಯ ಅವರನ್ನು ಕೆರಳಿಸಿತು. ಸೊಸೆಯನ್ನು ಬಿಡಿಸಿ ಹೊರಗೆ ಕಳಿಸಿದರು, ಮನೆಯವರನ್ನೆಲ್ಲ ಅವಳೊಟ್ಟಿಗೆ ಹೊರ ಹೋಗುವಂತೆ ಮಾಡಿದರು, ಪೊಲೀಸ್ ಅಧಿಕಾರಿಯನ್ನು ಮನೆಯಲ್ಲಿ ಕೂಡಿಹಾಕಿದರು. ಮಾರನೆಯ ಬೆಳಗ್ಗೆ ಆಗ್ರಾದ ಪೊಲೀಸ್ ಉನ್ನತಾಧಿಕಾರಿಗೆ ದೂರಿತ್ತರು, ಆತನನ್ನು ಕರೆತಂದರು. ಅವನು ಪೊಲೀಸಿನವನನ್ನು ಮನೆಯಿಂದ ಹೊರತಂದು ಆಗ್ರಾಕ್ಕೆ ಕೊಂಡೊಯ್ದ. ಅದರ ಮುಂದಿನ ದಿನ ಐವತ್ತು ಮಂದಿ ಪೊಲೀಸರು ಉಧನ್‌ಪುರಕ್ಕೆ ಧಾಳಿಯಿಟ್ಟರು, ಎಲ್ಲ ಮನೆಗಳನ್ನೂ ಧ್ವಂಸ ಮಾಡಿದರು, ಸಾಮಾನುಗಳನ್ನು ಪುಡಿಗೈದರು, ಜನರನ್ನು ಚೆನ್ನಾಗಿ ಚಚ್ಚಿದರು, ಹೀನವಾಗಿ ಬೈದರು, ಒದ್ದರು. ಹೀಗೆ ಪ್ರತಾಪ ಮೆರೆದು ಹಿಂದಿರುಗುವ ವೇಳೆಗೆ ಊರಿನವರಿಗೆ ಬಿದ್ದಿದ್ದ ಏಟುಗಳು, ಮಹಿಳೆಯರ ಮಾನಹಾನಿ, ಯಾವುದೂ ಮಿತಿಯಲ್ಲಿರಲಿಲ್ಲ. ಚಿಕ್ಕ ಹಳ್ಳಿ, ಬಡತನದ ಜನ, ಆಸ್ತಿಯೇ ಕಮ್ಮಿ. ಸುಮಾರು ಒಂದು ಕೋಟಿ ರೂಪಾಯಿಯ ಆಸ್ತಿ ನಾಶವಾಗಿರಬಹುದೆನ್ನುತ್ತಾರೆ. ಜನಕ್ಕೇನೂ ಉಳಿದಿಲ್ಲ; ಮನೆ, ಆಹಾರಧಾನ್ಯ, ತೊಡುವ ಬಟ್ಟೆ, ಮಕ್ಕಳ ಪುಸ್ತಕಗಳು, ಎಲ್ಲಾ ಬೆಂಕಿಗೆ ಬಿತ್ತು. ಇಷ್ಟೆಲ್ಲಾ ಆದಮೇಲೆ ಇನ್ನಾರಿಗೆ ದೂರು ಕೊಡಬೇಕು! ಎಲ್ಲ ಜಾತಿಯ ಜನರಿಗೂ ಏಕಪ್ರಕಾರವಾಗಿ ಹೊಡೆತ ಬಿದ್ದಿತೆಂಬುದರಲ್ಲಿ ಪೊಲೀಸರು ಸಮಾನತೆಯನ್ನು ಗೌರವಿಸುತ್ತಾರೆಂಬುದು ವೇದ್ಯವಾಗಿದೆ. ಊರಿನ ೮೦ ಮಂದಿಯನ್ನು ಜೈಲಿನಲ್ಲಿಟ್ಟಿದ್ದಾರಂತೆ. ಇದು ನಮ್ಮ ದೇಶದ ಸಂಸ್ಕೃತಿಯ ಒಂದು ಮುಖ. ಪೊಲೀಸ್ ಉನ್ನತಾಧಿಕಾರಿಯ ಬಳಿ ಹೋದದ್ದೇ ತಪ್ಪೋ, ದುರುಳ ಪೊಲೀಸಪ್ಪನೊಬ್ಬನನ್ನು ಕೂಡಿಹಾಕಿದ್ದು ತಪ್ಪೋ, ಅಥವಾ ಸೊಸೆಯ ಮಾವ ಕೂಗಿಕೊಂಡದ್ದು ತಪ್ಪೋ? ಮಹಿಳೆಯರ ಬಗ್ಗೆ ''ಅತಿಸಂಸ್ಕೃತ'' ಮನಸ್ಸಿರುವ ಡಾ|| ಭೈರಪ್ಪ ಮತ್ತು ಅವರ ಬಳಗ ತಿಳಿಸಿಕೊಡಬೇಕು!

* * *

'**ಆ**ರೋಗ್ಯ ಕವಚ' ಎಂಬ ಯೋಜನೆಯಡಿ ೧೦೮ ಆಂಬ್ಯುಲನ್ಸ್‌ಗಳು ನಮ್ಮ ರಾಜ್ಯದಲ್ಲಿ ಹಲವಾರು ಕಡೆ ನಿಬಿಡ ಪ್ರದೇಶಗಳಲ್ಲಿ, ಹೆದ್ದಾರಿಗಳಲ್ಲಿ ಅವಘಡಕ್ಕೀಡಾದವರಿಗೆ ತುರ್ತುಚಿಕಿತ್ಸೆ ಒದಗಿಸುವಲ್ಲಿ, ಹತ್ತಿರದ ಆಸ್ಪತ್ರೆಗೆ ಕೊಂಡೊಯ್ಯುವಲ್ಲಿ ಶ್ಲಾಘನೀಯ ಸೇವೆ ಸಲ್ಲಿಸುತ್ತಿವೆ ಎಂಬ ವರದಿ ಇದೆ. ನಂ. ೧೦೮ಕ್ಕೆ ಫೋನ್ ಮಾಡಿದರೆ ಸಾಕು, ಹತ್ತಾರು ನಿಮಿಷಗಳಲ್ಲಿ ಆಂಬ್ಯುಲನ್ಸ್‌ಗಳು ಅವಘಡ ಸಂಭವಿಸಿರುವ ಸ್ಥಳಕ್ಕೆ ಧಾವಿಸಿ ಬರುತ್ತವೆ. ಇಂತಹ ಜನಪ್ರಿಯ ಸೇವೆಯಲ್ಲಿ ತೊಡಗಿಕೊಂಡಿರುವ ಸಿಬ್ಬಂದಿವರ್ಗ ನಿಜಕ್ಕೂ ಅಭಿನಂದನಾರ್ಹರು. ಈ ಯೋಜನೆಯ ಖರ್ಚು ಭರಿಸಲು ರಾಜ್ಯ ಸರ್ಕಾರದೊಂದಿಗೆ ಕೇಂದ್ರವೂ ಕೈಜೋಡಿಸಿದೆ.

ಆದರೆ ಇಂತಹ ಒಂದು ಜನೋಪಯೋಗಿ ಯೋಜನೆಯೂ ಕ್ಷುಲ್ಲಕ ರಾಜಕಾರಣಿಗಳ ಪಗಡೆ ಆಟಕ್ಕೆ ದಾಳವಾಗಿ ಪರಿಣಮಿಸಿರುವುದು ದುರದೃಷ್ಟಕರ ಸಂಗತಿ. ಇದೇ ಜುಲೈ ೮ರಂದು ಜರುಗಿದ ವಿಧಾನಸಭೆ ಅಧಿವೇಶನದಲ್ಲಿ ಈ ಆ್ಯಂಬುಲನ್ಸ್‌ಗಳ ಮೇಲೆ ಮುಖ್ಯಮಂತ್ರಿ ಯಡಿಯೂರಪ್ಪ ಮತ್ತು ಸಚಿವ ಶ್ರೀರಾಮುಲು ಅವರ ಭಾವಚಿತ್ರಗಳಿರುವುದು ಕಾಂಗ್ರೆಸ್ ಸದಸ್ಯರ ತೀವ್ರ ಟೀಕೆಗೆ ಗುರಿಯಾಯಿತು. ಈ ಯೋಜನೆಗೆ ಕೇಂದ್ರ ಸರ್ಕಾರವೂ ಅನುದಾನ ನೀಡಿರುವ ಹಿನ್ನೆಲೆಯಲ್ಲಿ ಪ್ರಧಾನಿಯವರ ಭಾವಚಿತ್ರವನ್ನೂ ಪ್ರದರ್ಶಿಸಲೇಬೇಕು ಎಂಬುದು ಕಾಂಗ್ರೆಸ್ ಶಾಸಕರ ವಾದ.

ಯಃಕಶ್ಚಿತ್ ತಮ್ಮ ಹುಟ್ಟುಹಬ್ಬದ ದಿನಾಚರಣೆ, ಅರವತ್ತೊ, ಎಪ್ಪತ್ತೋ ತುಂಬಿದ ಸಂದರ್ಭ, ಒಂದು ಪಕ್ಷದಿಂದ ಇನ್ನೊಂದು ಪಕ್ಷಕ್ಕೆ ಹಾರಿದ ಸಂದರ್ಭದಲ್ಲಿ ತೆಗೆಸಿಕೊಂಡ ಗುಂಪು ಛಾಯಾಚಿತ್ರ – ಇವುಗಳನ್ನು ಕುರಿತ ಫ್ಲೆಕ್ಸ್, ಬ್ಯಾನರ್‌ಗಳನ್ನು ನಗರದ ಬೀದಿಬೀದಿಗಳಲ್ಲಿ, ಗಲ್ಲಿಗಲ್ಲಿಗಳಲ್ಲಿ ನೇತುಹಾಕಿಸಿ ವಿಜೃಂಭಿಸುವ ಈ ಭ್ರಷ್ಟ

ರಾಜಕಾರಣಿಗಳ ಪ್ರಚಾರದ ಗೀಳು ಅಸಹ್ಯಕರ ಮಟ್ಟ ತಲುಪುತ್ತಿರುವುದು ದುರದೃಷ್ಟಕರ. ಅವಘಡಕ್ಕೀಡಾಗಿ ಕೈಕಾಲು ಮುರಿದುಕೊಂಡಿರುವವರನ್ನು ತುರ್ತಾಗಿ ಹತ್ತಿರದ ಆಸ್ಪತ್ರೆಯೊಂದಕ್ಕೆ ಸಾಗಿಸುವ ವಾಹನಗಳ ಮೇಲೂ ತಮ್ಮ ಭಾವಚಿತ್ರಗಳಿರಬೇಕು ಎಂದು ಹಪಿಹಪಿಸುವ, ಶಾಸನ ಸಭೆಯಲ್ಲಿ ಗುದ್ದಾಡುವ ಇಂತಹ ಶಾಸಕರು ಚುನಾಯಿತರಾಗಿರುವುದು ಇಂದಿನ ನಮ್ಮ ರಾಜಕಾರಣದ ದುರವಸ್ಥೆಗೆ ಕನ್ನಡ ಹಿಡಿಯುವಂತಿದೆ. ಮುಂದಿನ ದಿನಗಳಲ್ಲಿ ಮೃತದೇಹಗಳನ್ನು ಸ್ಮಶಾನಕ್ಕೊಯ್ಯುವ ಬಿ.ಬಿ.ಎಂ.ಪಿ. ಶವ ವಾಹನಗಳ ಮೇಲೂ ಯಡಿಯೂರಪ್ಪ ಮತ್ತು ಸಹ ಸಚಿವರ ಭಾವಚಿತ್ರಗಳು ವಿಜೃಂಭಿಸಿದರೆ ಆಶ್ಚರ್ಯವಿಲ್ಲ.

* * *

'ಕೈಲಾಗದವನು ಮೈಪರಚಿಕೊಂಡ' ಎಂಬ ನಾಣ್ನುಡಿಯೊಂದಿದೆ. ಮುಖ್ಯಮಂತ್ರಿ ಯಡಿಯೂರಪ್ಪನವರ ಸ್ಥಿತಿ ಹಾಗೇ ಆಗಿದೆ. ಕುರ್ಚಿ ಭದ್ರಪಡಿಸಿಕೊಳ್ಳಲು ಶಾಸಕರಿಗೆ ಆಮಿಷ ಒಡ್ಡಿ ತಮ್ಮ ಕಡೆಗೆ ಎಳೆದುಕೊಳ್ಳಲು ಗಣಿಧಣಿಗಳ ಮೊರೆಹೊಕ್ಕರು. ಇದರಿಂದ ಗಣಿಧಣಿಗಳ ಬಲೆಯಲ್ಲಿ ಸಿಕ್ಕಿಕೊಂಡಿರುವ ಇವರಿಗೆ ಮುಕ್ತಿಯೇ ಇಲ್ಲ, ಏಕೆಂದರೆ, ಈ ರೆಡ್ಡಿ ಸೋದರರಿಗೆ ಭಾಜಪ ನಾಯಕಿ ಸುಷ್ಮಾ ಸ್ವರಾಜ್ ಅವರ ಆಶೀರ್ವಾದ ಇದೆ. ಅದಕ್ಕೇ ಬಿಕ್ಕಟ್ಟು ಉಲ್ಬಣಿಸಿದಾಗ ದೆಹಲಿಯಲ್ಲಿ ಯಡಿಯೂರಪ್ಪ ಅತ್ತಿದ್ದು. ಗಣಿಧಣಿಗಳು ಏನು ಮಾಡಲೂ ಹೇಸುವುದಿಲ್ಲ. ಮೊನ್ನೆ ವಿಧಾನಸಭೆಯಲ್ಲಿ ನಡೆದ ಲಟಾಪಟಿಯ ವಿವರಗಳನ್ನು ಗಮನಿಸಿದವರಿಗೆ ಇವೆಲ್ಲವೂ ತಿಳಿದಿರುವುದೇ. ''ಇನ್ನು ಮೇಲೆ ನಾನು ಕಣ್ಣೀರು ಹಾಕುವುದಿಲ್ಲ'' ಎಂದು ಯಡಿಯೂರಪ್ಪ 'ಸ್ವಾಭಿಮಾನಿ' ಸಮಾವೇಶದಲ್ಲಿ ಹೇಳಿಕೊಂಡರು. ಇದಕ್ಕೆ ಎರಡು ದಿನ ಮುಂಚೆ 'ಸಾಧನಾ' ಸಮಾವೇಶದಲ್ಲಿ ಅವರು ಮತ್ತೆ ಗಳಗಳನೆ ಅತ್ತಿದ್ದರು. ಏನೂ ಮಾಡಲಾಗಲಿಲ್ಲ ಎನ್ನುವ ರೀತಿಯಲ್ಲಿ ಕೈಕೈ ಹಿಸುಕಿಕೊಂಡರು. ಅವರು ಈ ರೀತಿ ಕಣ್ಣೀರು ಸುರಿಸಿದ್ದು ಇದೇ ಮೊದಲ ಬಾರಿಯಲ್ಲ. ಸಮ್ಮಿಶ್ರ ಸರಕಾರ ಮುಳುಗಿ ಸರಕಾರದ ಅಧಿಕಾರ ಕಳೆದುಕೊಂಡಾಗ ಬಿಕ್ಕಿಬಿಕ್ಕಿ ಅತ್ತದ್ದು ಓದುಗರಿಗೆ ನೆನಪಿರಬೇಕು. ಆಶ್ವಾಸನೆ ಕೊಟ್ಟು ಕೈಕೊಟ್ಟರಲ್ಲ ಎಂದು ಮರುಗಿದರು. ಅಳುಮೋರೆ ಹಾಕಿಕೊಂಡೇ ಅಧಿಕಾರಕ್ಕೇರಿದರು. ಗಣಿಧಣಿಗಳಿಗೆ ಶರಣಾದಾಗ ಮತ್ತೆ ದೆಹಲಿಯಲ್ಲಿ ಕಣ್ಣೀರು ಹರಿಸಿದರು. ಏನು ಪ್ರಯೋಜನ! ಅತ್ತುಕೊಂಡೇ ಕುರ್ಚಿಗೆ ಅಂಟಿಕೊಂಡಿರುವ ಇವರನ್ನೇನನ್ನಬೇಕು? ಅದಕ್ಕೇ ಹೇಳೋದು 'ಅಳೋ ಗಂಡಸನ್ನ ನಂಬಬೇಡ' ಎಂದು. ಅದು ಮಹಿಳೆಯರಿಗೂ ಅನ್ವಯಿಸುತ್ತದೆ. ●

---

*ಸಂಪಾದಕೀಯ (೫ನೇ ಪುಟದಿಂದ)*

ಕ್ಯೂಬಾದ ಮಾಜಿ ಅಧ್ಯಕ್ಷ ಕ್ಯಾಸ್ಟ್ರೋ ಕುರಿತು ದಿನಕ್ಕೊಂದು ಕತೆ ಹೊಸೆದು ಹಂಚುವುದು ಈ ವಾರ್ತಾಸಂಸ್ಥೆಯ ಕೆಲಸವಾಗಿರುತ್ತಿತ್ತು. ಈ ಸಂಸ್ಥೆಗೆ ಅಮೆರಿಕಾದ ಬೇಹುಗಾರಿಕೆ ಸಂಸ್ಥೆ ಸಿಐಎಯಿಂದ ಹಣ ಸರಬರಾಜಾಗುತ್ತದೆಂದು ಹೇಳುತ್ತಾರೆ. ಮೂರ್ಖರು ಮಾತ್ರ ಈ ಸಂಸ್ಥೆಯ 'ವಾರ್ತೆ'ಗಳನ್ನು ಪರಾಮರ್ಶಿಸದೆ ಸ್ವೀಕರಿಸುತ್ತಾರೆ.

ಇತ್ತೀಚೆಗೆ ವಿಶ್ವ ಕಪ್ ಫುಟ್‌ಬಾಲ್ ಪಂದ್ಯಗಳು ದಕ್ಷಿಣ ಆಫ್ರಿಕಾದಲ್ಲಿ ಮುಗಿದುವು. ಅಂತಿಮ ಪಂದ್ಯದಲ್ಲಿ ಯಾರು ಗೆದ್ದರೇನಂತೆ ಎಂಬ ಮನೋಭಾವ ನಮ್ಮಲ್ಲಿ ಹಲವರಲ್ಲಿದ್ದಿತು. ಕಡೆಗೆ ಸ್ಪೆಯಿನ್ ಗೆದ್ದಿತೆಂಬುದು ಇತಿಹಾಸ. ಆರಂಭಿಕ ಪಂದ್ಯಗಳಲ್ಲೇ ಚೆನ್ನಾಗಿ ಸೋತು ಮರಳಿದ ಒಂದು ತಂಡ ಉತ್ತರ ಕೊರಿಯಾದ್ದು. ಹಲವು ಬಾರಿ ಈ ಹಂತದಲ್ಲಿ ಆಡಲು ಅರ್ಹತೆ ಪಡೆದ ದೇಶ ಅದು. ಇಂತಹ ನಶ್ವರ ಸಾಧನೆಗಳಿಗೆ ವಿಮುಖವಾಗಿರುವ ನಮ್ಮ ಭಾರತ ಎಂದೂ ಅಂತಹ ಅರ್ಹತೆ ಪಡೆಯಲಿಲ್ಲ, ಅದು ಬೇರೆ ಮಾತು. ಉತ್ತರ ಕೊರಿಯಾ ಸೋತಾಗ ಎಎಫ್‌ಪಿ ಹೇಳಿದ್ದು ಹೀಗೆ: ''ಸೋತ ತಂಡದವರನ್ನು ಕಲ್ಲಿದ್ದಲು ಗಣಿಗಳಲ್ಲಿ ದುಡಿಯಲು ದೂಡುತ್ತಾರೆ.'' ಅಯ್ಯೋ ಪಾಪ, ಎಂತಹ ಸಾಂತ್ವನದ ಕಾಳಜಿ! ನೈಜೀರಿಯಾ ಸೋತಾಗ ಆ ತಂಡಕ್ಕೆ ಅಂತಹ ಶಿಕ್ಷೆ ಇಲ್ಲವಂತೆ; ಕೇವಲ ಪತ್ರಿಕೆಗಳ ಬೈಗುಳ ಕೇಳಿದರೆ ಮುಗಿಯಿತು ಅವರ ಪ್ರಾಯಶ್ಚಿತ್ತ ಕ್ರಿಯೆ! ಉತ್ತರ ಕೊರಿಯಾವನ್ನು ಹಿಂದೆಂದೋ ತೊರೆದು ಓಡಿಹೋದ ಮೂನ್ ಕಿ-ನಾಮ್ ಮೊದಲಿಗೆ ಆ ದೇಶದ ತಂಡಕ್ಕೆ ತರಬೇತುದಾರನಾಗಿದ್ದ. ಅವನ ಅಮೂಲ್ಯ ಹೇಳಿಕೆ ಇದು, ಕಲ್ಲಿದ್ದಲು ಗಣಿಯ ವಿಚಾರ. ನಿಜಕ್ಕೂ ನಡೆದಿದ್ದೇನು? ಸೋತ ತಂಡದ ಇಬ್ಬರು ಆಟಗಾರರನ್ನು ಯೂರೋಪಿನ ಎರಡು ಕ್ಲಬ್ಬುಗಳು ಕಾಂಟ್ರಾಕ್ಟ್ ಮೇಲೆ ತಮ್ಮ ತಂಡಗಳಿಗೆ ನೇಮಿಸಿಕೊಂಡವು. ಅದನ್ನು ಎಎಫ್‌ಪಿ ಹೇಳಲಿಲ್ಲ. ಅದಕ್ಕೆ ಕಲ್ಲಿದ್ದಲು ಗಣಿಯದೇ ಚಿಂತೆ. ಬಹುಶಃ ಅದರ ಪ್ರಕಾರ ಈ ವೇಳೆಗೆ ತಂಡದ ಆಟಗಾರರೆಲ್ಲಾ ಕಲ್ಲಿದ್ದಲು ಧೂಳಿನಲ್ಲಿ ಕಪ್ಪಾಗಿಹೋಗಿದ್ದಾರೆ. ಬೇಕೆನಿಸಿದರೆ ಅದಕ್ಕೆ ಕಣ್ಣೀರು ಸುರಿಸಬಹುದು! ಕಲ್ಲಿದ್ದಲು ಗಣಿಯಲ್ಲೇ ನೀವು ಚೆಂಡಾಡಿ ಎಂದು ಶಪಿಸಲೂಬಹುದು!

ಈ ಫುಟ್‌ಬಾಲ್ ಆಟದಲ್ಲಿ ಹೀರೋಗಳಾಗುವ ಪರಿಯೇ ವಿಲಕ್ಷಣವಾದ್ದು. ಯಾವನೋ ಗೋಲು ಬಾರಿಸುತ್ತಾನೆ. ಐದೋ ಆರೋ ಏಳೋ ಏನೋ; ಸರಿ, ಅವನು ಹೀರೊ. ಅದು ಅವನೊಬ್ಬನ ಪರಾಕ್ರಮವೆ? ಅವನ ಜೊತೆಯ ಐದಾರು ಜನರಿಲ್ಲದೆಯೆ ಅವನು ಗೋಲು ಹೊಡೆದನೆ? ಏಕಾಕಿಯಾಗಿ ಒಮ್ಮೆ ಒಂದು ಗೋಲು ಹೊಡೆದಿದ್ದವನು ಮರಡೋನಾ, ಈ ಬಾರಿ ಸೋತು ಮನೆಗೆ ಹೋದವ. ಜರ್ಮನಿಯ ಕ್ಲೋಸ್, ಹಾಲೆಂಡಿನ ಓಪನ್, ಸ್ಪೇನಿನ ಬಾಟಮ್, ಇಂಗ್ಲೆಂಡಿನ ಸೈಡ್, ಪೋರ್ಚುಗಲ್ಲಿನ ಅಬೋವ್, ಹೀಗೆ ಯಾರು ಎಷ್ಟು ಗೋಲು ಹೊಡೆದರೆಂದು ಲೆಕ್ಕವಿಟ್ಟು ಸಂಭ್ರಮಿಸುವ ಪದ್ಧತಿ ಇದೆ. ಹೀರೋಗಳೇ ಇತಿಹಾಸ ನಿರ್ಮಿಸಲಾರರು, ಅದನ್ನು ಮಾಡುವುದು ಜನಸಮುದಾಯ, ಎಂಬ ಮಾತಿಗೆ ಭಿನ್ನವಾಗಿ ಇಲ್ಲಿ ಹೀರೋಗಳದ್ದೇ ದಾಖಲೆ. ಟೋರೆಸ್‌ಗೆ ಸರಿಯಾದ ಜಾಗದಲ್ಲಿ ಮೋರೆಸ್ ಪಾಸ್ ಕೊಡದಿದ್ದರೆ ಟೋರೆಸ್ ಬೊಮ್ಮಡ ಬಾರಿಸಬೇಕು, ಅಷ್ಟೆ; ಅದರೆ ಗೋಲು ಹೊಡೆದರೆ ಅವನ ವೈಯಕ್ತಿಕ ಹೆಗ್ಗಳಿಕೆಯಾಗಿ ಬಿಡುತ್ತದೆ. ಚೆಸ್‌ನಲ್ಲಿರುವಂತೆ ಫುಟ್‌ಬಾಲ್‌ನಲ್ಲಿ ಅದು ಸಾಧ್ಯವಿಲ್ಲ. ಹೋಗಲಿ, ಗೋಲ್‌ಕೀಪರ್ ಅಷ್ಟೊಂದು ಗೋಲುಗಳನ್ನು ತಡೆಯುತ್ತಾನಲ್ಲ, ಅವನ ಸಾಧನೆಗೆ ದಾಖಲೆ ಇಲ್ಲ. ಹಾಗೇ ವಿರೋಧಿಗಳಿಗೆ ಕೋಟೆಯಂತೆ ಅಡ್ಡಬರುವ ಐದಾರು ರಕ್ಷಕರ ಸಾಧನೆ ಎಂದಾದರೂ ಲೆಕ್ಕಕ್ಕೆ ಬರುತ್ತದೆಯೆ? ಹೀಗಾಗಿ ಪಾಪಕೃತ್ಯ ಎಸಗಿದ ಸ್ವಾರೆಜ್ ಅವನ ದೇಶದ ಹೀರೋ ಆಗಿಬಿಟ್ಟ, ಘಾನಾ ತಂಡಕ್ಕೆ ಮುಳುವಾದ. ಅವನು ಅಕೃತ್ಯವೆಸಗದಿದ್ದಿದ್ದರೆ ಘಾನಾ ೮ರ ತಂಡದಿಂದ ೪ರ ತಂಡಕ್ಕೆ ಬಂದಿರುತ್ತಿತ್ತು.

ನಾವು ಉರುಗ್ವೆ ಎನ್ನುವ ಯುರುಗ್ವಾಯ್ ತಂಡದ ಆಟಗಾರ ಸ್ವಾರೆಜ್. ಪಂದ್ಯದಲ್ಲಿ ಎರಡು ತಂಡಗಳೂ ಒಂದೊಂದು ಗೋಲು ಹೊಡೆದಿದ್ದು, ಕಡೆಯ ಸೆಕೆಂಡ್‌ನಲ್ಲಿ ಘಾನಾದ ಜಿಯಾನ್ ಗೋಲು ಹೊಡೆದ. ಅಲ್ಲಿಗೆ ೨-೧ ಆಗಿ ಘಾನಾ ಗೆಲ್ಲಬೇಕು. ಗೋಲ್‌ಕೀಪರ್ ಎಲ್ಲೋ ಹೋಗಿಬಿಟ್ಟಿದ್ದ, ಈ ಸ್ವಾರೆಜ್ ಗೋಲ್ ಲೈನಿನ ಆಚೆ ನಿಂತು ಕೈಯಿಂದ ಜಿಯಾನ್ ಬಾರಿಸಿದ ಚೆಂಡನ್ನು ತಡೆದುಬಿಟ್ಟ. ಎಂಥಾ ಅನ್ಯಾಯ, ಘಾನಾದ ಚರಿತ್ರೆ ಅಲ್ಲಿಗೆ ಮೊಟಕುಗೊಂಡಿತು. ಸ್ವಾರೇಜ್‌ನನ್ನು ಆಟದಿಂದ ಹೊರದೂಡಲಾಯಿತು, ಆದರೆ ಯಾವ ಪುರುಷಾರ್ಥಕ್ಕೆ! ಹೇಗೂ ಆಟದ ಕಡೆಯ ಸೆಕೆಂಡ್ ಅದು. ಗೋಲ್ ಲೈನ್ ಹಿಂದೆ ನಿಂತು ತಡೆದದ್ದರಿಂದ ಅದನ್ನು ಗೋಲ್ ಎನ್ನಬೇಕಾಗಿತ್ತು, ಆದರೆ ಹಾಗೆ ಮಾಡಲಿಲ್ಲ. ಈ ಜಿಯಾನ್‌ನನ್ನು ಜ್ಞಾನ್ ಎಂದಿದ್ದರೆ ಭಾವಪರವಶನಾಗದೆ ಪೆನಾಲ್ಟಿ ಸಲೀಸಾಗಿ ಹೊಡೆದು, ಘಾನಾ ವಿಜಯಿಯಾಗಿ, ಇಡೀ ಆಫ್ರಿಕಾದ ಮನಸ್ಸಿಗೆ ಹರ್ಷ ನೀಡುತ್ತಿದ್ದ. ಆದರೆ ಗಲಿಬಿಲಿಗೊಂಡು ಬಾರ್‌ಗೆ ಬಡಿದ, ಗಳಗಳನೆ ಅತ್ತ. ಅವನು ಹೀರೊ ಆಗುವ ಬದಲು ಆ ಒಂದು ಸೆಕೆಂಡಿನಲ್ಲಿ ಪಾಪಿ ಸ್ವಾರೆಜ್ ಹೀರೋ ಆಗಿಬಿಟ್ಟ. ಹುಡುಗರು ಆಟ ಆಡುವಾಗ ಮೋಸ ಹೋದರೆ ಹೇಳುವುದುಂಟು, ''ದೇವರು ನೋಡಿಕೊಳ್ಳುತ್ತಾನೆ ತಾಳು'' ಎಂದು. ಹಾಗಿದ್ದಿದ್ದರೆ ದೇವರು ಮೊದಲೇ ಸ್ವಾರೆಜ್‌ನ ಕೈಗೆ ಶಾಖ ಮುಟ್ಟಿಸಬಹುದಿತ್ತು. ಅಂತೂ ಯುರುಗ್ವಾಯ್ ಮುಂದಿನ ಹಂತದಲ್ಲಿ ಸೋಲುಂಡು ನಾಲ್ಕನೆಯ ಸ್ಥಾನಕ್ಕೆ ನೂಕಲ್ಪಟ್ಟಿತು. ಅದರಿಂದ ಘಾನಾಕ್ಕೇನೂ ಲಾಭವಿಲ್ಲ, ಆದರೆ ಎಂಥದೋ ಅವ್ಯಕ್ತ ಸಮಾಧಾನ. ಬೇರೆಷ್ಟೋ ಆಟಗಾರರಂತೆ ಜಿಯಾನ್ ಅಳುತ್ತಲೇ ನಿರ್ಗಮಿಸಲಿಲ್ಲ, ''ನಾಲ್ಕು ವರ್ಷ ತಡೆದು ನೋಡಿ'' ಎಂದ. ಅದು ಆಟದ ನೈಜ ಮನೋಭಾವ.

ಘಾನಾ 'ಸೋತು' ಹಿಂದಿರುಗಿದರೂ ಆ ದೇಶ ಅದರ ತಂಡವನ್ನು ಆದರದಿಂದ ಬರಮಾಡಿಕೊಂಡಿತು. ಗೆದ್ದು ಬಂದಿದ್ದರೆ ಎಷ್ಟು ಹಿಗ್ಗಿರುತ್ತಿತ್ತೋ ಅಷ್ಟೇ ಹಿಗ್ಗು ಪ್ರದರ್ಶಿತವಾಯಿತು. ತಂಡವು ದಕ್ಷಿಣ ಆಫ್ರಿಕಾದಿಂದ ಹಿಂದಿರುಗುವ ಮುನ್ನ ನೆಲ್ಸನ್ ಮಂಡೇಲಾ ಆ ತಂಡವನ್ನು ಬರಮಾಡಿಕೊಂಡು ಬೆನ್ನುತಟ್ಟಿದ, ''ಆಫ್ರಿಕಾದ ದೀಪ ನೀವು'' ಎಂದು ಶ್ಲಾಘಿಸಿದ. ಮೂರು ಶತಮಾನಗಳ ಹಿಂದೆ ಕುತಂತ್ರಗಳ ಸರಪಳಿಯಿಂದ ಆಫ್ರಿಕಾವನ್ನು ವಸಾಹತು ದರ್ಪಕ್ಕೆ ಗುರಿಮಾಡಿ ಯೂರೋಪಿನ ದೇಶಗಳು ಅಲ್ಲಿಯ ಜನರನ್ನು ಹಿಂಡಿ ಹಿಪ್ಪೆ ಮಾಡಿದ್ದುವು. ಈಗ ಸ್ವಾರೆಜ್ ಮತ್ತೆ ಒಂದು ಕುತಂತ್ರದಿಂದ ಘಾನಾ ಸೊರಗುವಂತೆ ಮಾಡಿದ. ಚರಿತ್ರೆ ಹಾಗೇ ಉಳಿಯುವುದಿಲ್ಲ, ಎಂಟರ ಹಂತವನ್ನು ಘಾನಾ ಮುಟ್ಟುತ್ತದೆ ಎಂದು ಯಾರು ನಿರೀಕ್ಷಿಸಿದ್ದರು! ಮುಂದೊಮ್ಮೆ ಆಫ್ರಿಕಾ ಪ್ರಥಮ ಸ್ಥಾನ ಗಳಿಸುವುದು ಅಸಾಧ್ಯವಲ್ಲ. ಯೂರೋಪಿನ ಹಲವು ತಂಡಗಳಲ್ಲಿ ಈಗಾಗಲೆ ಕರಿಯರನೇಕರು ಪ್ರಮುಖ ಆಟಗಾರರಾಗಿದ್ದಾರಲ್ಲವೆ?



## ಜುಲೈ ಸಂಚಿಕೆ

ಜುಲೈ ೨೦೧೦ರ ಸಂಚಿಕೆಯ ಡಾ|| ಸಬಿಹಾ ಭೂಮೀಗೌಡ ಅವರ 'ಪ್ರೇಮವಿವಾಹವೆಂಬ ಅಗ್ನಿದಿವ್ಯ' ಲೇಖನ ಚಿಂತನಾರ್ಹವಾಗಿದೆ.

'ಧಾರ್ಮಿಕ ಭಯೋತ್ಪಾದಕರು' ವಿವಿಧ ಕಾರಣಗಳಿಗಾಗಿ ಯುವಪೀಳಿಗೆಯವರತ್ತ ಕೆಂಗಣ್ಣು ಬೀರಿ, ಅರಳಬೇಕಾದ ಅವರ ಜೀವನವನ್ನು ನರಳುವಂತೆ ಮಾಡುತ್ತಿರುವುದು ನಿಜಕ್ಕೂ ವಿಷಾದಕರ ಸಂಗತಿ.

ಪ್ರತಿಯೊಬ್ಬ ಪ್ರಜೆಗೂ ಸಂವಿಧಾನವು ಧಾರ್ಮಿಕ ಸ್ವಾತಂತ್ರ್ಯದ ಹಕ್ಕನ್ನು ನೀಡಿದ್ದರೂ ಅದನ್ನು ಅನುಷ್ಠಾನಕ್ಕೆ ತರಲು ಅಸಾಧ್ಯವೆನ್ನುವಂತಹ ಪರಿಸ್ಥಿತಿ ಇಂದು ತಲೆದೋರಿದೆ.

ತಾವು ಜಾತ್ಯತೀತರೆಂದು ಹೇಳಿಕೊಳ್ಳುವ ಕೆಲವು ಮಂದಿ ಒಳಗೊಳಗೇ ಜಾತಿಪದ್ಧತಿಯ ಪೋಷಕರೂ ಆಗಿರುವುದೆ ಇಂತಹ ದುರಂತಕ್ಕೆ ಕಾರಣ!

ಮೈಸೂರು **ಕೊ. ಸು. ನರಸಿಂಹಮೂರ್ತಿ**

### ಇಂದಿನ ಉನ್ನತ ಶಿಕ್ಷಣ

ವಿದ್ಯೆವುಳ್ಳವನ ಮುಖವು ಮುದ್ದುಬರುವಂತಿಕ್ಕು
ವಿದ್ಯೆವಿಲ್ಲದವನ ಮುಖವು ಹಾಳೂರು
ಹದ್ದಿನಂತಿಕ್ಕು ಸರ್ವಜ್ಞ.

– ಸರ್ವಜ್ಞ ಹೇಳಿದ ಈ ಮಾತುಗಳು ಅಕ್ಷರಶಃ ಸತ್ಯ. ವಿದ್ಯೆ ಇಲ್ಲದವನ ಮುಖ ನೋಡಲಿಕ್ಕಾಗದು, ನಿಜ. ಆದರೆ ಇವತ್ತಿನ ಐ.ಟಿ.-ಬಿ.ಟಿ. ಯುಗದಲ್ಲಿ ಸುಶಿಕ್ಷಿತರೆನಿಸಿಕೊಂಡವರು ಮಾಡುವ ಲಫಡಾ, ಮೋಸ, ಸುಲಿಗೆ ಇವನ್ನೆಲ್ಲ ನೋಡಿದರೆ, ಕಲಿತವರಿಗಿಂತ ಕಲಿಯದವರೇ ಎಷ್ಟೋ ವಾಸಿ ಎನಿಸುತ್ತದೆ.

ಇಂದು ಶಿಕ್ಷಣ ವ್ಯಾಪಾರೀಕರಣಗೊಳ್ಳುತ್ತಾ ಇದೆ. ಪಾಲಕರು, ಶಿಕ್ಷಕರು ವಿದ್ಯಾರ್ಥಿಯು ತೆಗೆದುಕೊಳ್ಳುವ ಮಾರ್ಕ್ಸ್ ಕಡೆಗೇ ಹೆಚ್ಚು ಗಮನ ನೀಡುತ್ತಿದ್ದಾರೆಯೇ ವಿನಾ ವಿದ್ಯಾರ್ಥಿಗಳ ನಡತೆಯ ಕಡೆಗಲ್ಲ.

ಸೆಮಿಸ್ಟರ್, ನ್ಯಾಕ್ ಪದ್ಧತಿ ಬಂದಮೇಲೆ ಹೇಳುವುದಕ್ಕೂ ಕೇಳುವುದಕ್ಕೂ ಸಮಯವೇ ಇಲ್ಲವಾಗಿದೆ. ಮೂರು ತಿಂಗಳುಗಳಲ್ಲಿ ನೂರು ಅಂಕದ ಪಠ್ಯವನ್ನು ಮುಗಿಸಬೇಕು. ಅದು ಹೇಗೆ ಸಾಧ್ಯ? ಮೊದಲೆಲ್ಲಾ ನೂರು ಅಂಕದ ಪಠ್ಯವನ್ನು ಒಂದು ವರ್ಷದವರೆಗೆ ಕಲಿಸುತ್ತಿದ್ದೆವು. ಈಗ ಪರೀಕ್ಷೆ ಬರಿಯುವವರೆಗಾದರೂ ನೆನಪಿದ್ದರೆ ಪುಣ್ಯ. ಪಠ್ಯ ಮುಗಿಸುವುದರಲ್ಲಿಯೇ ಒಂದು ಟರ್ಮ್ ಮುಗಿದುಹೋಗಿರುತ್ತದೆ. ಇನ್ನು ಪಠ್ಯೇತರ ಚಟವಟಿಕೆಗಳ ತಾಪತ್ರಯವೇ ಇಲ್ಲ. ಇದಕ್ಕೆಲ್ಲಾ ಯಾರು ಹೊಣೆ?

ಇತ್ತೀಚೆಗೆ ಯು.ಜಿ.ಸಿ. ಒಂದು ನಿಯಮವನ್ನು ರೂಪಿಸಿದೆ. ಅದೇಂದರೆ, ಪದವಿ ಕಾಲೇಜುಗಳ ಪ್ರಾಧ್ಯಾಪಕರು ಕಡ್ಡಾಯವಾಗಿ ನೆಟ್ (NET), ಸೆಟ್ (SET) ಅಥವಾ ಪಿಎಚ್.ಡಿ. ಮಾಡಿರಲೇಬೇಕು. ಇಷ್ಟು ಮಾನದಂಡಗಳು ಸಾಕೆ? ಪಿಎಚ್.ಡಿ.ಗೆ ಆಯ್ಕೆಮಾಡಿಕೊಂಡ ವಿಷಯಕ್ಕೂ, ಕಲಿಸುವ ವಿಷಯಕ್ಕೂ ಸಂಬಂಧವೇ ಇರುವುದಿಲ್ಲ. ಇರಲಿ, ಇದೇನೋ ಒಂದು ಹೆಚ್ಚಿನ ಮಟ್ಟದ ಜ್ಞಾನಕ್ಕಾಗಿ ಎಂದಿಟ್ಟುಕೊಳ್ಳೋಣ. ಆದರೆ ಅದನ್ನೇ ಒಂದು ಮಾನದಂಡವನ್ನಾಗಿ ಇಟ್ಟುಕೊಳ್ಳುವುದು ಸರಿಯೆ? ವಿದ್ಯಾರ್ಥಿಗಳಲ್ಲಿ ಅಶಿಸ್ತು, ಬೇಜವಾಬ್ದಾರಿತನ ಹೆಚ್ಚಾಗುತ್ತಿವೆ ಎಂದು ಅವರ ಮೇಲೆ ಆರೋಪ ಹೊರಿಸುವುದಕ್ಕಿಂತ ತಪ್ಪು ಎಲ್ಲಿದೆ ಎಂಬುದನ್ನು ಪತ್ತೆಹಚ್ಚುವ ಕೆಲಸವೂ ನಡೆಯಬೇಕು. ಹದಿನೈದು ಜನ ವಿದ್ಯಾರ್ಥಿಗಳಲ್ಲಿ ಒಬ್ಬನಾದರೂ ಆಸಕ್ತಿಯಿಂದ ಪಾಠ ಕೇಳುತ್ತಾನೆ. ಅವನಿಗಾದರೂ




ನಾವು ಶ್ರದ್ಧೆಯಿಂದ ವೈಚಾರಿಕ, ವೈಜ್ಞಾನಿಕ ಹಿನ್ನೆಲೆಯನ್ನಿಟ್ಟುಕೊಂಡು ಪಾಠ ಮಾಡಿದರೆ, ಸ್ವಲ್ಪಮಟ್ಟಿಗಾದರೂ ನಮ್ಮ ದೇಶ ಕಂದಾಚಾರ, ಜಾತೀಯತೆಗಳಿಂದ ಮುಕ್ತವಾಗಬಹುದು. ಬದಲಾವಣೆಯ ಗಾಳಿ ಬೀಸಬಹುದು. ಜೊತೆಗೆ ವಿದ್ಯಾರ್ಥಿಗಳು ಹೆಚ್ಚುಹೆಚ್ಚು ಪ್ರಶ್ನೆ ಕೇಳುವಂತೆ ಚರ್ಚೆಯಲ್ಲಿ ತೊಡಗುವಂತೆ ಪ್ರೇರೇಪಿಸಬೇಕು.

ಸೆಮಿಸ್ಟರ್ ಪದ್ಧತಿ ಬಂದಮೇಲೆ ೨೦ ಅಂಕಗಳು ಶಿಕ್ಷಕರ ಕೈಯಲ್ಲಿ ಇರುತ್ತವೆ. ಇಲ್ಲಿಯೂ ಕೂಡ ಅದೆಷ್ಟೋ ಪ್ರಾಧ್ಯಾಪಕರು ತಿಳಿದೂ ತಿಳಿದೂ ತಪ್ಪು ಮಾಡುತ್ತಿದ್ದಾರೆ. ಇಪ್ಪತ್ತಕ್ಕೆ ಇಪ್ಪತ್ತು, ಇಲ್ಲವೇ ಕಣ್ಣುಮುಚ್ಚಿ ಹದಿನೈದು ಮಾರ್ಕ್ಸ್ ಕೊಟ್ಟುಬಿಡುವುದು ರೂಢಿಗೆ ಬಂದಿದೆ. ದಿನೇದಿನೇ ಶಿಕ್ಷಣ ತನ್ನ ಪಾವಿತ್ರ್ಯವನ್ನು ಕಳೆದುಕೊಳ್ಳುತ್ತಿರುವಂತೆ ಭಾಸವಾಗುತ್ತಿದೆ. ಕಷ್ಟಪಟ್ಟು ಓದುವ ವಿದ್ಯಾರ್ಥಿಗಳಿಗೆ ಮುಜುಗರವಾಗುತ್ತದೆ.

ನ್ಯಾಕ್ ಪದ್ಧತಿ (ನ್ಯಾಷನಲ್ ಅಸೆಸ್‌ಮೆಂಟ್ ಅಂಡ್ ಅಕ್ರೆಡಿಟೇಶನ್ ಕೌನ್ಸಿಲ್) ಬಂದಮೇಲೆ ಕಡತ ತಯಾರು ಮಾಡುವುದರಲ್ಲಿಯೇ ಸಮಯ ಕರಗುತ್ತಾ ಹೋಗುತ್ತದೆ. ವಿದ್ಯಾರ್ಥಿಗಳ ಏಳ್ಗೆಗಿಂತ ಪ್ರಾಧ್ಯಾಪಕರ ಏಳ್ಗೆಗೆ ಮೊದಲ ಪ್ರಾಶಸ್ತ್ಯ. ಯುದ್ಧ ಮಾಡುವುದಕ್ಕಿಂತ ಯುದ್ಧದ ಸಿದ್ಧತೆಯೇ ಹೆಚ್ಚಾಗಿದೆ. ರಾಜ್ಯಮಟ್ಟದ, ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ವಿದ್ವತ್ ಪ್ರದರ್ಶನ ಮಾಡಬೇಕು; ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ನಮ್ಮನ್ನು ನಾವು ತೊಡಗಿಸಿಕೊಳ್ಳಬೇಕು, ನಿಜ. ಯಾವ ಶ್ರಮವೂ ಇಲ್ಲದೆ ಡೆಲಿಗೇಷನ್ ಫೀ ತುಂಬಿ ಸರ್ಟಿಫಿಕೇಟ್ ತರಿಸಿಕೊಳ್ಳುವ ಕಳ್ಳಸಂತೆ ವ್ಯವಹಾರಕ್ಕೆ ಇವತ್ತಿನ ವಿಚಾರಸಂಕಿರಣಗಳು ಪ್ರೇರಣೆ ನೀಡುತ್ತಿವೆ.

ಹೀಗೆ ಸಿಕ್ಕುಸಿಕ್ಕಾದ ಒಂದೊಂದು ಎಳೆಗಳನ್ನೂ ಬಿಡಿಸಿ ನೋಡಿದಾಗ ಎಲ್ಲಿ ಗಂಟು ಬಿದ್ದಿದೆ ಎಂಬುದು ಗೊತ್ತಾದರೂ ಅದನ್ನು ಬಿಡಿಸುವುದು ಕಷ್ಟವೆ.

ಕಾಗವಾಡ ***ದೇವಿಕಾ ಡಿ. ನಗರಕರ***

ಜುಲೈ ತಿಂಗಳ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಪ್ರೇಮ್‌ಚಂದರ (ಪೂಸ್ ಕೀ ರಾತ್) ಹಿಂದಿ ಕತೆಯ ಅನುವಾದ 'ಪುಷ್ಯದ ರಾತ್ರಿಯಲ್ಲಿ' ಟಿ. ಎಸ್. ಲಲಿತರು 'ನೀಲ್ ಗಾಯ್' ಎಂಬ ಪದವನ್ನು **ದನಗಳು** ಎಂಬುದಾಗಿ ಅನುವಾದ ಮಾಡಿದ್ದಾರೆ. ಅದು **ಕಡವೆ** ಎಂದಾಗಬೇಕು. ಇದೇ ಕತೆಯನ್ನು ಡಾ|| ಎಚ್. ಎಮ್. ಕುಮಾರಸ್ವಾಮಿಯವರು 'ಮಾಗಿಯ ರಾತ್ರಿ' ಎಂದು ಅನುವಾದಿಸಿದ್ದು, ಅದು 'ಪಿರಾಮಿಡ್' (ಸ್ವಂತಿಕಾ ಸಾಹಿತ್ಯ ಬಳಗ, ಸುಳ್ಯ, ದಕ್ಷಿಣ ಕನ್ನಡ - ೫೭೪ ೨೩೯. ಪ್ರಥಮ ಆವೃತ್ತಿ - ೨೦೦೬) ಸಂಕಲನದಲ್ಲಿದೆ ಎಂಬುದನ್ನು ಸಾಂದರ್ಭಿಕವಾಗಿ ಇಲ್ಲಿ ಉಲ್ಲೇಖಿಸಬಯಸುತ್ತೇನೆ. ಅದರಲ್ಲಿ ಅವರು **ಕಡವೆ** ಪದ-ಪ್ರಯೋಗ ಮಾಡಿದ್ದಾರೆ.

ಉಡುಪಿ ***ಡಾ|| ಮಾಧವಿ ಎಸ್. ಭಂಡಾರಿ***

### ಲೋಕಾಯುಕ್ತಕ್ಕೆ ಹೆಚ್ಚಿನ ಅಧಿಕಾರ

ಭಾಜಪ ಮತ್ತು ಅದರ ಪರಿವಾರದವರು ಜೆಡಿಎಸ್‌ನ ನಂಟು ಕಳೆದುಕೊಂಡು ಕಾನೂನುಬಾಹಿರ ಹಾಗೂ ಪ್ರಜಾಪ್ರಭುತ್ವ ವಿರೋಧೀ ಆಪರೇಷನ್ ಕಮಲದ ಮೂಲಕ ಕೋಟ್ಯಂತರ ರೂ.ಗಳ ದುರ್ಬಳಕೆ ಮಾಡಿದುದರಿಂದಾಗಿ ಭ್ರಷ್ಟರು ಜನಪ್ರತಿನಿಧಿಗಳಾಗಿ ಅಧಿಕಾರಕ್ಕೆ ಬಂದು ಎರಡು ವರ್ಷಗಳು ಕಳೆದಿವೆ. ಈ ಎರಡು ವರ್ಷಗಳಲ್ಲಿ ಕರ್ನಾಟಕದ ನೆಲ, ಜಲ, ಖನಿಜ ಸಂಪತ್ತು, ಮಾನವ ಸಂಪನ್ಮೂಲ, ಇಂದಿನ ಮಟ್ಟಿಗಷ್ಟೇ ಅಲ್ಲ, ಸಾರ್ವಕಾಲಿಕವಾಗಿ ದೋಚಿಹೋಗಿ ವಿನಾಶಕಾರಿ ಪರಿಸ್ಥಿತಿ ಉದ್ಭವವಾಗಿದೆ. ವಿ.ವಿ.ನಿಲಯಗಳು ಕನ್ನಡ ವಿ.ವಿ.ನಿಲಯದ ಸಹಿತವಾಗಿ ಭೂಮಿ ಕಬಳಿಕೆದಾರರ ಮತ್ತು ಸಾರ್ವಜನಿಕ ಸೊತ್ತಿನ ಬಳಕೆದಾರರ ದಾಳಿಗೆ ಒಳಗಾಗಿದೆ. ವಿದ್ಯಾಭ್ಯಾಸವನ್ನು ಕೋಮುವಾದಿಗಳ

ಆಡಳಿತಕ್ಕೊಳಪಡಿಸುವ ದಿಸೆಯಲ್ಲಿ ಮತ್ತು ಶಿಕ್ಷಣ ಕ್ಷೇತ್ರವನ್ನು ಖಾಸಗಿಯವರ ಪರಿಗಣಿತ ವಿ.ವಿ.ನಿಲಯಗಳಾಗಿ ಮಾರ್ಪಡಿಸುವ ಧಂಧೆ ಸಾಗಿದೆ. ಸಾಮ್ರಾಜ್ಯಗಳ ಪಾಳೆಯಗಾರಿಕೆಯ, ಗುಲಾಮಗಿರಿಯ ವೈಭವದ ಪ್ರದರ್ಶನಕ್ಕೆ ಕೋಟ್ಯಂತರ ರೂ. ದುರ್ವ್ಯವಹಾರ ಮಾಡಿ ಗತವೈಭವವೆಂಬುದರ ಮರುಕಳಿಕೆಯ ಮೂಲಕ ಅಂದಿನ ಸ್ಥಾಪಿತ ಹಿತಾಸಕ್ತಿಗಳ ಅಧಿಕಾರದ ಶಾಶ್ವತೀಕರಣಕ್ಕೆ ಬೊಕ್ಕಸದ ಹಣವನ್ನು ದೋಚಿ ವ್ಯಯಿಸಲಾಗುತ್ತಿದೆ. ಇವುಗಳ ವಿರುದ್ಧ ಪ್ರಜ್ಞಾವಂತ ನಾಗರಿಕರು ಸಿಡಿದೆದ್ದುದನ್ನು ನಾವು ಕಂಡಿದ್ದೇವೆ.

ಈ ವಾತಾವರಣದಲ್ಲಿ ಪರಿವಾರದ ಭ್ರಷ್ಟ ಮತ್ತು ಬೇಜವಾಬ್ದಾರಿಯುತ ನಾಯಕರ ದಾಂಧಲೆಗಳು ಸಹ ರಾಜ್ಯದ ಮತ್ತು ದೇಶದ ಸಮಚಿತ್ತವುಳ್ಳ ಜನರಲ್ಲಿ ಕಳವಳವನ್ನು ಮೂಡಿಸಿವೆ. ಈ ದುರವಸ್ಥೆಯನ್ನು ತಡೆಗಟ್ಟುವ ಕ್ರಮಗಳನ್ನು ಕರ್ನಾಟಕದ ಲೋಕಾಯುಕ್ತ ಸಂಸ್ಥೆಯ ಆಯುಕ್ತರು ದಿಟ್ಟತನದಿಂದ ಕೈಗೊಂಡಿದ್ದನ್ನು ಕಂಡು ಜನರು ಅವರ ಅಧಿಕಾರ ಮತ್ತು ಕಾರ್ಯ ನಿರ್ವಹಣೆಯನ್ನು ಬೆಂಬಲಿಸಲು ಪಕ್ಷ, ಪಂಗಡ, ಜಾತಿ, ಮತಗಳ ಭೇದ ಇಲ್ಲದೆ ಮುಂದೆ ಬಂದಿರುವುದು ನಮ್ಮ ಜನಾಂದೋಲನದ ಆಶಾಕಿರಣವಾಗಿದೆ. ಈ ಹಿನ್ನೆಲೆಯಲ್ಲಿ ತನ್ನ ಅಧಿಕಾರದ ಅವಧಿಯಲ್ಲಿ ತನ್ನ ಪಾಲಿಗಿರುವ ಕರ್ತವ್ಯಗಳನ್ನು ನೆರವೇರಿಸುವುದಕ್ಕೆ ಬೇಕಾದ ಕಾನೂನು ಕ್ರಮಗಳನ್ನು ಹಾಗೂ ಅಧಿಕಾರ ವ್ಯಾಪ್ತಿಯನ್ನು ವಿಸ್ತರಿಸಬೇಕೆಂದು ಪ್ರಸ್ತುತ ಲೋಕಾಯುಕ್ತರು ಕೇಳಿಕೆಯನ್ನಿಟ್ಟಿದ್ದರು. ಅದಕ್ಕೆ ಸರಕಾರದ ಚುಕ್ಕಾಣಿ ಹಿಡಿದವರ ಹೊರತು ಮತ್ತೆಲ್ಲ ರಾಜಕೀಯ ಪಕ್ಷಗಳು ಒಕ್ಕೊರಲಿನ ಬೆಂಬಲ ನೀಡಿದ್ದವು. ಈ ವಾತಾವರಣವನ್ನು ಮನಗಂಡು ಲೋಕಾಯುಕ್ತರು ಸ್ವಯಂಪ್ರೇರಿತರಾಗಿ ತಮ್ಮ ಪ್ರಯತ್ನವನ್ನು ಸಾರ್ಥಕಪಡಿಸುವ ದೃಷ್ಟಿಯಿಂದ ರಾಜ್ಯಪಾಲರಿಗೆ ತಮ್ಮ ರಾಜೀನಾಮೆಯನ್ನು ಸಲ್ಲಿಸಿದ್ದರು.

ಆದರೆ ಗೌರವಾನ್ವಿತ ಸಂತೋಷ ಹೆಗ್ಡೆಯವರು ನಮ್ಮ ನಿರೀಕ್ಷೆಯಂತೆ ವರ್ತಿಸದೆ ತಮ್ಮ ರಾಜೀನಾಮೆಯನ್ನು ಭಾಜಪ ನಾಯಕ ಅಡ್ವಾನಿಯವರ ಮಾತನ್ನು ಗುರುವಾಕ್ಯವೊ ಅಥವಾ ಪಿತೃಸಮಾನ ವಾಕ್ಯವೋ ಎಂದು ಪರಿಗಣಿಸಿ ಜನರ ಬೆಂಬಲವನ್ನು ಮರೆತು ಅಡ್ವಾನಿಯವರ ಖಾಸಗಿ ಮತ್ತು ಗುಪ್ತ ಆಶ್ವಾಸನೆಗಳನ್ನು ನಂಬಿ ರಾಜೀನಾಮೆಯನ್ನು ಹಿಂತೆಗೆದುಕೊಂಡದ್ದು ನಮಗೆ ಅತೀವ ವೇದನೆಯನ್ನು ಉಂಟುಮಾಡಿದೆ. ಮಾನ್ಯ ಹೆಗ್ಡೆಯವರು ಅಡ್ವಾನಿಯವರ ಹಿರಿತನವನ್ನು ಮಾತ್ರ ಕಂಡಿದ್ದಿದ್ದರೆ, ನಾವು, ಈ ದೇಶದ ಸಾರ್ವಜನಿಕರು ಅವರೊಬ್ಬ ಕೋಮುವಾದಿಯಾಗಿ ಹಾಗೂ ಸಂಘಪರಿವಾರದ ನಾಯಕರಾಗಿ ಮಾಡಿರುವುದನ್ನು, ಹೇಳಿರುವುದನ್ನೆಲ್ಲಾ ಕಂಡು, ಕೇಳಿ ತಿಳಿದಿದ್ದೇವೆ. ಅವರ ಆಶ್ವಾಸನೆಗಳಿಗನುಗುಣವಾಗಿ ಮಾನ್ಯ ಹೆಗ್ಡೆಯವರು ತಮ್ಮ ರಾಜೀನಾಮೆಯನ್ನು ಹಿಂಪಡೆದದ್ದು ಹೌದಾದರೆ ಅವರಿಗೆ ಭ್ರಮನಿರಸನ ಕಾದಿದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಒಂದು ವೇಳೆ ಅವರು ಅಂದುಕೊಂಡಂತೆ ಲೋಕಾಯುಕ್ತವನ್ನು ಬಲಪಡಿಸುವ ಮತ್ತು ತಾನು ಕೇಳಿರುವ ಅಧಿಕಾರವು ಸಕಾಲದಲ್ಲಿ ಸಿಗದೇ ಹೋದರೆ ಅವರ ಮುಂದಿನ ಹೆಜ್ಜೆ ಏನು ಎನ್ನುವುದನ್ನು ಅವರಿಂದಲೇ ಕೇಳಿ ತಿಳಿಯುವ ಅಪೇಕ್ಷೆ ನಮಗಿದೆ. ಅವರು ಒಂದು ಪತ್ರಿಕಾ ಹೇಳಿಕೆಯಲ್ಲಿ ಹೇಳಿದ ಮಾತು ನಮ್ಮನ್ನು ತೀವ್ರ ಕಳವಳಕ್ಕೆ ಗುರಿಪಡಿಸಿದೆ. ಏಕೆಂದರೆ ತನ್ನ ನಿರೀಕ್ಷೆಯಂತೆ ನಿಗದಿತ ಅವಧಿಯೊಳಗೆ ಅವರಿಗೆ ತಕ್ಕ ಅಧಿಕಾರವು ದೊರಕದೇಹೋದ ಸಂದರ್ಭದಲ್ಲಿ ಏನು ಮಾಡಲಿದ್ದಾರೆ ಎಂಬ ಪ್ರಶ್ನೆಗೆ ಅವರು ನೀಡಿದ ಉತ್ತರ ಅತ್ಯಂತ ನಿರಾಶಾದಾಯಕವಾದದ್ದು ಮತ್ತು ಅವರು ಆಕಾಶದಿಂದ ಪಾತಾಳಕ್ಕೆ ನೆಗೆದು ಬೀಳುವಂಥದ್ದು. ತಾವು ಹೋರಾಟಕ್ಕೆ ಹೊರಟವರು. ಬೆಂಬಲಿಗರನ್ನೆಲ್ಲಾ ಬಲಿ ಕೊಟ್ಟು ಯಾವುದೋ ವಿದೇಶಕ್ಕೆ ಪಲಾಯನ ಮಾಡಲು ಸನ್ನದ್ಧರಾಗಿ ವಿಮಾನ ನಿಲ್ದಾಣಕ್ಕೆ ಹೋಗುವ ಹಾದಿಯಲ್ಲಿ ರಾಜ್ಯಪಾಲರಿಗೆ ರಾಜಿನಾಮೆ ನೀಡಿ ಯಾರ ಕೈಗೂ ಸಿಗದಂತೆ ನೆಮ್ಮದಿಯಿಂದ ಇರಲು ಹೊರಟುಹೋಗುತ್ತಾರೆ ಎನ್ನುವ ಉತ್ತರವಂತೂ ಅಭಿಮನ್ಯುವಿನಂತೆ ಹೋರಾಟಕ್ಕೆ ಹೊರಟವರು ಉತ್ತರಕುಮಾರನಂತೆ ವರ್ತಿಸಲು ಯೋಚಿಸಿದ್ದು ಅವರಿಗೆ ಗೌರವ ತರುವಂಥದ್ದಲ್ಲ.

ಮಾನ್ಯ ಸಂತೋಷ ಹೆಗ್ಡೆಯವರು ಇರಲಿ ಬಿಡಲಿ ಲೋಕಾಯುಕ್ತವಂತೂ ಒಂದು ಶಕ್ತಿಶಾಲಿ ವ್ಯವಸ್ಥೆಯಾಗುವಂತೆ ಮಾಡುವುದು ನಮ್ಮ ಗುರಿಯಾಗಿದೆ. ಆ ಹೋರಾಟದಲ್ಲಿ ಶ್ರೀ ಹೆಗ್ಡೆಯವರು ನಮ್ಮೊಂದಿಗೆ ಇರಬೇಕೆಂಬುದಷ್ಟೇ ನಮ್ಮ ಆಶಯ. ಅದಕ್ಕೆ ಅವರು ಸನ್ನದ್ಧರಾಗಿದ್ದರೆ ಮತ್ತು ನಾಯಕರಾಗಲು ತಯಾರಾಗಿದ್ದರೆ ನಾವು ಅವರಲ್ಲಿ ಇರಿಸಿದ ನಂಬಿಕೆ, ಭರವಸೆ ಪುನಃ ಚೇತರಿಸಿಕೊಂಡು ನಮ್ಮ ಬೆಂಬಲ ದೃಢವಾಗುತ್ತದೆ. ಅವರು ಲೋಕಾಯುಕ್ತರಾದಂದಿನಿಂದ ಈವರೆಗೆ ಅವರಿಗೆ ಬೆಂಬಲ ಮತ್ತು ಗೌರವ ನೀಡುತ್ತಾ ಬಂದಿರುವ ಓರ್ವ ನಿವೃತ್ತ ಮುತ್ಸದ್ದಿ ಎಂಬ ನೆಲೆಯಲ್ಲಿ ಅವರ ತೀರ್ಥರೂಪರ ಜೊತೆಯಲ್ಲಿ ರಾಜ್ಯಸಭೆಯ ಸದಸ್ಯನಾಗಿದ್ದೆ, ಎಂಬ ಆತ್ಮೀಯತೆಯಿಂದ ಈ ಮಾತನ್ನು ಹೇಳುತ್ತಿದ್ದೇನೆ.

ಮಾನ್ಯ ಮುಖ್ಯಮಂತ್ರಿ ಯಡಿಯೂರಪ್ಪನವರು ಅವರ ಸಾಧನಾ ಸಭೆಯಲ್ಲಿ ಗಳಗಳನೆ ಅತ್ತಿದ್ದು, ಅನಂತರದ ದಿನಗಳಲ್ಲಿ ನಯ ನಾಜೂಕಿನಿಂದ ತಲೆ ತಪ್ಪಿಸಿಕೊಂಡಿದ್ದು ಹಾಗೂ ಲೋಕಾಯುಕ್ತರ ಬೇಡಿಕೆಗಳ ಈಡೇರಿಕೆಗೆ ತಮ್ಮ ಪಕ್ಷದವರ ಸದಸ್ಯರದೇ ಬೆಂಬಲ ಇಲ್ಲ ಎಂಬ ಸಬೂಬು ನೀಡಿದ್ದನ್ನು ಶ್ರೀ ಹೆಗ್ಡೆಯವರು ಅರ್ಥೈಸಿಕೊಳ್ಳಬೇಕಾಗಿದೆ. ಜನಪ್ರತಿ ನಿಧಿಗಳೆನಿಸಿಕೊಳ್ಳುವ ಎಲ್ಲರೂ ಲೋಕಾಯುಕ್ತರ ವ್ಯಾಪ್ತಿಯಿಂದ ಹೊರಗಿರಬೇಕೆಂಬ ನಿಲುವು ಆ ಸಂಸ್ಥೆಯನ್ನೇ ಅನಗತ್ಯಗೊಳಿಸುವ ಪ್ರಯತ್ನವಾಗಿದೆ.

ಈ ಎಲ್ಲ ವಿಚಾರಗಳನ್ನು ಮಥಿಸಿ ನೋಡಿದಾಗ ಪಕ್ಷ, ಪಂಗಡ, ಜಾತಿ, ಕೋಮು, ಸ್ತ್ರೀ, ಪುರುಷ ಇತ್ಯಾದಿ ಎಲ್ಲರೂ ಸೇರಿ ಯಾವ ಭೇದವೂ ಇಲ್ಲದೆ ನ್ಯಾಯವನ್ನು ಆಶಿಸುವವರು, ರಾಜ್ಯದ ಹಿತವನ್ನು ಬಯಸುವವರು, ಉತ್ತಮ ಭವಿಷ್ಯತ್ತನ್ನು ಅಪೇಕ್ಷಿಸುವವರು ಒಂದುಗೂಡಿ ಸುಸಂಘಟಿತ ಚಳುವಳಿಯನ್ನು ಕಟ್ಟಿ ಈ ದುರಾಡಳಿತವನ್ನು ಕೊನೆಗೊಳಿಸುವ ಹೋರಾಟಕ್ಕೆ ಸಜ್ಜಾಗಬೇಕೆಂದು ಕಳಕಳಿಯಿಂದ ಮನವಿ ಮಾಡಿಕೊಳ್ಳುತ್ತೇನೆ.

ಮಂಗಳೂರು — ಬಿ. ವಿ. ಕಕ್ಕಿಲ್ಲಾಯ

'ಒಂದು ಎನ್‌ಕೌಂಟರ್ ಕುರಿತು' ಬರೆದ ಜಿ. ರಾಜಶೇಖರ ಅವರ ಲೇಖನ ಓದಿದೆ. ಅವರ ನಿರ್ಭೀತ ವಿವರಣೆ, ವಿಶ್ಲೇಷಣೆ ಅಧಿಕಾರಶಾಹಿಗಳಿಗೆ, ಇನ್ನೊಂದರ್ಥದ ಒಳ ಆತಂಕವಾದಿಗಳಿಗೆ ಇಷ್ಟವಾಗದೆ ಇರಬಹುದು. ಆದರೆ, 'ವಾಸ್ತವ'ವನ್ನು ಬಿಚ್ಚಿಟ್ಟಿದ್ದಾರೆ ಎಂಬುದರಲ್ಲಿ ಅನುಮಾನವಿಲ್ಲ.

ಬಂಗಾಲದಲ್ಲಿ ಚಿಕ್ಕ ಕಿಡಿಯಾಗಿ ಹೊತ್ತಿಕೊಂಡ 'ನಕ್ಸಲ್‌ಬಾರಿ'ಯ ಬಗ್ಗೆ ೬೦ರ ದಶಕದಲ್ಲೇ ಕೆಲವು ವಿಚಾರವಾದಿಗಳು ದೇಶವನ್ನಾಳುವವರನ್ನು ಎಚ್ಚರಿಸಿದ್ದರು. ನೀವು ರೈತರನ್ನು, ಬುಡಕಟ್ಟು ಸಮುದಾಯವನ್ನು ಅರಣ್ಯದಿಂದ ಬೇರೆ ಮಾಡಲು ಸಾಧ್ಯವಿಲ್ಲ; ಮಾಡ ಹೊರಟರೆ ಕಾಲಕ್ರಮೇಣ ಇಡೀ ದೇಶದ ಬೆವರಿನ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತದೆ ಎಂದು ಎಚ್ಚರಿಸಿದ್ದರು. ನಮ್ಮ ಜಿಲ್ಲೆಯಲ್ಲಿ ನೆಲದೊಡೆತನ ಕೇಳಿ ನಡೆದ (ಉತ್ತರ ಕನ್ನಡ) ರೈತ ಜನಾಂದೋಲನದ ಸಭೆಗಳಲ್ಲೂ ದಿನಕರ ದೇಸಾಯಿ, ಪಿಕಳೆ ಮಾಸ್ತರ ಈ ಬಗ್ಗೆ ಭವಿಷ್ಯ ನುಡಿದಿದ್ದರು. 'ಜನಸೇವಕ' ಸಾಪ್ತಾಹಿಕದಲ್ಲೂ ಒಮ್ಮೆ ಬರೆದ ನೆನಪು. ಬಂದೂಕಿನಿಂದ ಬಗೆಹರಿಯುವ ಸಮಸ್ಯೆ ಇದಲ್ಲ ಎಂಬ ಅರಿವು ಎರಡೂ ಕಡೆಯವರಿಗೆ ತಿಳಿದೇ ಇದೆ. ಆದರೂ ಜೀವಹಾನಿಗಳ ಸುದ್ದಿಯನ್ನು ಆಗಾಗ್ಗೆ ಕೇಳುತ್ತಲೇ ಬಂದಿದ್ದೇವೆ. ಈ ನೆಲದಲ್ಲಿ ಹುಟ್ಟಿದವರಿಗೆಲ್ಲ ಸಮಾನವಾಗಿ ಬದುಕುವ ಹಕ್ಕಿದೆ ಎಂಬ ಸಾಮಾನ್ಯ ಜ್ಞಾನ ಸರಕಾರಕ್ಕೂ - ಪಟ್ಟಭದ್ರರಿಗೂ ಇಲ್ಲವೆಂದು ನಂಬುವುದಾದರೂ ಹೇಗೆ?... ಪ್ರವಾಹದ ವಿರುದ್ಧ ಈಜಿ ಗೆಲ್ಲಬಲ್ಲೆವೆಂದು ಅವರಿಗೂ ನಂಬಿಕೆಯಿಲ್ಲ. ಬ್ರಿಜ್ಜು, ಮುರಿದಿದೆ. 'ದಿಟ್ಟ ಹನುಮ' ಹುಟ್ಟಿ ಬರಬೇಕು. ಆಳುವ ವರ್ಗದಲ್ಲಿ ಆ ದಿಟ್ಟತನ ಇಲ್ಲದೆ ಹೋದರೆ ಭವಿಷ್ಯ ಇನ್ನಷ್ಟು ಭೀಕರವಾದೀತು.

ಕೇಂದ್ರ ಸರಕಾರವೇ ಇರಲಿ, ರಾಜ್ಯ ಸರಕಾರವೇ ಇರಲಿ, ನಕ್ಸಲ್ ಸಮಸ್ಯೆಯು ಬದುಕಿಗೆ ನೇರ ತಳುಕು ಹಾಕಲ್ಪಟ್ಟ ಒಂದು ಮುಖ್ಯ ಸಮಸ್ಯೆಯೆಂದು ಅರ್ಥ ಮಾಡಿಕೊಂಡು, ಒಂದು ಹೆಜ್ಜೆ ಮುಂದೆ ಇಡಬೇಕು. ಹೋರಾಟಗಾರರೂ ಕೂಡ, ಬುಡಕಟ್ಟು ಜನರ, ರೈತರ ಹಿತಸಂಬಂಧಿ ಮಾತುಕತೆಗಳಲ್ಲಿ ಭಾಗವಹಿಸಬೇಕು. ಉದ್ದೇಶ 'ಜನಪರ'ವಾಗಿದ್ದರೆ ಪ್ರತಿಷ್ಠೆ ಖಂಡಿತ ಅಡ್ಡಿಯಾಗಲಾರದು. ಆದರೆ ಇದನ್ನು ಯಾರು ಯಾರಿಗೆ ಹೇಳಬೇಕು? ನೀವು-ನಿಮ್ಮ 'ಹೊಸತು' – ಇದ್ದುದರಲ್ಲೇ ನನಗೊಂದು ಬೆಳಕಿನ ಕಿಂಡಿಯಂತೆ ಕಂಡಿದ್ದೀರಿ. ರಾಜಶೇಖರರ ಲೇಖನ ತಲುಪ ಬೇಕಾದವರ ಎದೆಯ ಕದ ತಟ್ಟಲಿ ಎಂದು ಹಾರೈಸುತ್ತೇನೆ.

ಅಂಕೋಲಾ — ವಿಷ್ಣು ನಾಯ್ಕ




## ಲೋಕಾರ್ಪಣೆ ಸಮಾರಂಭ

ನವಕರ್ನಾಟಕ ಪ್ರಕಾಶನದ 'ಚಿನ್ನದ ಹಬ್ಬ'ದ ಕೊಡುಗೆ
'ಕರ್ನಾಟಕ ಕಲಾದರ್ಶನ' ಬೃಹತ್ ಕೃತಿಯ ಲೋಕಾರ್ಪಣೆ ಸಮಾರಂಭ

ದಿನಾಂಕ ೨೯-೮-೨೦೦೦ರ ಭಾನುವಾರ ಬೆಳಗ್ಗೆ ೧೦ ಗಂಟೆಗೆ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರ ಸಭಾಂಗಣದಲ್ಲಿ ನಡೆಯಲಿದೆ.

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿ, ಖ್ಯಾತ ಕವಿ, ನಾಟಕಕಾರ ಡಾ|| ಚಂದ್ರಶೇಖರ ಕಂಬಾರರು ಸಮಾರಂಭದ ಅಧ್ಯಕ್ಷತೆ ವಹಿಸುತ್ತಾರೆ.

ಕಲಾವಿದೆ, ರಂಗಕರ್ಮಿ, ರಾಜ್ಯಸಭಾ ಸದಸ್ಯೆ, ಡಾ|| ಬಿ. ಜಯಶ್ರೀ ಅವರು ಕಲಾದರ್ಶನದ ಒಂದು ಸಂಪುಟವನ್ನು, ಖ್ಯಾತ ಚಿತ್ರಕಾರ ಶ್ರೀ ಎಸ್. ಜಿ. ವಾಸುದೇವ ಅವರು ಮತ್ತೊಂದು ಸಂಪುಟವನ್ನು ಅನಾವರಣಗೊಳಿಸುತ್ತಾರೆ.

ಸಂಪುಟದ ಸಂಪಾದಕರುಗಳು ಉಪಸ್ಥಿತರಿರುತ್ತಾರೆ. ಈ ಸಮಾರಂಭಕ್ಕೆ ತಮಗೆಲ್ಲರಿಗೂ ಆತ್ಮೀಯ ಸ್ವಾಗತ.

## ಗೀತಾಂಜಲಿ

### ಗೀತ - ೧

ನನ್ನನ್ನು ನೀ ಕೊನೆಯಿಲ್ಲದವನನ್ನಾಗಿ ಮಾಡಿದ್ದೀ. ನಿನ್ನ ಸಂತೋಷ ಹಾಗಿದೆ.
ಈ ಅಭದ್ರ ಪಾತ್ರೆಯನ್ನು ಮೇಲಿಂದ ಮೇಲೆ ಖಾಲಿ ಮಾಡುತ್ತೀ ಮತ್ತು ಅದನ್ನು ಸದಾ
ಹೊಸ ಜೀವದಿಂದ ತುಂಬುತ್ತೀ.
ತೆಳುವಾದ ಟೊಳ್ಳು ಬಿದಿರಿನ ಈ ಚಿಕ್ಕ ಕೊಳಲನ್ನು ನೀನು ಬೆಟ್ಟಕೊಳ್ಳಗಳ
ಮೇಲೆ ಒಯ್ದಿದ್ದೀ. ಮತ್ತು ಅದರಲ್ಲ ಶಾಶ್ವತವಾದ ಹೊಸ ರಾಗಗಳನ್ನು ಉಸುರಿದ್ದೀ.
ನಿನ್ನ ಹಸ್ತಗಳ ಅಮೃತ ಸ್ಪರ್ಶದಿಂದ ನನ್ನ ಚಿಕ್ಕ ಹೃದಯ ಮೇರೆ ಮೀರಿದ
ಸಂತಸದಿಂದ ವರ್ಣನಾತೀತವಾದ ಮಾತಿಗೆ ಜನ್ಮ ಕೊಡುತ್ತದೆ.
ನಿನ್ನ ಅನಂತ ಕೊಡುಗೆಗಳು ನನ್ನ ಅತೀ ಚಿಕ್ಕವಾದ ಈ ಕೈಗಳಿಗೆ ಮಾತ್ರ
ಬರುತ್ತವೆ. ಯುಗಗಳು ಕಳೆಯುತ್ತವೆ, ಮತ್ತು ನೀನು ಸುರಿಸುತ್ತೀ. ಮತ್ತು
ತುಂಬಿಸಿಕೊಳ್ಳಲು ಇನ್ನೂ ಸ್ಥಳವಿದೆ.

### ಗೀತ - ೨

ನನ್ನ ದೇವರೇ ನೀನು ಹೇಗೆ ಹಾಡುತ್ತೀಯೆಂದು ನಾನರಿಯೆ. ಮೌನಪೂರ್ಣ
ಆಶ್ಚರ್ಯದಿಂದ ನಾನು ಯಾವಾಗಲೂ ಕೇಳುತ್ತೇನೆ.
ನಿನ್ನ ಸಂಗೀತದ ಬೆಳಕು ಜಗತ್ತನ್ನು ಪ್ರಕಾಶಮಾನವಾಗಿಸುತ್ತದೆ. ನಿನ್ನ
ಸಂಗೀತದ ಜೀವದುಸಿರು ಗಗನದಿಂದ ಗಗನಕ್ಕೆ ಚಿಮ್ಮುತ್ತದೆ. ನಿನ್ನ ಸಂಗೀತದ ಪವಿತ್ರ
ಪ್ರವಾಹ ಎಲ್ಲ ಅಡೆತಡೆಯ ಶಿಲೆಗಳನ್ನು ಸೀಳಿ ಮುನ್ನುಗ್ಗುತ್ತದೆ.
ನನ್ನ ಹೃದಯ ನಿನ್ನ ಹಾಡಿನೊಡನೆ ಕೂಡ ಬಯಸುತ್ತದೆ. ಆದರೆ ಧ್ವನಿ
ಪಡೆಯುವ ಹೋರಾಟ ನಿರರ್ಥಕವಾಗುತ್ತದೆ. ನಾನು ಮಾತಾಡುವೆ, ಆದರೆ ಮಾತು
ಹಾಡಾಗಿ ಹೊಮ್ಮುವುದಿಲ್ಲ. ನಾನು ಗೊಂದಲಗೆಟ್ಟು ಚೀರುತ್ತೇನೆ. ಆಹಾ ! ನನ್ನ ದೇವರೇ,
ನಿನ್ನ ಸಂಗೀತದ ಅಸಂಖ್ಯ ಬಲೆಗಳಲ್ಲಿ ನನ್ನ ಹೃದಯವನ್ನು ನೀನು ಕೈದು ಮಾಡಿರುತ್ತೀ !



ಅನುವಾದ : ವ್ಹಿ. ಎಂ. ಶೆಟ್ಟರ
'ಸುಶೀಲ', ಮೈಗೂರು ರಸ್ತೆ
ಜಮಖಂಡಿ - ೫೮೭ ೩೦೧

೧೯೮೪ ಡಿಸೆಂಬರ್ ೨ರ ಮಧ್ಯರಾತ್ರಿ ಭೋಪಾಲ್ ಯೂನಿಯನ್ ಕಾರ್ಬೈಡ್ ಕಾರ್ಖಾನೆಯಲ್ಲಿ ಸೋರಿಕೆಗೊಂಡು ಹೊರಬಂದ ಸುಮಾರು ೪೦ ಟನ್ ಮಿಥೈಲ್ ಐಸೋ ಸೈಯನೇಟ್ (ಮಿಕ್) ಅನಿಲ ಸುತ್ತಮುತ್ತ ಇದ್ದ ಗುಡಿಸಲು ವಾಸಿಗಳತ್ತ ಧಾವಿಸಿ, ನಂತರ ಇಡೀ ನಗರವನ್ನು ಆವರಿಸಿದಾಗ ಸಂಭವಿಸಿದ ಮಾರಣಹೋಮ ಜಗತ್ತಿನ ಅತಿ ಕೆಟ್ಟ ಕೈಗಾರಿಕಾ ದುರ್ಘಟನೆಯೆಂದೇ ಕರೆಯಲ್ಪಟ್ಟಿದೆ. ಇದನ್ನು ಕೇವಲ ಒಂದು ದುರ್ಘಟನೆಯೆಂದು ಕರೆಯುವುದು ಸಮಂಜಸವಲ್ಲವೇನೊ. ಏಕೆಂದರೆ ಇದೊಂದು ಮಾನವಕೃತ ಅಪರಾಧ. ಬಂಡವಾಳಶಾಹಿ ವ್ಯವಸ್ಥೆ ಲಾಭಕ್ಕಾಗಿ ಬಡದೇಶಗಳ ಜನರ ಜೀವವನ್ನು 'ಹೇಗೆ ಬಲಿಕೊಡುತ್ತದೆ ಮತ್ತು ನಿಕೃಷ್ಟವಾಗಿ ಕಾಣುತ್ತದೆ ಎಂಬುದಕ್ಕೆ ಭೋಪಾಲ್ ದುರಂತ ಒಂದು ಜ್ವಲಂತ ನಿದರ್ಶನ. ಇನ್ನೊಂದೆಡೆ ಇದನ್ನು ತಡೆಯಬಹುದಾದ ಕಾನೂನುಗಳಿದ್ದರೂ, ಅವುಗಳನ್ನು ಜಾರಿಗೊಳಿಸದ ಭಾರತ ಸರ್ಕಾರದ ಅಧಿಕಾರಶಾಹಿಯ ಹಾಗೂ ರಾಜಕಾರಣಿಗಳ ಬೇಜವಾಬ್ದಾರಿತನದ ಸಂಕೇತ. ಬಂಡವಾಳಶಾಹಿ ವ್ಯವಸ್ಥೆಯ ಪರಮೋಚ್ಚ ಗುರಿಯನ್ನು ಅತ್ಯಂತ ಕರಾರುವಾಕ್ಕಾಗಿ ಚಿತ್ರಿಸಿದವನು ಕಾರ್ಲ್ ಮಾರ್ಕ್ಸ್. ಈ ವ್ಯವಸ್ಥೆಯ ಕಟ್ಟಾ ಬೆಂಬಲಿಗ ಮಿಲ್ಟನ್ ಫ್ರೀಡ್‌ಮನ್‌ನ ಪ್ರಕಾರ ಬಂಡವಾಳದ ಸಾಮಾಜಿಕ ಜವಾಬ್ದಾರಿಯೆಂದರೆ ಲಾಭ, ಅಧಿಕ ಲಾಭ, ಅತ್ಯಧಿಕ ಲಾಭಗಳಿಕೆ. ಈ ವ್ಯವಸ್ಥೆಯಲ್ಲಿ ಲಾಭದ ಮುಂದೆ ಭೋಪಾಲ್‌ನಂತಹ ದುರಂತಗಳು ಗೌಣ. ಮಾರ್ಕ್ಸ್‌ನ ವಿಶ್ಲೇಷಣೆ ಎಷ್ಟು ಸತ್ಯಾಂಶವುಳ್ಳದ್ದು ಎನ್ನಿಸುವುದು ಈ ಕಾರಣದಿಂದಲೇ.

ಭೋಪಾಲ್ ಅನಿಲ ದುರಂತ ಮಾನವಕೃತ ಅಪರಾಧವೆಂಬುದು ಈಗಾಗಲೇ ಎಲ್ಲರಿಗೂ ತಿಳಿದಿರುವ ಸಂಗತಿ. ಮೊದಲನೆಯದಾಗಿ, ೪೦ ಟನ್‌ಗಳಷ್ಟು ವಿಷಾನಿಲವನ್ನು ಶೇಖರಿಸಿಡುವ ಅಗತ್ಯವಿರಲಿಲ್ಲ. ಎರಡನೆಯದಾಗಿ, ಯೂನಿಯನ್ ಕಾರ್ಬೈಡ್‌ನ ಆಡಳಿತವರ್ಗ ಉತ್ಪಾದನಾ ವೆಚ್ಚವನ್ನು ಕಡಿತಗೊಳಿಸುವ ಸಲುವಾಗಿ ಈ ವಿಷಾನಿಲವನ್ನು ಶೇಖರಿಸಿಡಲು ಬೇಕಾಗಿದ್ದ ಸುರಕ್ಷಾಕ್ರಮಗಳಿಗೆ ವಿದಾಯ ಹೇಳಿತು. ಮೂರನೆಯದಾಗಿ, ಈ ರೀತಿ ವಿಷಾನಿಲವನ್ನು ಶೇಖರಿಸಿಟ್ಟಾಗ ಆಗಬಹುದಾದ ದುರ್ಘಟನೆಯ ಬಗ್ಗೆ ಕಂಪನಿಯ ಅಧ್ಯಕ್ಷ ಅಮೆರಿಕಾದ ವಾರೆನ್ ಆ್ಯಂಡರ್‌ಸನ್‌ಗೆ ಪೂರ್ವ ಮಾಹಿತಿಯಿತ್ತು. ಈ ಮೇಲ್ಕಂಡ ಮೂರು ಅಂಶಗಳನ್ನು ಗಮನಿಸಿ ವಿಶ್ಲೇಷಿಸಿದಲ್ಲಿ ಇದೊಂದು ತಪ್ಪಿಸಬಹುದಾಗಿದ್ದ ದುರಂತವೆಂಬುದು ಸ್ಪಷ್ಟವಾಗುತ್ತದೆ ಮತ್ತು ಆಕಸ್ಮಿಕ ಸಂಭವಿಸಿ ಕೆಲ ದಿನಗಳಾದರೂ ಎಂ.ಐ.ಸಿ. ವಿರೋಧಿ ರಾಸಾಯನಿಕ (ಆ್ಯಂಟಿಡೋಟ್)ದ ಹೆಸರು ಇಲ್ಲಿಯವರೆಗೂ ಹೇಳದೆ ಹೋದದ್ದು ಪೂರ್ವಯೋಜಿತ ದುರ್ಘಟನೆಯ ಆಯಾಮ ಪಡೆಯುತ್ತದೆ. ಆದರೆ ನಮ್ಮ ವ್ಯವಸ್ಥೆ - ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ – ಈ ದೃಷ್ಟಿಕೋನ ತಾಳದೆ ಇದೂ ಕೂಡ ಎಂದಿನಂತೆ ಜರುಗುವ ಕಾರ್ಖಾನೆಯ ಒಂದು ಸಾಮಾನ್ಯ ದುರ್ಘಟನೆಯೆಂದೇ ಪರಿಗಣಿಸಿ, ಅದರಂತೆ ನಡೆದುಕೊಂಡದ್ದು ನಂತರದ ಬೆಳವಣಿಗೆಗಳಿಂದ ವೇದ್ಯವಾಗುತ್ತದೆ.



# ಭೋಪಾಲ್
## ಅನಿಲ ದುರ್ಘಟನೆ - ಅಂತ್ಯವಿಲ್ಲದ ದುರಂತ

○ **ಮುರಳಿಧರ**




ಕಾನೂನು ಸಚಿವ ವೀರಪ್ಪ ಮೊಯ್ಲಿ ಭೋಪಾಲ್ ನ್ಯಾಯಾಲಯದ ತೀರ್ಪಿನ ಬಗ್ಗೆ ಪ್ರತಿಕ್ರಿಯಿಸುತ್ತ ಈ ಪ್ರಕರಣದಲ್ಲಿ ನ್ಯಾಯ ವಿಳಂಬ ಮಾತ್ರವಲ್ಲ, ನ್ಯಾಯವೂ ದೊರೆತಿಲ್ಲ; ನ್ಯಾಯವನ್ನು ಹೂಳಲಾಗಿದೆ ಎಂದು ಕಂಬನಿಗರೆದಿದ್ದಾರೆ. ಇತ್ತೀಚಿನವರೆಗೂ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾಗಿದ್ದು, ನಿವೃತ್ತರಾಗುತ್ತಿದ್ದಂತೆಯೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರಾಗಿರುವ ಬಾಲಕೃಷ್ಣನ್ ಅವರು ಈ ಪ್ರಕರಣದ ದೀರ್ಘ ವಿಳಂಬದ ಬಗ್ಗೆ ಹೇಳಿಕೆ ನೀಡಿದ್ದಾರೆ. ಇವರ ಹೇಳಿಕೆಗಳು ಎಷ್ಟು ಕೃತ್ರಿಮವಾಗಿವೆ ಎಂಬುದು ತಿಳಿಯುವುದು ಕಷ್ಟವೇನಲ್ಲ. ನಮ್ಮ ಕೇಂದ್ರ ಸರ್ಕಾರ, ಮಧ್ಯಪ್ರದೇಶದ ರಾಜ್ಯ ಸರ್ಕಾರ, ಕಾಂಗ್ರೆಸ್ ಪಕ್ಷದ ಮಂತ್ರಿಗಳು, ಸರ್ವೋಚ್ಚ ನ್ಯಾಯಾಲಯ ಭೋಪಾಲ್‌ನ ಮಾರಣ ಹೋಮದ ಪ್ರಕರಣದಲ್ಲಿ ಈವರೆಗೆ ಆಡಿರುವ ನಾಟಕವನ್ನು ಚರಿತ್ರೆ ದಾಖಲಿಸಿದೆ.

ಸರ್ಕಾರದ ಅಂಕಿ-ಅಂಶಗಳ ಪ್ರಕಾರ ಭೋಪಾಲ್‌ನ ಅನಿಲ ದುರಂತದಲ್ಲಿ ಸತ್ತವರ ಸಂಖ್ಯೆ ಸುಮಾರು ೧೬,೦೦೦. ಇದರಿಂದ ಬಾಧಿತರಾದವರ ಒಟ್ಟು ಸಂಖ್ಯೆ ೫,೭೮,೦೦೦. ಅಲ್ಲದೆ, ನಂತರ ಜನಿಸಿದ ವಿಕೃತ ಮಕ್ಕಳು ಬೇರೆ; ಮತ್ತು ಪೀಳಿಗೆಯಿಂದ ಪೀಳಿಗೆಗೂ ವಿಷಾನಿಲದ, ದುಷ್ಪರಿಣಾಮ ಇಂದಿಗೂ ಮುಂದುವರಿದಿದೆ. ಯೂನಿಯನ್ ಕಾರ್ಬೈಡ್ ಕಾರ್ಖಾನೆಯಲ್ಲಿ ಉಳಿದಿರುವ ತ್ಯಾಜ್ಯ ವಸ್ತುಗಳನ್ನು ಅಲ್ಲಿಂದ ಹೊರಸಾಗಿಸಿಲ್ಲ. ಹಾಗಾಗಿ ಸುತ್ತಮುತ್ತಲಿನ ವಾತಾವರಣ ಇವತ್ತಿಗೂ ಮಲಿನವಾಗೇ ಉಳಿದುಕೊಂಡುಬಂದಿದೆ. ಕುಡಿಯುವ ನೀರೂ ಕಲುಷಿತಗೊಂಡಿದೆ. ಭೋಪಾಲ್‌ನ ಈ ಪ್ರದೇಶದ ನೀರು ಕುಡಿಯಲು ಯೋಗ್ಯವಲ್ಲವೆಂದು ಬ್ರಿಟನ್ನಿನ ಪ್ರಯೋಗಾಲಯ ತಿಳಿಸಿದೆ. ಆದರೆ ಕೆಲವು ಅಯೋಗ್ಯ ರಾಜಕಾರಣಿಗಳು ಈಗ ಭೋಪಾಲ್‌ನಲ್ಲಿ ಎಲ್ಲವೂ ಚೆನ್ನಾಗಿದೆ ಎಂದು ಸಾರಿ ಹೇಳುವ ಮೂಲಕ ದುಷ್ಕರ್ಮಿಗಳ ಸಾಲಿಗೆ ಸೇರಿದ್ದಾರೆ.

ಇದೀಗ ಭೋಪಾಲ್‌ನಿಂದ ಮತ್ತೊಂದು ಭಾರಿ ದುರ್ಘಟನೆ ಜರುಗಿರುವುದು ವರದಿಯಾಗಿದೆ. ಇದು ಭೋಪಾಲ್‌ನ ಸಂತ್ರಸ್ತರನ್ನು ಮಾತ್ರವಲ್ಲ, ಪ್ರಪಂಚದ ಎಲ್ಲ ಹೃದಯವಂತರನ್ನೂ ತಲ್ಲಣಗೊಳಿಸಿದೆ. ೨೬ ವರ್ಷ ನಡೆದ ಕೋರ್ಟ್ ಪ್ರಕರಣ ಕೊನೆಗೊಂಡು ನ್ಯಾಯಾಲಯದ ತೀರ್ಪು ಹೊರಬಿದ್ದು ಯೂನಿಯನ್ ಕಾರ್ಬೈಡ್ ಕಂಪನಿಯ ಎಂಟು ಅಧಿಕಾರಿಗಳಿಗೆ ಎರಡು ವರ್ಷ ಕಾರಾಗೃಹದ ಶಿಕ್ಷೆ ಮತ್ತು ಕಂಪನಿಗೆ ೫ ಲಕ್ಷ ರೂಪಾಯಿ ದಂಡ ವಿಧಿಸಿದೆ. ಇವರೊಳಗೆ ಒಬ್ಬ ಆಪಾದಿತ ಮೃತನಾಗಿದ್ದಾನೆ. ಯೂನಿಯನ್ ಕಾರ್ಬೈಡ್‌ನ ಭಾರತದ ಕಂಪನಿಯ ಅಧ್ಯಕ್ಷನಾಗಿದ್ದ ಕೇಶವ ಮಹೀಂದ್ರನಿಗೆ ಈಗ ೮೫ ವರ್ಷ. ಭೋಪಾಲ್‌ನ ನ್ಯಾಯಾಲಯದಲ್ಲಿ ಡಿಸೆಂಬರ್ ೧೯೮೪ರಲ್ಲಿ ಪ್ರಕರಣ ದಾಖಲಾದಾಗ ಯೂನಿಯನ್ ಕಾರ್ಬೈಡ್ ಕಂಪನಿಯ ಅಧ್ಯಕ್ಷ ಅಮೆರಿಕಾದ ವಾರೆನ್ ಆ್ಯಂಡರ್‌ಸನ್ ಕೂಡ ಒಬ್ಬ ಅಪರಾಧಿ. ಈತ ದುರಂತ ಸಂಭವಿಸಿದ ನಂತರ ಭಾರತಕ್ಕೆ ಬಂದಾಗ, ಮೂರು ಗಂಟೆಗಳ ಕಾಲ ಬಂಧನದಲ್ಲಿಟ್ಟಂತೆ ನಾಟಕ ಮಾಡಿ, ಜಾಮೀನು ಕೊಡಿಸಿ, ಯಾವ ತೊಂದರೆಯೂ ಆಗದಂತೆ ನೋಡಿಕೊಂಡು ಅವನನ್ನು ಅಮೆರಿಕಾಗೆ ಸುರಕ್ಷಿತವಾಗಿ ಕಳುಹಿಸಿಕೊಟ್ಟ 'ಕೀರ್ತಿ' ಮಧ್ಯಪ್ರದೇಶದ ಅಂದಿನ ಮುಖ್ಯಮಂತ್ರಿ ಅರ್ಜುನ್‌ಸಿಂಗ್‌ಗೆ ಸಲ್ಲುತ್ತದೆ. ಅಂದಿನಿಂದ ಇಂದಿನವರೆಗೂ ಈ ಆ್ಯಂಡರ್‌ಸನ್ ನ್ಯಾಯಾಲಯದ ಮುಂದೆ ಹಾಜರಾಗದೆ ತಲೆಮರೆಸಿಕೊಂಡಿದ್ದಾನೆ. ಅಂದರೆ ಪ್ರಕರಣ ಮುಗಿಯುವವರೆಗೂ ಈತ ಅಪರಾಧಿಯೆ. ಈತನನ್ನು ಭಾರತಕ್ಕೆ ಕಳುಹಿಸಬೇಕೆಂದು ಭಾರತ ಸರ್ಕಾರ ೨೦೦೩ರಲ್ಲಿ ಅಮೆರಿಕದ ಸರ್ಕಾರವನ್ನು ಕೇಳಿದ್ದು, ಅಮೆರಿಕಾ ಆ ಮನವಿಯನ್ನು ನಿರಾಕರಿಸಿತ್ತು. ನಂತರ ಸರ್ಕಾರ ಯಾವ ಕ್ರಮ ತೆಗೆದುಕೊಂಡಿತು ಎಂಬುದಕ್ಕೆ ದಾಖಲೆಗಳಿಲ್ಲ. ಆ ಸಂದರ್ಭದಲ್ಲಿ ಸಿ.ಬಿ.ಐ.ನ ಜಂಟಿ ನಿರ್ದೇಶಕರಾಗಿದ್ದ ಲಾಲ್ ಎಂಬುವರು ಇತ್ತೀಚೆಗೆ ತಮ್ಮ ಮೌನ ಮುರಿದು ವಾರೆನ್ ಆ್ಯಂಡರ್‌ಸನ್ ಮೇಲೆ ಕ್ರಮ ಜರುಗಿಸದಂತೆ ವಿದೇಶಾಂಗ ಮಂತ್ರಾಲಯದ ಒತ್ತಡವಿತ್ತೆಂದು ಹೇಳಿದ್ದಾರೆ. ಹಾಗೆಯೇ ಭೋಪಾಲ್‌ನಲ್ಲಿ ಅಂದಿನ ದಿನಗಳಲ್ಲಿ ಕಲೆಕ್ಟರ್ ಆಗಿದ್ದ ಮೋತಿಸಿಂಗ್ ಮಧ್ಯಪ್ರದೇಶದ ಮುಖ್ಯ ಸಚಿವಾಲಯದಿಂದ ಬಂದ ಒತ್ತಡದ ಬಗ್ಗೆ ನುಡಿದಿದ್ದಾರೆ. ಭಾರತ ಸರ್ಕಾರ ಒಬ್ಬ ಅಪರಾಧಿಗೆ ಯಾವ ರೀತಿಯ ರಕ್ಷಣೆ ನೀಡಿದೆ ಎಂಬುದು ಅರಿವಾಗುತ್ತದೆ. ಅಂದಿನ ವಿದೇಶಾಂಗ ಕಾರ್ಯದರ್ಶಿ ತಾನೇ ಹೇಗೆ ಆ್ಯಂಡರ್‌ಸನ್ ಬಿಡುಗಡೆಗೆ ಅನುಮತಿ ನೀಡಿದೆ ಎಂದೂ, ಇದರಿಂದ ಅದು ಅಂದಿನ ಪರಿಸ್ಥಿತಿಯಲ್ಲಿ ಸರಿಯಾಗಿತ್ತೆಂದೂ ಸಮರ್ಥಿಸಿಕೊಂಡಿದ್ದಾರೆ. ಇದು ದೊಡ್ಡ ತಲೆಗಳನ್ನು ರಕ್ಷಿಸುವ ಹಂಚಿಕೆಯಾಗಿದೆ ಎಂಬುದನ್ನು ತಳ್ಳಿಹಾಕುವಂತಿಲ್ಲ. ಈ ಕಾರಣದಿಂದಾಗಿ ಭಾರತ ಸರ್ಕಾರವೇ ಈಗ ಜನತೆಯ ಮುಂದೆ ಅಪರಾಧಿ ಸ್ಥಾನದಲ್ಲಿದೆ. ಸರ್ಕಾರಗಳ ಪಾತ್ರವೇನೇ ಇರಲಿ, ನ್ಯಾಯಾಲಯವೇ ಆ್ಯಂಡರ್‌ಸನ್‌ಗೆ ಶಿಕ್ಷೆ ವಿಧಿಸಿಲ್ಲ ಎಂಬುದು ಸಂಶಯಕ್ಕೆ ಎಡೆಮಾಡಿಕೊಡುವ ಸಂಗತಿ.

ಭಾರತ ಸರ್ಕಾರದ ಪಾತ್ರ ವಾರೆನ್ ಆ್ಯಂಡರ್‌ಸನ್‌ನನ್ನು ರಕ್ಷಿಸುವುದಕ್ಕೆ ಮಾತ್ರ ಸೀಮಿತವಾಗಲಿಲ್ಲ. ಯೂನಿಯನ್ ಕಾರ್ಬೈಡ್ ಕಂಪನಿ ದಿವಾಳಿಯಾಗುವುದನ್ನು ತಪ್ಪಿಸಬೇಕಾದುದು ತನ್ನ ಶ್ರೇಷ್ಠ ಕರ್ತವ್ಯವೆಂಬಂತೆ ಕಂಪನಿಯ ಜೊತೆ ಪರಿಹಾರದ ಬಗ್ಗೆ ಒಪ್ಪಂದವನ್ನೂ ಮಾಡಿಕೊಂಡಿತು. ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದೆ ಈ ಒಪ್ಪಂದ ಕುರಿತ ಚರ್ಚೆ ಬಂದಾಗ ಚೌಕಾಸಿ ಮಾಡಿ ಒಟ್ಟು ೭೧೩ ಕೋಟಿ ರೂ. ಪರಿಹಾರಧನ ನೀಡಬೇಕೆಂದು ನಿರ್ಧರಿಸಲಾಯಿತು. ಜೊತೆಗೆ ಯೂನಿಯನ್ ಕಾರ್ಬೈಡ್ ಕಂಪೆನಿಯ ಮೇಲಿದ್ದ ಎಲ್ಲ ಮೊಕದ್ದಮೆಗಳನ್ನು ಸರ್ವೋಚ್ಚ ನ್ಯಾಯಾಲಯ ರದ್ದುಗೊಳಿಸಿತು. ಆದರೆ ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಪ್ರತಿಭಟನೆಯಿಂದಾಗಿ ಸರ್ವೋಚ್ಚ ನ್ಯಾಯಾಲಯ ತನ್ನ ತೀರ್ಪನ್ನು ಪುನರ್ ವಿಮರ್ಶೆಗೆ ಒಳಪಡಿಸಿತು. ಭೋಪಾಲ್ ಸಂತ್ರಸ್ತರಿಗೆ ದೊರೆತ ಪರಿಹಾರ ಧನ ತಲಾ ೧೨,೪೧೦ ರೂಪಾಯಿಗಳು, ಅಷ್ಟೆ!

ನಂತರ ೧೯೯೬ರಲ್ಲಿ ಸರ್ವೋಚ್ಚ ನ್ಯಾಯಾಲಯ ತನ್ನ ಹಿಂದಿನ ತೀರ್ಪನ್ನು ಪುನಃ ಪರಿಶೀಲಿಸಿ, ಅಪರಾಧಿಗಳ ಮೇಲೆ ಕೇವಲ ನಿರ್ಲಕ್ಷತೆಯ ಅಪರಾಧವನ್ನು ಮಾತ್ರ ಹೊರಿಸಲು ಆದೇಶಿಸಿತು. ಇದು ಭಾರತದ ಸರ್ವೋಚ್ಚ ನ್ಯಾಯಾಲಯ ಭೋಪಾಲ್ ದುರಂತದಲ್ಲಿ ಮಡಿದವರಿಗೆ ಮತ್ತು ನೊಂದವರಿಗೆ ಕೊಟ್ಟ 'ಕೊಡುಗೆ'! ಇತ್ತೀಚೆಗೆ ಈ ಬಗ್ಗೆ ಪ್ರತಿಕ್ರಿಯಿಸುತ್ತ ಅಂದಿನ ಮುಖ್ಯ ನ್ಯಾಯಮೂರ್ತಿ ಅಹಮದಿಯವರು ತಮ್ಮ ಕಾರಿನ ಚಾಲಕ ಒಂದು ಮಾರಣಾಂತಿಕ ಅಪಘಾತ ಮಾಡಿದರೂ ಇಂದಿನ ಕಾನೂನಿನಂತೆ ತಮ್ಮ ಮೇಲೆ ಕೊಲೆಯ ಆರೋಪ ಹೊರಿಸಲು ಸಾಧ್ಯವಿಲ್ಲವೆಂದು ಹೇಳಿ ಅಂದು ಸರ್ವೋಚ್ಚ ನ್ಯಾಯಾಲಯದಲ್ಲಿ ತಾವು ನೀಡಿದ್ದ ತೀರ್ಪನ್ನು ಸಮರ್ಥಿಸಿಕೊಂಡಿದ್ದಾರೆ. ಭೋಪಾಲ್‌ನ ದುರ್ಘಟನೆಯನ್ನು ಕೇವಲ ಒಂದು ರಸ್ತೆ ಅಪಘಾತದಂತೆ ಭೋಪಾಲ್‌ನ ನ್ಯಾಯಾಲಯ ತೀರ್ಮಾನಿಸಿದ್ದರೆ ಅದಕ್ಕೆ ನಮ್ಮ ಸರ್ವೋಚ್ಚ ನ್ಯಾಯಾಲಯವೇ ಕಾರಣ ಎಂಬುದರಲ್ಲಿ ಸಂಶಯವಿಲ್ಲ.

ಭೋಪಾಲ್ ಅನಿಲ ದುರಂತ ಮುಂದಿನ ದಿನಗಳಲ್ಲಿ ಭಾರತ-ಅಮೆರಿಕಾ ಬಾಂಧವ್ಯಕ್ಕೆ ತೊಡಕಾಗಲು ನಮ್ಮ ಪ್ರಧಾನಿ ಮನಮೋಹನ ಸಿಂಗ್ ಅವರ ಭಂಟ ಮಾಂಟೆಕ್ ಸಿಂಗ್ ಅಹ್ಲುವಾಲಿಯಾ ಮತ್ತು ಚಿದಂಬರಂ ಬಿಡುವುದಿಲ್ಲ. ಅಮೆರಿಕಾದ ಅಧ್ಯಕ್ಷ ಬರಾಕ್ ಒಬಾಮ ಈ ವರ್ಷ ನವೆಂಬರ್‌ನಲ್ಲಿ ಭಾರತಕ್ಕೆ ಬರುವವನಿದ್ದಾನೆ. ಭಾರತ-ಅಮೆರಿಕ ಅನೇಕ ಒಪ್ಪಂದಗಳಿಗೆ ಸಹಿ ಹಾಕಲಿವೆ. ೧೨೩ – ಅಣು ಒಪ್ಪಂದ ಜಾರಿಗೆ ಪೂರಕವಾಗಿ ಅಣು ದುರ್ಘಟನೆ ಪರಿಹಾರ ಮಿತಿಯ ಮಸೂದೆ ಲೋಕಸಭೆಯ ಮುಂದಿದೆ. ಅಣುಸ್ಥಾವರಗಳನ್ನು ನಿರ್ಮಿಸುವ ಮತ್ತು ನಡೆಸುವ ಕಂಪನಿಗಳು ದುರ್ಘಟನೆ ನಡೆದಲ್ಲಿ ಭಾರತ ಸರ್ಕಾರಕ್ಕೆ ಕೊಡಬೇಕಾದ ಪರಿಹಾರ ಧನವನ್ನು ಮಿತಗೊಳಿಸುವಂತಹ ಕಾನೂನು ಜಾರಿಯಾಗಬೇಕೆಂದು ಅಮೆರಿಕಾವೂ ಸೇರಿದಂತೆ ಅನೇಕ ರಾಷ್ಟ್ರಗಳು ಒತ್ತಡ ಹೇರಿವೆ. ಒಬಾಮ ಭಾರತಕ್ಕೆ ಬರುವುದೊರಳಗೆ ಈ ಕಾನೂನು ಜಾರಿಯಾಗಬೇಕು. ಇನ್ನೆಷ್ಟೇ ಭೋಪಾಲ್‌ನಂತಹ ದುರಂತಗಳು ನಡೆದರೂ ಸರಿಯೇ, ಒಬಾಮನನ್ನು ಸಂಪ್ರೀತಗೊಳಿಸಬೇಕೆಂಬುದು ಮನ್‌ಮೋಹನ್ ಸಿಂಗ್‌ರ ಪರಮೋಚ್ಚ ಗುರಿ. ಯಾವ ಕಾನೂನೂ ಇಲ್ಲದಿದ್ದಾಗ ಯೂನಿಯನ್ ಕಾರ್ಬೈಡ್ ಕೊಡಬೇಕಾಗಿದ್ದ ಪರಿಹಾರ ಧನವನ್ನು ಮಿತಗೊಳಿಸಿದ ಕಾಂಗ್ರೆಸ್ ಸರ್ಕಾರಕ್ಕೆ ಇನ್ನೇನೂ ಆತಂಕವಿರುವುದಿಲ್ಲ. ಈಗಾಗಲೆ ಅಮೆರಿಕಾದ ಗೃಹಖಾತೆಯ ಒಬ್ಬ ವಕ್ತಾರನ ಪ್ರಕಾರ ಭಾರತ-ಅಮೆರಿಕಾ ಆರ್ಥಿಕ ಸಂಬಂಧಗಳು ಎಷ್ಟು ಹೆಣೆದುಕೊಂಡಿದೆ ಎಂದರೆ, ಭೋಪಾಲ್‌ನ ತೀರ್ಪು ಈ ದೇಶಗಳ ಮುಂದಿನ ದಿನಗಳ ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಂಬಂಧಗಳಿಗೆ ಅಡ್ಡಿ ಬರುವುದಿಲ್ಲ. ಇನ್ನು ವಾರೆನ್ ಆ್ಯಂಡರ್‌ಸನ್ ಅನ್ನು ಇಲ್ಲಿಗೆ ಕಳುಹಿಸಬೇಕೆಂದು ಭಾರತ ಸರ್ಕಾರ ಕೇಳುತ್ತದೆ ಎಂಬುದು ಕೇವಲ ಭ್ರಮೆ.

ಕಾನೂನು ಸಚಿವ ವೀರಪ್ಪ ಮೊಯ್ಲಿ ಭೋಪಾಲ್ ನ್ಯಾಯಾಲಯದ ತೀರ್ಪಿನ ಬಗ್ಗೆ ಪ್ರತಿಕ್ರಿಯಿಸುತ್ತ ಈ ಪ್ರಕರಣದಲ್ಲಿ ನ್ಯಾಯ ವಿಳಂಬ ಮಾತ್ರವಲ್ಲ, ನ್ಯಾಯವೂ ದೊರೆತಿಲ್ಲ; ನ್ಯಾಯವನ್ನು ಹೂಳಲಾಗಿದೆ ಎಂದು ಕಂಬನಿಗರೆದಿದ್ದಾರೆ. ಇತ್ತೀಚಿನವರೆಗೂ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾಗಿದ್ದು, ನಿವೃತ್ತರಾಗುತ್ತಿದ್ದಂತೆಯೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರಾಗಿರುವ ಬಾಲಕೃಷ್ಣನ್ ಅವರು ಈ ಪ್ರಕರಣದ ದೀರ್ಘ ವಿಳಂಬದ ಬಗ್ಗೆ ಹೇಳಿಕೆ ನೀಡಿದ್ದಾರೆ. ಇವರ ಹೇಳಿಕೆಗಳು ಎಷ್ಟು ಕೃತ್ರಿಮವಾಗಿವೆ ಎಂಬುದು ತಿಳಿಯುವುದು ಕಷ್ಟವೇನಲ್ಲ. ನಮ್ಮ ಕೇಂದ್ರ ಸರ್ಕಾರ, ಮಧ್ಯಪ್ರದೇಶದ ರಾಜ್ಯ ಸರ್ಕಾರ, ಕಾಂಗ್ರೆಸ್ ಪಕ್ಷದ ಮಂತ್ರಿಗಳು, ಸರ್ವೋಚ್ಚ ನ್ಯಾಯಾಲಯ ಭೋಪಾಲ್‌ನ ಮಾರಣಹೋಮದ ಪ್ರಕರಣದಲ್ಲಿ ಈವರೆಗೆ ಆಡಿರುವ ನಾಟಕವನ್ನು ಚರಿತ್ರೆ ದಾಖಲಿಸಿದೆ.

ಈ ಜನರು ಈಗ ಸುರಿಸುವ ಮೊಸಳೆ ಕಣ್ಣೀರು ಚರಿತ್ರೆಯ ಈ ಕರಾಳ ಅಧ್ಯಾಯವನ್ನು ಅಳಿಸಲು ಸಾಧ್ಯವಿಲ್ಲ. ಹಾಗಾಗಿ ಭೋಪಾಲ್‌ನ ಅನಿಲ ದುರ್ಘಟನೆ ಅಂತ್ಯವಿಲ್ಲದ ದುರಂತ.



ಮುರಳೀಧರ
ಬಾಸ್ಟನ್. ಅಮೆರಿಕಾ

# ನಮ್ಮ ದೇಶಕ್ಕೆ ಉಜ್ವಲ ಭವಿಷ್ಯ ಇದೆಯೇ ?



■ ಎಂ. ವಿ. ಭಟ್

ಕೆಲವು ದಿನಗಳ ಹಿಂದೆ ಮನೆಗೆ ಬಂದ ಗೆಳೆಯರೊಬ್ಬರು ಲೋಕಾಭಿರಾಮ ಮಾತನಾಡುತ್ತಾ ನನ್ನ ಕಡೆಗೆ ಒಂದು ಪ್ರಶ್ನೆ ಎಸೆದರು. ''ನಮ್ಮ ಈ ವಿಶಾಲ ದೇಶಕ್ಕೆ ಉಜ್ವಲವಾದ ಭವಿಷ್ಯ ಇದೆಯೇ'' ಎಂಬುದೇ ಅವರೆಸೆದ ಪ್ರಶ್ನೆ.

ದೂರದರ್ಶನದಲ್ಲಿ ಹೇಳುವಂತೆ 'ಥಟ್ಟನೆ' ಉತ್ತರ ಹೇಳುವುದಾದರೆ ''ಇಲ್ಲ'' ಅಂದೆ. ಯಾಕೆಂದರು. ನಿಮ್ಮಲ್ಲಿ ಕೇಳುವ ತಾಳ್ಮೆ ಸಮಯ ಇದ್ದರೆ ಕೇಳಿ, ಹೇಳುತ್ತೇನೆ ಎಂದೆ.

ಈ ದೇಶದಲ್ಲಿ ಠಕ್ಕಿನ ಯೋಗಿಗಳು, ಭೋಗಿ ಸಂನ್ಯಾಸಿಗಳು, ವಂಚಕ ಜ್ಯೋತಿಷ್ಯ ಮಾರ್ತಾಂಡಗಳು, ದೊಡ್ಡ ದೊಡ್ಡ ದೇವಸ್ಥಾನಗಳಲ್ಲಿ ದಕ್ಷಿಣೆಗಾಗಿ, ಪೂಜಾ ಕಾರ್ಯಕ್ಕಾಗಿ ಜೀವ ಹಿಂಡುವ ಪೂಜಾರಿಗಳು; ಭೂತ, ಪ್ರೇತ, ಪಿಶಾಚಿಗಳನ್ನು ತುಟಿ ಮಾತ್ರ ಅಲುಗಾಡುವ, ಯಾರ ಕಿವಿಗೂ ಕೇಳಿಸದ ಮಂತ್ರಗಳಿಂದ ಬಡಿದೋಡಿಸುವ ಮಂತ್ರವಾದಿಗಳು; ನಿಮ್ಮ ನಕ್ಷತ್ರ, ರಾಶಿಗಳಿಗೆ ಅನುಸಾರ ನಿಮ್ಮ ಮನೆಗಳಿಗೆ ಕೆಂಪು, ಹಳದಿ, ಹಸಿರು ಇತ್ಯಾದಿ ಬಣ್ಣಗಳನ್ನು ಲೇಪಿಸುವ ವಾಸ್ತುಶಾಸ್ತ್ರಿಗಳು; ಶಸ್ತ್ರಕ್ರಿಯೆ ಇಲ್ಲದೆ ಯುವತಿಯರ ಮೊಲೆಗಳ ಗಾತ್ರವನ್ನು ಹಿಗ್ಗಿಸುವ, ಅಥವಾ ಕುಗ್ಗಿಸುವ ಕ್ಲಿನಿಕ್‌ಗಳೂ; ತೊನ್ನು, ಪಿಸ್ತೂಲಾ, ಕ್ಯಾನ್ಸರ್, ಹೃದಯ ರೋಗ, ರಕ್ತದೊತ್ತಡ, ಹೆಂಗಸರ ಬಿಳಿಸೆರಗು, ಗರ್ಭಕೋಶ ಸಂಬಂಧೀ ಕಾಯಿಲೆಗಳು; ಲಿವರ್ ಡ್ಯಾಮೇಜ್, ಶ್ರವಣದೋಷ, ಅಸ್ತಮಾ, ಇತ್ಯಾದಿ ದೀರ್ಘಕಾಲದ, ಯಾರಿಂದಲೂ ಗುಣ ಪಡಿಸಲಾಗದ ರೋಗಗಳನ್ನು ಹಿಮಾಲಯದಿಂದ ತಂದ ಅತ್ಯಮೂಲ್ಯವಾದ ಧುಡೀಬೂಟಿ ಔಷಧಿಗಳಿಂದ ಗುಣಪಡಿಸುವ ವೈದ್ಯರತ್ನಗಳು; ಎಲ್ಲಾ ಬಗೆಯ ಲೈಂಗಿಕರೋಗ, ಚರ್ಮವ್ಯಾಧಿ, ಗಂಡಹೆಂಡಿರ ಲೈಂಗಿಕ ಸಮಸ್ಯೆಗಳು, ಸ್ತ್ರೀಯರ ಮುಖದ ಕಪ್ಪು ಕಲೆ, ಬೇಡದ ಮಗುವನ್ನು ಗರ್ಭಾವಸ್ಥೆಯಲ್ಲೇ ಮುಗಿಸಿಬಿಡುವ ಹೆರಿಗೆ ತಜ್ಞೆಯರು; ಕೊರಳಲ್ಲಿ ಹತ್ತು ರುದ್ರಾಕ್ಷಿ ಮಾಲೆ, ಹತ್ತು ಬೆರಳುಗಳಲ್ಲೂ ಇಷ್ಟಾರ್ಥಸಿದ್ಧಿಯ ವಜ್ರದುಂಗುರಗಳು; ಸರ್ವಾಂಗ ಕಾವಿಬಟ್ಟೆ; ಮುಖದಲ್ಲಿ ಒಂದು ಕಿಲೋ ವಿಭೂತಿ ಅಥವಾ ಕುಂಕುಮ ಧಾರಣೆ ಮಾಡಿಕೊಂಡು ಯುವತಿಯರ ಬೇಟೆಯಲ್ಲೇ ಮಗ್ನರಾಗಿರುವ ಯತಿವರ್ಯರು; ವ್ಯಭಿಚಾರದ, ಇಸ್ಪೀಟ್ ಆಟದ ಕೇಂದ್ರಗಳಾಗಿರುವ ಹಲವು ಗುಡಿ ದೇವಸ್ಥಾನಗಳು, ಆಶ್ರಮಗಳು; ಆಗರ್ಭ ಧನಿಕರಾದ ದರೋಡೆಕೋರ ಭಕ್ತರಿಂದ ತನ್ನ ತಲೆಗೆ ವಜ್ರಖಚಿತ ಚಿನ್ನದ ಕಿರೀಟಧಾರಣೆ ಮಾಡಿಸಿಕೊಳ್ಳುವ ದೇವರುಗಳು, ಹುಂಡಿಗೆ ಕಾಣಿಕೆ ಬಿದ್ದ ಹಣವನ್ನು ನುಂಗಿ, ಹೊಟ್ಟೆ ಬೆಳೆಸಿ ಪೂಜೆಗೆ ಕುಳಿತುಕೊಳ್ಳಲು ಸಾಧ್ಯವಾಗದ ಅರ್ಚಕರು; ವಿದ್ಯಾದಾನದ ಹೆಸರಿನಲ್ಲಿ ಇಂಜಿನಿಯರಿಂಗ್, ಮೆಡಿಕಲ್ ಮೊದಲಾದ ಕಾಲೇಜುಗಳನ್ನು ಸ್ಥಾಪಿಸಿ, ಸಹಾಯಧನದ ಹೆಸರಿನಲ್ಲಿ ಕೋಟಿ ಕೋಟಿ ರೂ.ಗಳಷ್ಟು ಡೊನೇಷನ್ ಹಣ ಲಪಟಾಯಿಸಿ ಅಯೋಗ್ಯ ಇಂಜಿನಿಯರುಗಳನ್ನು, ಡಾಕ್ಟರ್‌ಗಳನ್ನು ತಯಾರಿಸಿ ದೇಶಕ್ಕೆ ಅಪಾರ ಹಾನಿ ಉಂಟುಮಾಡುವ ಭೂಪತಿಗಳು; ಎಂ.ಪಿ.ಗಳು, ಎಂ.ಎಲ್.ಎ.ಗಳು, ಮಂತ್ರಿಗಳು, ಶಾಸಕರು. ಒಂದು ಕನ್ನಡ ದೈನಿಕ, ಇನ್ನೊಂದು ಇಂಗ್ಲಿಷ್ ದೈನಿಕವನ್ನು ವಾಚನಾಲಯಕ್ಕೆ ತರಿಸಿ, ಹತ್ತಾರು ಪತ್ರಿಕೆಗಳಿಗೆ ಬಿಲ್ ತಯಾರಿಸಿ ದುಡ್ಡು ದೋಚುವ ಪಂಚಾಯಿತಿ ರಾಜರು; ದೇಶವಿದೇಶಗಳಲ್ಲೂ ಆಶ್ರಮಗಳನ್ನು, ಧ್ಯಾನ, ಯೋಗ ಕೇಂದ್ರಗಳನ್ನು ಸ್ಥಾಪಿಸಿ, ಸುರಕ್ಷಿತವಾದ ಸಂಭೋಗ, ಭೋಗಕ್ಕೆ ಅನುಕೂಲತೆ ಕಲ್ಪಿಸಿಕೊಳ್ಳುವ ಯೋಗಪಟುಗಳು; ಋಷಿಪುಂಗವರು, ಮಾಜಿ, ಹಾಲಿ ಮಂತ್ರಿಗಳನ್ನು, ದೊಡ್ಡ ದೊಡ್ಡ ಅಧಿಕಾರಿಗಳನ್ನು ಶಾಸಕರನ್ನು ತಮ್ಮತ್ತ ಸೆಳೆದು ಅವರ ಭವಿಷ್ಯ ಹೇಳುವ, ಮಾರ್ಗದರ್ಶನ ನೀಡುವ, ದೋಷಪರಿಹಾರಕ್ಕೆ ಮಂತ್ರತಂತ್ರ ಹೋಮಹವನಾದಿಗಳಿಂದ ಪ್ರಾಯಶ್ಚಿತ್ತ ಮಾಡಿಸಿಕೊಳ್ಳಲು ಸಲಹೆ ನೀಡುವ, ಅಖಿಲ ಬ್ರಹ್ಮಾಂಡ ಪ್ರಪಂಚ ಖ್ಯಾತಿಯ ಜ್ಯೋತಿಷ ರತ್ನಗಳು; ಇನ್ನೂ ಅನೇಕ ಬಗೆಯ ವಂಚಕರು ರಾಜಾರೋಷವಾಗಿ ಮೆರೆಯುತ್ತಿರುವ ಈ ದೇಶಕ್ಕೆ 'ಉಜ್ವಲ' ಎಲ್ಲಿಂದ ಬಂತು, ಭವಿಷ್ಯವೇ ಇಲ್ಲ ಎನ್ನುತ್ತಿದ್ದಾಗಲೇ ಗೆಳೆಯನೊಬ್ಬ ''ನಿಮ್ಮ ಪಟ್ಟಿ ತುಂಬಾ ದೊಡ್ಡದಾಗಿದೆ. ಎಲ್ಲಿಂದ ಈ ಮಾಹಿತಿಗಳನ್ನು ಕಲೆಕ್ಟ್ ಮಾಡಿದಿರಿ'' ಎಂದು ಕೇಳಿದ.

ಮುಂಜಾನೆ ನಿಮ್ಮ ಮನೆಯ ಬಾಗಿಲಿಗೆ ಪೇಪರಿನವ ದೊಪ್ಪನೆ ಎಸೆದುಹೋಗುವ ಪೇಪರನ್ನು ಎತ್ತಿ ತೆರೆದೊಡನೆ ನಿಮ್ಮ

> ಬೆಂಗಳೂರಿನ ಜನನಿಬಿಡ ಪ್ರದೇಶದಲ್ಲಿ ಒಂದು ಕಾಳಿ ಮಂದಿರ ಇದೆ. ಮಂಗಳವಾರ, ಶುಕ್ರವಾರ ಚಿಕ್ಕಮಕ್ಕಳನ್ನು ಎತ್ತಿಕೊಂಡು ಬರುವ ಭಕ್ತರ ಸಂಖ್ಯೆ ಸಾವಿರಾರು – ಮಕ್ಕಳ ಸೊಂಟಕ್ಕೆ ಪೂಜಾರಿಗಳಿಂದ 'ತಾಯಿತ' ಕಟ್ಟಿಸಿಕೊಳ್ಳಲು. ಅದೇ ರಸ್ತೆಯ ಇಕ್ಕೆಡೆಗಳಲ್ಲೂ ಹಲವು ಮಂದಿ ದೈವಜ್ಞರು, ಮಂತ್ರವಾದಿಗಳು, ಹಸ್ತಸಾಮುದ್ರಿಕರು, ವಿಭೂತಿ ಪುರುಷರು ನಾಮಫಲಕ ತೂಗುಹಾಕಿಕೊಂಡು ಬಕಪಕ್ಷಿಗಳಂತೆ ಕುಳಿತುಕೊಂಡಿರುತ್ತಾರೆ. ಎಲ್ಲಾ ಬಗೆಯ ಸಾಂಸಾರಿಕ ಕಷ್ಟಗಳಿಗೆ, ಮುಖ್ಯವಾಗಿ ದಂಪತಿಗಳ ಲೈಂಗಿಕ ಸಮಸ್ಯೆಗಳಿಗೆ, ಕಾಳಸರ್ಪ ದೋಷಕ್ಕೆ, ಕುಜ ರಾಹು ಸಂಧಿ, ಶುಕ್ರಾರ್ಕ ಸಂಧಿ, ಶನಿದೆಶೆ ಮುಂತಾದ ಸಕಲ ದೋಷಗಳಿಗೆ, ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಪುಣ್ಯ ಪುರುಷರು ಒಂದೇ ಕಡೆ ಸಿಗುತ್ತಾರೆ.

ಕಾಲಿ ಬುಡಕ್ಕೆ ಬೀಳುವ ಕರಪತ್ರಗಳನ್ನು ಓದಿನೋಡಿ. ವಾಸ್ತುಶಿಲ್ಪಿಗಳು, ಹಸ್ತಸಾಮುದ್ರಿಕರ, ಮಂತ್ರವಾದಿಗಳ, ಜ್ಯೋತಿಷಿಗಳ, ವೈದ್ಯರ ಪರಿಪೂರ್ಣ ಮಾಹಿತಿ, ಹೋಟೆಲಿನ ಹೆಸರು, ದೂರವಾಣಿ ಸಂಖ್ಯೆ, ರೂಂ ನಂಬರ್, ಭೇಟಿಯ ಸಮಯ, ಕೊನೆಯ ಅವಕಾಶ ಇತ್ಯಾದಿ ಇತ್ಯಾದಿ ಲಭ್ಯ. ಈ ದೇಶ ಭೂಷಣಗಳು ಹೆಚ್ಚು ಸಮಯ ಅಲ್ಲಿ ತಂಗಿರುವುದಿಲ್ಲ. ಅವರದ್ದು ಸಂಚಾರಿ ಟೆಂಟ್ ! ಪ್ರತಿಯೊಂದು ನಗರಗಳಲ್ಲೂ ಸ್ವಲ್ಪ ಸಮಯ ಇದ್ದು ಜನತಾ ಸೇವೆ ಮಾಡಿ ಮುಂದಕ್ಕೆ ಗಾಡಿ ಕಟ್ಟುತ್ತಾರೆ. ಮಂತ್ರವಾದಿಗಳು, ದೈವಜ್ಞರು ಪರ್ಮನೆಂಟಾಗಿ ಇರುವುದೂ ಇದೆ. ಇನ್ನು ದೇಶಸೇವೆ ಮಾಡುವ ರಾಜಕಾರಣಿಗಳ, ಲಂಚಕೋರರ ಮಂತ್ರಿಗಳ ಮಾಹಿತಿ ಪೇಪರುಗಳಲ್ಲಿ ಬೇಕಾದಷ್ಟು ಸಿಗುತ್ತದೆ. ಇವುಗಳಲ್ಲಿ ಸ್ವಂತ ಅನುಭವಿಸಿದ ಘಟನೆಗಳ ಮಾಹಿತಿಯೂ ಸೇರಿಕೊಂಡಿದೆ. ಇನ್ನು ''ಪಟ್ಟಿ ಉದ್ದವಾಗಿದೆ'' ಅಂದಿರಿ. ಉದ್ದ ಏನು ? ಭ್ರಷ್ಟಾಚಾರಿಗಳ, ದೇಶವನ್ನು ಕೊರೆದು ತಿನ್ನುವ ಹೆಗ್ಗಣಗಳ, ಅಜ್ಞಾನ, ಮೂಢನಂಬಿಕೆಗಳೆಂಬ ಪ್ರಗತಿ ವಿರೋಧಿ ತತ್ತ್ವ ಸಿದ್ಧಾಂತಗಳ ಕುರಿತು ಒಂದು ಬೃಹತ್ ಗ್ರಂಥವನ್ನೇ ಬರೆಯಬಹುದು. ಇಂತಹವರು ಜನರನ್ನು ವಂಚಿಸಿ ಹೇಗೆ ದುಡ್ಡು ಮಾಡುತ್ತಾರೆ ಎಂಬುದನ್ನು ಯೋಚಿಸುವಾಗ, ತಿಳುವಳಿಕೆ ಇಲ್ಲದ ಜನರ ಬಗ್ಗೆ ಮನಸ್ಸು ಕರಗುತ್ತದೆ. ದುಡ್ಡು ಉಳ್ಳವರು, ಪ್ರಭಾವಶಾಲಿ ರಾಜಕಾರಣಿಗಳು ಏನು ಬೇಕಾದರೂ ಮಾಡಿಕೊಳ್ಳಲಿ ! ಆದರೆ ಬಡವರ ಗತಿ ? ಒಂದು ಸಣ್ಣ ಉದಾಹರಣೆ ನೋಡಿ, ದಿನಪತ್ರಿಕೆಯ ಎಡೆಯಿಂದ ಬಿದ್ದ ಒಂದು ಕರಪತ್ರವನ್ನು ಓದಿ ನಾನು ಮೂರ್ಖನಾದ ಬಗ್ಗೆ ಎರಡು ಮಾತು.

ಕಳೆದ ವರ್ಷ ನನ್ನ ಮೊಮ್ಮಗನ ಅಡ್ಮಿಷನ್ ಸಲುವಾಗಿ ಒಂದು ಇಂಟರ್‌ನ್ಯಾಷನಲ್ ಸ್ಕೂಲಿಗೆ ಹೋಗಿದ್ದೆ. ಕರಪತ್ರದಲ್ಲಿ ಚಿತ್ರಿಸಿದಂತೆ ಒಂದು ದೊಡ್ಡ ಕಟ್ಟಡದ ಒಂದು ಬದಿಯ ಕೋಣೆಯಲ್ಲಿ ತರಗತಿಗಳು ನಡೆಯುತ್ತಿದ್ದುವು. ಪ್ರವೇಶದ್ವಾರದಲ್ಲಿ ತೂಗುಹಾಕಿದ ಒಂದು ಬೋರ್ಡು. ಹೊಸದಾಗಿ ಆರಂಭವಾದ ೧ರಿಂದ ೫ರವರೆಗಿನ ತರಗತಿಗಳು. ಪ್ರಿನ್ಸಿಪಾಲರ ಹೆಸರಿನ ಕೆಳಗೆ ಎಂ.ಎ., ಎಂ.ಇ.ಎಡ್., ಪಿಎಚ್.ಡಿ., (ಲಂಡನ್) ಡಿ.ಲಿಟ್ (ಯುಎಸ್‌ಎ), ಎಂ.ಎಸ್‌ಸಿ. (ಆಸ್ಟ್ರೇಲಿಯಾ) ಇತ್ಯಾದಿ.

ಜನತಾಸೇವೆಯೇ ಜನಾರ್ದನ ಸೇವೆಯಾಗಿರುವ ಸರ್ಕಾರದ ಕಾರ್ಯವೈಖರಿಯ ಕುರಿತು ಇನ್ನೊಂದು ಉದಾಹರಣೆಯನ್ನು ಗಮನಿಸಿ. ಮೂರು ವಾರಗಳ ಹಿಂದೆ ಸಾಯಂಕಾಲ ಎರಡು ಗಂಟೆಗೆ ನಾನು ಮತ್ತು ನನ್ನ ಮಗ ಬೆಂಗಳೂರಿನಲ್ಲಿರುವ ಒಂದು ದೊಡ್ಡ ಸರ್ಕಾರಿ ಕಾರ್ಯಾಲಯಕ್ಕೆ ಒಬ್ಬ ಆಫೀಸರ್‌ಅನ್ನು ಕಾಣಲೆಂದು ಹೋಗಿದ್ದೆವು. ಹೋಗುವ ಮೊದಲೇ ಭೇಟಿಯ ಸಮಯವನ್ನು ಗೊತ್ತುಮಾಡಿಕೊಂಡಿದ್ದೆವು. ಆ ದೊಡ್ಡ ಕಟ್ಟಡದಲ್ಲಿ ನಾವು ಕಾಣಬೇಕಾದ ಆಫೀಸರ್ ಅವರ ಕೋಣೆ ಎಲ್ಲಿ ಎಂದು ಕೇಳುತ್ತಾ ಹುಡುಕುತ್ತಾ ಹೋದಾಗ ಅವರ ಆಫೀಸಿನ ಬಾಗಿಲಲ್ಲಿ ಸ್ಟೂಲಿನ ಮೇಲೆ ಒಬ್ಬ ಪೇದೆ (ಪ್ಯೂನ್), ಗೋಡೆಗೆ ಒರಗಿ ಗೊರಕೆ ಹೊಡೆಯುತ್ತಿದ್ದ. 'ಎಲಾ, ಇವನೇ ! ಇವನ ಭಾಗ್ಯವೇ' ಎಂಥದ್ದು! ನಿದ್ದೆಗೂ ಇವನಿಗೆ ಸಂಬಳ ಕೊಡುತ್ತಾರಲ್ಲಾ', ಎಂದು ಯೋಚಿಸಿ, ಅವನನ್ನು ಎಚ್ಚರಿಸಿ ಆಫೀಸರ್ ಅವರನ್ನು ಕಾಣಬೇಕೆಂದಾಗ ಆತ ಸಾಹೇಬರ ಹೊರಗೆ (ಹೊರಕಡೆಗೆ ಅಲ್ಲವಷ್ಟೆ!) ಹೋಗಿದ್ದಾರೆಂದ. ಯಾವಾಗ ಬರುತ್ತಾರೆಂದು ಮತ್ತೆ ಕೇಳಿದಾಗ ''ಈಗ ಬರುತ್ತಾರೆ, ಕೆಳಗೆ ಹೋಗಿದ್ದಾರೆ,'' ಎಂದು ನಿದ್ದೆಯ ಅಮಲಿನಲ್ಲಿ ತೊದಲಿದಾಗ ''ಸರಿ'' ಅಂದು ಆಫೀಸರರು ಬರುವುದನ್ನು ಹಾರೈಸುತ್ತಾ ವರಾಂಡದಲ್ಲಿ ಅತ್ತಿತ್ತ ಸುತ್ತು ಹಾಕಿದೆವು. ಮೂರು ಗಂಟೆ ಕಳೆಯಿತು. ಸಾಹೇಬರು ಇನ್ನೂ ಚಿತ್ತೈಸಿರಲಿಲ್ಲ. ಹೋಗಿ ಅವನನ್ನೇ ಮತ್ತೆ ಕೇಳಿದೆವು. ''ಏನಾಗಬೇಕಿತ್ತು, ಸಾರ್ ?'' ಎಂದು ಕೇಳಿದ. ''ಏನೂ ಇಲ್ಲ, ಸ್ವಲ್ಪ ಮಾತನಾಡಬೇಕಿತ್ತು'' ಅಂದು ಮತ್ತೆ ಅಲ್ಲೇ ಅಡ್ಡಾಡಿದೆವು. ಮೂರೂವರೆ ಗಂಟೆ ಆಗುತ್ತಲೇ ಎಲ್ಲಾ ಡಿಪಾರ್ಟ್‌ಮೆಂಟುಗಳ ಕೋಣೆಗಳಿಂದ ಗಂಟೆಯಿಂದ ಮಣಿಗಳ ಶಬ್ದ ಕೇಳಿಬಂತು. ಅಂದು ಶುಕ್ರವಾರ. ಒಂದು ಕಡೆ ಇಣಿಕಿ ನೋಡಿದೆವು. ಕರ್ಮಚಾರಿಯೇ ಪೂಜಾರಿಯಾದವನು ದೇವರಿಗೆ ಆರತಿ ಎತ್ತಿ ಆಮೇಲೆ ಎಲ್ಲರಿಗೂ ಒಡ್ಡುತ್ತಾ ಬಂದ. ತದನಂತರ ನೈವೇದ್ಯಕ್ಕಿಟ್ಟ ಚುರಮುರಿ, ಹಣ್ಣು ಕಾಯಿಗಳನ್ನು ಹಂಚುತ್ತಿದ್ದಾಗ ಕೆಲವರು ಬಾಯಿಗೆ ಹಾಕಿಕೊಂಡು ಆಫೀನಿಂದ ಹೊರಗೆ ಬಂದರು. ನಾಲ್ಕು ಗಂಟೆ ಆಗುವಷ್ಟರಲ್ಲಿ ಇಡೀ ಕಾರ್ಯಾಲಯ ಖಾಲಿ. ಬ್ರಹ್ಮಾಂಡ ಸುತ್ತಿಬರಲು ಹೋದ ನಮ್ಮ ಆಫೀಸರರು ಹಿಂದಕ್ಕೆ ಬರಲು ದಾರಿ ಕಾಣದೆ ಮಾಯವಾಗಿಬಿಟ್ಟಿದ್ದರು.




ಎರಡು ವರ್ಷಗಳ ಹಿಂದೆ ಹೀಗೆ ಇನ್ನೊಂದು ಆಫೀಸಿಗೆ ಹೋದಾಗ ಕೊನೆಯ ಅಂತಸ್ತಿನಲ್ಲಿ ನಾಲ್ಕು ಮಂದಿ ಪೇದೆಗಳು ಬೀಡಿ ಸೇದುತ್ತಾ ಇಸ್ಪೀಟ್ ಆಡುತ್ತಿದ್ದರು.

ಇದು ಉಜ್ವಲ ಭವಿಷ್ಯವುಳ್ಳ ಭಾರತ ! ಇದು ಇಲ್ಲಿ ಹೀಗೆಯೇ ನಡೆಯುತ್ತಿರುತ್ತದೆ. ನಾವು ಇಂತಹ ಪದ್ಧತಿಗೆ ಹೊಂದಿಕೊಂಡಿದ್ದೇವೆ. ಆದುದರಿಂದ ಇದು ನಮಗೆ ರೂಢಿಯಾಗಿ ಬಿಟ್ಟಿದೆ. ಯಾರೂ ಏನೂ ವಿರೋಧಿಸುವುದಿಲ್ಲ. ವಿರೋಧಿಸುವ ಮಾನಸಿಕ ಬಲವೇ ನಮ್ಮಲ್ಲಿಲ್ಲ. ಇಂತಹ ಜನರು ಇರುವುದರಿಂದಲೇ ನಮ್ಮ ಪ್ರಜಾಪ್ರಭುತ್ವ ಬದುಕಿ ಉಳಿದಿದೆ. ಇದು ಆಚಂದ್ರಾರ್ಕ ಜೀವಿ ! ನಿಮಗೊಂದು ಗುಟ್ಟು ಹೇಳುತ್ತೇನೆ, ನೀವು ಕಾರ್ಯನಿಮಿತ್ತ ಯಾವುದೇ ಆಫೀಸಿಗೆ ಹೋದರೂ ಹೋದಾಗ ಸಂಬಂಧಪಟ್ಟ ಅಧಿಕಾರಿ ಇಲ್ಲದಿದ್ದರೆ ಕೂಡಲೇ ಹೊರಟು ಬನ್ನಿ. ''ಹೊರಗೆ ಹೋಗಿದ್ದಾರೆ, ಈಗ ಬರುತ್ತಾರೆ'' ಅಂದರೆ ನಂಬಬೇಡಿ, ಕಾದು ಕುಳಿತುಕೊಳ್ಳಬೇಡಿ. ಆ ವ್ಯಕ್ತಿ ಹುಲ್ಲು ಮೇಯಲು ಎಲ್ಲೋ ಹೋಗಿರುತ್ತಾನೆ. ಹೊಟ್ಟೆ ತುಂಬಿದ ಮೇಲಷ್ಟೇ ಹಟ್ಟಿ ಸೇರುತ್ತಾನೆ. ಈ ರಹಸ್ಯವನ್ನು ತಿಳಿಯದ ನಾನು ಆಯುಸ್ಸಿನ ಕಾಲು ಭಾಗವನ್ನು ಕಳೆದುಕೊಂಡಿದ್ದೇನೆ.

ನಮ್ಮ ಅನೇಕ ಮಂತ್ರಿಗಳನ್ನು ನೋಡಿ. ದೇವಸ್ಥಾನಗಳಿಗೆ ಸುತ್ತದಿರುವ, ಮಠಾಧಿಪತಿಗಳ ಕಾಲಿಗೆ ಅಡ್ಡಬೀಳದ ಮಂತ್ರಿಗಳು ಯಾರಾದರೂ ಇದ್ದರೆ ಹೇಳಿ. ಇದು ತಪ್ಪೆಂದು ನಾನು ಹೇಳುವುದಿಲ್ಲ. ಅವರವರ ಭಾವನೆ. ಆದರೆ ತನ್ನ ಅನುಯಾಯಿಗಳೊಂದಿಗೆ, ಸರ್ಕಾರಿ ನೌಕರರೊಂದಿಗೆ ಹೋಗಿ ಖಜಾನೆಯ ಹಣವನ್ನು ಲೂಟಿ ಮಾಡುವುದು ಸರಿಯೇ ? ಮುಖ್ಯಮಂತ್ರಿಗಳಂತು ಭೇಟಿ ಇತ್ತ ಪ್ರತಿಯೊಂದು ಕಡೆ ಮುಖ್ಯವಾಗಿ ದೇವಸ್ಥಾನಗಳಿಗೆ ಭೇಟಿ ಇತ್ತು, ಬರುವ ಮೊದಲು ಬ್ರಹ್ಮೋತ್ಸವಕ್ಕೆಂದು ಅಥವಾ ಜೀರ್ಣೋದ್ಧಾರಕ್ಕೆಂದು ೪-೫ ಕೋಟಿ ಹಣ ನೀಡುವ ವಾಗ್ದಾನ ಮಾಡದೆ ಬರುವುದೇ ಇಲ್ಲ. ದಿವಂಗತರಾದ ಸಿನಿಮಾ ತಾರೆಯರ ಸಮಾಧಿ ಕಟ್ಟಲು, ಅಥವಾ ಸ್ಮಾರಕ ನಿರ್ಮಿಸಲು ೧೦ ಎಕರೆ ಜಾಗ ೨೦ ಕೋಟಿವರೆಗೂ ಹಣ ಬಿಡುಗಡೆಮಾಡುವ ಭರವಸೆ ಕೊಟ್ಟೇ ಬರುತ್ತಾರೆ. ಯಾರ ಹಣ ಅದು ? ಅದೂ ಇನ್ನೂ ಒಂದು ಹೊತ್ತಿನ ಊಟಕ್ಕೆ ಗತಿಯಿಲ್ಲದೆ ರಾತ್ರೆ ಊಟಮಾಡದೆ ಹೊಟ್ಟೆಗೆ ಒದ್ದೆ ಬಟ್ಟೆ ಕಟ್ಟಿ ಮಲಗುವ ಕೋಟಿ ಕೋಟಿ ಬಡವರು ಇರುವಾಗ ? ರಸ್ತೆಗಳ ಬದಿಯಲ್ಲಿ ಹಾಕಿರುವ ನೀರಿನ ದೊಡ್ಡ ದೊಡ್ಡ ಕೊಳವೆಗಳ ಒಳಗೆ ಬಿಡಾರ ಹೂಡಿ ಬದುಕುತ್ತಿರುವ ಕೂಲಿ ಕಾರ್ಮಿಕರನ್ನು ನೋಡುವಾಗ ಹೊಟ್ಟೆ 'ಚುರ್' ಅನ್ನುತ್ತದೆ. ನನ್ನ ಮನಸ್ಸನ್ನು ಅತ್ಯಂತ ನೋಯಿಸುತ್ತಿರುವ ಸಂಗತಿ ಅಂದರೆ ಕೃಶಕಾಯದ ಬಡ ಗಂಡು ಹೆಣ್ಣುಗಳು, ಉರಿಬಿಸಿಲಿನಲ್ಲಿ ನೀರಿನ ಕೊಳವೆಗಳನ್ನು ಹಾಕಲೋ ಅಥವಾ ಟೆಲಿಫೋನ್ ಕೇಬಲ್‌ಗಳನ್ನು ಅಳವಡಿಸಲೋ ರಸ್ತೆ ಬದಿಯಲ್ಲಿ ಸಪೂರದ ಆಳದ ಕುಳಿಗಳನ್ನು ಮುಂಜಾನೆಯಿಂದ ರಾತ್ರಿಯಾಗುವಲ್ಲಿ ವರೆಗೂ ತೋಡುತ್ತಿರುವುದು. ಮೊಲೆಹಾಲು ಉಣ್ಣುವ ಮಕ್ಕಳನ್ನು ಮರದ ಟೊಂಗೆಗೆ ಸೀರೆ ಹಾಕಿ ತೊಟ್ಟಿಲಿನಂತೆ ಮಾಡಿ ಅಲ್ಲಿ ಮಲಗಿಸಿ ನಿದ್ದೆ ಮಾಡಿಸುತ್ತಿರುವ ದೃಶ್ಯ ! ಆ ಮಗು ಈ ಪ್ರಪಂಚಕ್ಕೆ ಯಾಕೆ ಬಂತೋ ಎಂದೆನಿಸುತ್ತಿದೆ. ಇದು ನಮ್ಮ ಸ್ವಾತಂತ್ರ್ಯೋತ್ತರ ಭಾರತ ! ಪಂಚತಾರಾ ಹೋಟೆಲಿನಲ್ಲಿ ಒಂದು ಊಟಕ್ಕೆ ಸಾವಿರ ರೂಪಾಯಿ ಕೊಟ್ಟು ಊಟ ಮಾಡುವ ಧನಾಢ್ಯರಿಗೆ, ರಾಜಕೀಯ ಧುರೀಣರಿಗೆ, ಅಧಿಕಾರಿಗಳಿಗೆ, ಗುತ್ತಿಗೆದಾರರಿಗೆ ಮಂತ್ರಿ ಮಾಗಧರಿಗೆ, ಲಂಚ ತಿನ್ನುವ ಧನಪಿಶಾಚಿಗಳಿಗೆ, ಚುನಾವಣೆ ಬಂದೊಡನೆ ಮನೆ ಬಾಗಿಲಿಗೆ ಬಂದು ಕಾಲಿಗೆ ಅಡ್ಡಬಿದ್ದು ಅಮ್ಮಾ, ತಾಯೇ, ಆಶೀರ್ವಾದ ಮಾಡಬೇಕು, ಮರ್ಯಾದೆ ಉಳಿಸಬೇಕೆಂದು ಹೇಳಿ ಗೆದ್ದ ಮೇಲೆ ಕಾಲಿನಿಂದ ಒದೆಯುವ ಶಾಸಕರಿಗೆ ಇಂತಹ ನತದೃಷ್ಟರನ್ನು ನೋಡುವ 'ಪಾಪ' ಎಲ್ಲಿಂದ ಬರಬೇಕು ? ಉತ್ತರ ಪ್ರದೇಶದಲ್ಲಿ ಕಾರ್ಮಿಕರ ದಿನಾಚರಣೆಯಂದೂ ಮಧ್ಯಾಹ್ನ ಉರಿಬಿಸಿಲಿನಲ್ಲಿ ಮಕ್ಕಳು ಹೆಣ್ಣುಮಕ್ಕಳು ಧನಿಕರ ಬಂಗಲೆ ಕಟ್ಟಲು ಕಲ್ಲುಗಳನ್ನು ಪುಡಿಮಾಡುತ್ತಿರುವ ದೃಶ್ಯವನ್ನು ಟಿ.ವಿ.ಯಲ್ಲಿ ನೋಡಿ ಒಂದು ಕ್ಷಣ ದಂಗಾದೆ.

ಒಂದು ಟನ್ ಚಿನ್ನ, ೫೦ ಕೆಜಿ ಬೆಳ್ಳಿ, ೧೦ ಕೋಟಿ ನಗದು, ಪತ್ನಿ ಮಕ್ಕಳ ಹೆಸರಿನಲ್ಲಿ ೨೦೦ ಎಕರೆ ಕೃಷಿಭೂಮಿ ಇರುವ ಅಧಿಕಾರಿಗಳನ್ನು ಇಂದಿನ ರಾಜಕೀಯ ಸರ್ಕಾರ ಯಾಕೆ ತಡೆಯುತ್ತಿಲ್ಲ ? ಅವರಿಗೆ, ಬ್ರಿಟಿಷರು ಕೊಡುತ್ತಿದ್ದ 'ಲ್ಯಾಂಡ್ ಲಾರ್ಡ್' ಎಂಬ ಬಿರುದನ್ನು ಕೊಟ್ಟು ಯಾಕೆ ಸತ್ಕರಿಸುತ್ತಿಲ್ಲ. ಅವರಿಂದಾಗಿಯೂ ಈ ಸರ್ಕಾರಗಳು ಉಳಿಯುವುದಲ್ಲವೇ ?

ಬೆಂಗಳೂರಿನ ಜನನಿಬಿಡ ಪ್ರದೇಶದಲ್ಲಿ ಒಂದು ಕಾಳಿ ಮಂದಿರ ಇದೆ. ಮಂಗಳವಾರ, ಶುಕ್ರವಾರ ಚಿಕ್ಕಮಕ್ಕಳನ್ನು ಎತ್ತಿಕೊಂಡು ಬರುವ ಭಕ್ತರ ಸಂಖ್ಯೆ ಸಾವಿರಾರು – ಮಕ್ಕಳ ಸೊಂಟಕ್ಕೆ ಪೂಜಾರಿಗಳಿಂದ 'ತಾಯಿತ' ಕಟ್ಟಿಸಿಕೊಳ್ಳಲು. ಅದೇ ರಸ್ತೆಯ ಇಕ್ಕೆಡೆಗಳಲ್ಲೂ ಹಲವು ಮಂದಿ ದೈವಜ್ಞರು, ಮಂತ್ರವಾದಿಗಳು, ಹಸ್ತಸಾಮುದ್ರಿಕರು, ವಿಭೂತಿ ಪುರುಷರು ನಾಮಫಲಕ ತೂಗುಹಾಕಿಕೊಂಡು ಬಕಪಕ್ಷಿಗಳಂತೆ ಕುಳಿತುಕೊಂಡಿರುತ್ತಾರೆ. ಎಲ್ಲಾ ಬಗೆಯ ಸಾಂಸಾರಿಕ ಕಷ್ಟಗಳಿಗೆ, ಮುಖ್ಯವಾಗಿ ದಂಪತಿಗಳ ಲೈಂಗಿಕ ಸಮಸ್ಯೆಗಳಿಗೆ, ಕಾಳಸರ್ಪ ದೋಷಕ್ಕೆ, ಕುಜ-ರಾಹು ಸಂಧಿ, ಶುಕ್ರಾರ್ಕ ಸಂಧಿ, ಶನಿದೆಶೆ ಮುಂತಾದ ಸಕಲ ದೋಷ ಗಳಿಗೆ, ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಪುಣ್ಯಪುರುಷರು ಒಂದೇ ಕಡೆ ಸಿಗುತ್ತಾರೆ.

ಕಷ್ಟ ನಿವಾರಣೆಗೆ ಹೋಮ, ಪೂಜೆ ಮಾಡುವ ಭಕ್ತರನ್ನೂ ತೋರಿಸುವ ಗಿರಾಕಿಗಳೂ ಅಲ್ಲಿರುತ್ತಾರೆ. ಯಾವ ವೈದ್ಯರಿಂದಲೂ ಮಕ್ಕಳನ್ನು ಹುಟ್ಟಿಸಲಾಗದ ದಂಪತಿಗೆ ಮಕ್ಕಳನ್ನು ಕರುಣಿಸುವ ವೈದ್ಯೋತ್ತಮರು ಅಲ್ಲಿರುತ್ತಾರೆ. ಸಂಕಷ್ಟದಲ್ಲಿರುವವರಿಗೆ ಇನ್ನೇನು ತಾನೆ ಬೇಕು? ಇನ್ನೆಲ್ಲಿಗೆ ಹೋಗಬೇಕು? ಇವರೆಲ್ಲರೂ ಭಾರತದ ಭವಿಷ್ಯವನ್ನು ಉಜ್ವಲ ಗೊಳಿಸುವ ಪರಮಾತ್ಮರು! ನಿಮಗೆ ನನ್ನ ಈ ಕಥಾ ಶ್ರವಣದಿಂದ ಇಷ್ಟರಲ್ಲೇ ಬೇಸರ ಬಂದಿರಬೇಕು. ಬೇಗ ಮುಗಿಸಿಬಿಡುತ್ತೇನೆ.

ಚರ್ಮರೋಗ ಗುಣವಾಗಲು ಸುಬ್ರಹ್ಮಣ್ಯಸ್ವಾಮಿಯ ದೇವಸ್ಥಾನದಲ್ಲಿ ಮಡೆ ಸ್ನಾನ ಮಾಡುವುದು; ಕೊಲೆ, ಭೂತ, ಪ್ರೇತ, ಪಿಶಾಚಿಗಳ ಪೀಡೆ ನಾಶಕ್ಕೆ ಬಲ್ಮೆ ಹಾಕುವುದು, ಭೂತಾರಾಧನೆ, ಕೊಲೆಗಳಿಗೆ ಊಟ – ಇದೆಲ್ಲಾ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ನಡವಳಿಕೆ. ಆದರೆ ಇತ್ತೀಚೆಗೆ ದೂರದರ್ಶನದಲ್ಲಿ ನಾನು ನೋಡಿದ ಅತ್ಯಂತ ಕರುಣಾಜನಕ ದೃಶ್ಯ. ಈ ಬಗ್ಗೆ ಸ್ವಲ್ಪ ಕೇಳಿ.

ಕಾಳಿಗೆ ಕೋಳಿ, ಕೋಣ, ಮೇಕೆ, ಕುರಿಗಳ ಬಲಿ ಕೊಡುವುದು ಸಾಮಾನ್ಯ ಸಂಗತಿ ಯಾಗಿದೆ. ಹುಟ್ಟಿದ ಮೂರನೇ ಹುಡುಗಿಯ ತಲೆ ಕಡಿದು ಕಾಳಿಗೆ ರಕ್ತತರ್ಪಣ, ಕುತ್ತಿಗೆಯ ವರೆಗೆ ಮಣ್ಣಲ್ಲಿ ಹೂತು ಬದುಕಿ ಉಳಿದರೆ ಕಾಳಿಗೆ ತೃಪ್ತಿ ಎಂಬ ಅಭಿಪ್ರಾಯ – ಇದೆಲ್ಲಾ ಅಲ್ಲಲ್ಲಿ ನಡೆಯುತ್ತಲೇ ಇರುತ್ತದೆ. ಆದರೆ ನೂರಾರು ಚಿಕ್ಕ ಹುಡುಗಿಯರನ್ನು ಕಾಳಿ ಮಂದಿರಕ್ಕೆ ಕರೆದುಕೊಂಡು ಬಂದು ತಣ್ಣೀರಲ್ಲಿ ಮೀಯಿಸಿ ಕುತ್ತಿಗೆಗೆ ಕೆಂಪು ಪಟ್ಟಿ ಕಟ್ಟಿ ಬಾಯಿಗೂ ಬಿಗಿದು ಬೆನ್ನಿನ ಹಿಂಬದಿಯ ಚರ್ಮವನ್ನೆಳೆದು ಕಬ್ಬಿಣದ ದಪ್ಪ ಸಲಾಕೆಯಿಂದ ಎರಡು ತೂತು ಮಾಡಿ ಅದಕ್ಕೆ ನಿಂಬೆಹಣ್ಣು ಮತ್ತು ಮೆಣಸಿನ ಕಾಯಿಯಿಂದ ಕಟ್ಟಿದ ದಾರವನ್ನು ತೂರಿಬಿಡುವುದು. ಅದೇ ರೀತಿ ಎರಡು ಭುಜಗಳಲ್ಲೂ ಚರ್ಮದಲ್ಲಿ ತೂತು ಮಾಡಿ ನಿಂಬೆಹಣ್ಣು, ಮೆಣಸಿನಕಾಯಿಗಳಿಂದ ಕಟ್ಟಿದ ದಾರವನ್ನು ತೂಗುಹಾಕುವುದು, ಆಗ ಭಯಾನಕವಾಗಿ ಅಳುತ್ತಿರುವ ಮಕ್ಕಳ ಬಾಯಿಯನ್ನು ಒತ್ತಿ, ಪೂಜಾರಿ ಕುಂಕುಮದ ನೀರನ್ನು ಮಕ್ಕಳ ಸರ್ವಾಂಗ ಪ್ರೋಕ್ಷಿಸಿ ಕಾಳಿಯ ಮುಂದೆ ಮಲಗಿಸಿ ಕಾಲಿಂದ ಮೂರು ಸಲ ಒದೆದು ಮೇಲಕ್ಕೆತ್ತುವುದು ಎಂತಹ ಹಿಂಸೆ! ಎಂತಹ ಅಂಧಶ್ರದ್ಧೆ! ಹೀಗೆ ಹೇಳುತ್ತಿದ್ದಂತೆ ಗೆಳೆಯರು ಮಧ್ಯದಲ್ಲೇ "ಸರ್ಕಾರ ಯಾಕೆ ಇಂತಹದ್ದನ್ನೆಲ್ಲಾ ನಿರ್ಬಂಧಿಸುವುದಿಲ್ಲ" ಎಂದು ಕೇಳಿದರು. ನಾನಂದೆ, "ಅಯ್ಯೋ, ನೀವೆ! ಕೆಲವು ವರ್ಷಗಳ ಹಿಂದೆ ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳೊಬ್ಬರು ತನ್ನ ವೈರಿ ರಾಜಕೀಯ ಧುರೀಣರೊಬ್ಬರನ್ನು ಮುಗಿಸುವು ದಕ್ಕಾಗಿ ಮಾಟ ಮಾಡಿಸಲು ಕಣ್ಣೂರಿನ ಒಬ್ಬ ಪ್ರಸಿದ್ಧ ಮಂತ್ರವಾದಿಯ ಬಳಿಗೆ ಹೋಗಿ, ರಾತ್ರೆ ಇಡೀ ಕುಳಿತು ಮಂತ್ರ ತಂತ್ರ ಮಾಟ ಮಾಡಿಸಿ ಬಂದ ವಿಚಾರ ನಿಮಗೆ ಗೊತ್ತೇ? ಇಂತಹ ಜೀವಂತ ಭೂತ ಪ್ರೇತಗಳೇ ನಮ್ಮ ನಡುವೆ ಇರುವಾಗ ಎಲ್ಲಿನ ನಿರ್ಬಂಧ? ಎಲ್ಲಿಂದ ತಡೆ? ಈಗ ತುಂಬಾ ಡಿಮಾಂಡಿನಲ್ಲಿರುವವರು 'ವಾಸ್ತು ಬ್ರಹ್ಮರು'. ಇವರ ಸಲಹೆ ಕೇಳದೆ ಇಂದು ಮನೆ ಕಟ್ಟುವವರು, ಗೃಹಪ್ರವೇಶ ಮಾಡುವವರು ವಿರಳ. ವಾಸ್ತು ಒಂದು ಶಾಸ್ತ್ರ ಎಂಬುದರಲ್ಲಿ ಅನುಮಾನವಿಲ್ಲ. ಆದರೆ ವಾಸ್ತುಶಾಸ್ತ್ರ, ವೈದ್ಯಶಾಸ್ತ್ರ– ಇವೆಲ್ಲವೂ ಇರುವುದು ಸಂಸ್ಕೃತದಲ್ಲಿ, ಸಂಸ್ಕೃತದ ಅಧ್ಯಯನ ಮಾಡದೆ ಒಳಗಿನ ತಿರುಳನ್ನು ತಿಳಿಯದೆ ಇಂಗ್ಲಿಷಿನಲ್ಲಿ, ಪ್ರಾಂತೀಯ ಭಾಷೆಗಳಲ್ಲಿ ಲಭ್ಯವಿರುವ ಪುಸ್ತಕಗಳನ್ನು ಓದಿ ಅಪಕ್ವ ಜ್ಞಾನವನ್ನು ಪಡೆದು ಗುಣದೋಷಗಳನ್ನು ಹೇಳುವುದು ತೀರಾ ಮೂರ್ಖತನ. 'ಅಜೀರ್ಣೋ ಭೋಜನಂ ವಿಷಂ' ಎಂಬಂತೆ ಅರ್ಧಜ್ಞಾನ ಅಪಾಯಕಾರಿ. ಉದಾಹರಣೆಗೆ, ದಕ್ಷಿಣಕ್ಕೆ ಮುಖ ಮಾಡಿರುವ ಮನೆ, ಅಂಗಡಿ, ವಸತಿಗೃಹಗಳು, ಪಾಕಶಾಲೆಗಳು, ಸ್ಕೂಲು, ಕಾಲೇಜುಗಳು ಹಾನಿಕಾರಕಗಳು. ಇವು ಸರ್ವಥಾ ವರ್ಜ್ಯ ಎಂದು ಹೇಳುತ್ತಾರೆ. ಆದರೆ ಆ ದಿಕ್ಕಿನಲ್ಲಿ ಎದುರುಗಡೆ ಸಾರ್ವಜನಿಕ ಮಾರ್ಗ, ದೊಡ್ಡಗೋಡೆ, ಅಶ್ವತ್ಥ, ತೆಂಗು, ಬಿಲ್ವಪತ್ರೆ ಮರ ಇದ್ದರೆ ದೋಷ ಪರಿಹಾರ. ಯಮನ ಮನೆ ದಕ್ಷಿಣಕ್ಕಿದೆ ಎಂದು ಕೆಲವರ ತಿಳುವಳಿಕೆ. ಹಾಗಾಗಿ ದಕ್ಷಿಣದ ಹೆಸರನ್ನು ಕೇಳಿದರೇ ಭಯಪಡುವವರೂ ನಮ್ಮಲ್ಲಿದ್ದಾರೆ. ಇನ್ನು ವಾಸ್ತುಶಾಸ್ತ್ರದ ಅನುಸಾರ ಮನೆಯೊಳಗೆ ಪಾಯಖಾನೆ, ಬಚ್ಚಲು ಮನೆ ಇರಲೇಬಾರದು. ಆದರೆ ಇಂದಿನ ಜೀವನಕ್ರಮಕ್ಕೆ ಇವುಗಳನ್ನು ಪ್ರತ್ಯೇಕಿಸಿ ಬದುಕಲು ಸಾಧ್ಯವಿದೆಯೇ? ಇಂದು ಏನಾಗಿದೆ ಅಂದರೆ ವಾಸ್ತುವೆಂಬ ಭೂತ ಅನೇಕರ ತಲೆಗೆ ಹೊಕ್ಕು ಹೋಗಿರುವುದರಿಂದ ದಕ್ಷಿಣಾಕ್ಕಿರುವ ಸೈಟುಗಳಿಗೆ, ಮನೆಗಳಿಗೆ ಗಿರಾಕಿಗಳೇ ಸಿಗುತ್ತಿಲ್ಲ.

ಒಟ್ಟಿನಲ್ಲಿ ಹೇಳುವುದಾದರೆ ಭ್ರಷ್ಟರ, ಲಂಚಕೋರರ, ಮಂತ್ರವಾದಿಗಳ, ಅಯೋಗ್ಯ ಜ್ಯೋತಿಷಿಗಳ, ಅಪಕ್ವ ವಾಸ್ತುಶಾಸ್ತ್ರಗಳು, ಹಗಲು ನಡುಬೀದಿಯಲ್ಲೇ ಹೆಂಗಸರನ್ನು ಹಿಡಿದೆಳೆದು ಅತ್ಯಾಚಾರ ಎಸಗಿಕೊಂಡರೂ ಲಂಚ ಸ್ವೀಕರಿಸಿ ಸಾಕ್ಷಿಗಳಿಲ್ಲವೆಂದು ಅಪರಾಧಿಗಳನ್ನು ದೋಷ ಮುಕ್ತರನ್ನಾಗಿಸಿ ಬಿಡುವ ಕೆಲವು ನ್ಯಾಯಾಧೀಶರ, ಜಾತ್ಯತೀತರು - ಕೋಮುವಾದಿಗಳೆಂದು ಸ್ವಪ್ನದಲ್ಲೂ ಜಗಳವಾಡುತ್ತಾ ಸಮಾಜದಲ್ಲಿ ಕಲಹ, ಅಶಾಂತಿಯ ಬೀಜ ಬಿತ್ತಿ ತನ್ನ ಬೇಳೆ ಬೇಯಿಸಿಕೊಳ್ಳುವ ರಾಜಕಾರಣಿಗಳ, ಸಾಹಿತಿಗಳ, ವಂಚಕ ಗುತ್ತಿಗೆದಾರರ, ವಿಷ ಹಾಕಿ ಆಹಾರ ಪದಾರ್ಥಗಳನ್ನು ಮಾರುವ ವ್ಯಾಪಾರಿಗಳ, ಅವಧಿ ಮುಗಿದ ಕಳಪೆ ಮದ್ದುಗಳನ್ನು ಮಾರಿ ಜನರನ್ನು ಕೊಲ್ಲುವ ಮದ್ದಿನ ವ್ಯಾಪಾರಿಗಳ, ಇನ್ನೂ ಅನೇಕಾನೇಕ ಸಮಾಜ ಘಾತುಕರ ನೆಲೆವೀಡಾದ ನಮ್ಮ ಈ ದೇಶಕ್ಕೆ ಉಜ್ವಲ ಭವಿಷ್ಯವಿದೆ ಎಂದು ಯಾರಾದರೂ ಹೇಳಿದರೆ ಅವರ ತಲೆಕೆಟ್ಟು ಹೋಗಿರಲೇಬೇಕು ಅಥವಾ ಆತನೊಬ್ಬ ಕ್ಯಾಬಿನೆಟ್ ದರ್ಜೆಯ ಮಂತ್ರಿಯಾಗಿ ರಲೇಬೇಕು. ಹಾಗೆಂದು ಎಲ್ಲ ರಾಜಕಾರಣಿಗಳೂ, ಮಂತ್ರಿಗಳೂ, ನ್ಯಾಯಾಧೀಶರೂ, ಮಠಾಧಿಪತಿಗಳೂ, ಪೂಜಾರಿಗಳೂ, ಜೋಯಿಸರೂ, ವಾಸ್ತು ಪಂಡಿತರೂ, ಅಧಿಕಾರಿಗಳೂ ಕೆಟ್ಟವರೆಂದು ಹೇಳಿದರೆ ಅದಕ್ಕಿಂತ ದೊಡ್ಡ ತಪ್ಪು, ಅನ್ಯಾಯ ಬೇರೊಂದಿಲ್ಲ. ಎಲ್ಲ



ಕ್ಷೇತ್ರಗಳಲ್ಲೂ ಅತ್ಯುತ್ತಮರೂ ಯೋಗ್ಯರೂ, ಸಜ್ಜನರೂ, ಪರೋಪಕಾರಿಗಳೂ, ದೇಶದ ಹಿತಚಿಂತಕರೂ, ಜನತಾ ಸೇವಕರೂ, ಉದಾರಿಗಳೂ ಖಂಡಿತ ಇದ್ದಾರೆ. ನಮ್ಮ ದುರ್ದೈವ ದಿಂದ ಅವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ ಇದೆ. ಅದೂ ಕರಗುತ್ತಾ ಇದೆ. ಇಂತಹ ಸ್ಥಿತಿಯಲ್ಲಿ ದೇಶದ ಭವಿಷ್ಯ ಅಂಧಕಾರಮಯವಾಗಿಯೇ ಉಳಿದಿದೆ. ಪ್ರಜ್ವಲ ಬೆಳಕು ನೀಡಬಲ್ಲ ಜ್ಯೋತಿ ಮೂಡಿಬರುವ ಆಸೆ ಇಲ್ಲದಾಗಿದೆ. ಕಳೆದ ತಿಂಗಳು ನಮ್ಮಲ್ಲಿಗೆ ಊರಿನ ಒಬ್ಬ ಸಂಬಂಧಿಕರು ಸಪತ್ನೀಕರಾಗಿ ಬಂದಿದ್ದರು. ಮರುದಿನ ಹೊರಡುವಾಗ "ಮೈಸೂರಿಗೆ ಹೋಗಿ... ಸ್ವಾಮಿಗಳನ್ನು ಭೇಟಿ ಮಾಡಿ ಆಶೀರ್ವಾದ ಪಡೆದು ಹೋಗಬೇಕೆಂದರು." "ಸಂತೋಷ. ಹೋಗಿ. ಆದರೆ ಭೇಟಿ ಮಾಡಿದ ಮೇಲೆ ಪತ್ನಿಯನ್ನು ಮಾತ್ರ ಅವರ ಬಳಿ ಬಿಟ್ಟುಬರಬೇಡಿ" ಅಂದೆ. ಯಾಕೆಂದು ಕೇಳಿದರು. ಹಿಂದಕ್ಕೆ ಬರುವಾಗ ಆಕೆ ಆನಂದ ತುಂದಿಲೆಯಾಗಿ ಬರುವುದರಲ್ಲಿ ಸಂಶಯವಿಲ್ಲ ಅಂದೆ. "ಅಯ್ಯೋ! ಹಾಗೆ ಹೇಳಬೇಡಿ. ದೇಶ ವಿದೇಶಗಳಲ್ಲೂ ಅವರಿಗೆ ಅಸಂಖ್ಯ ಭಕ್ತ ಭಕ್ತೆಯರಿದ್ದಾರೆ. ಅವರು ದೈವ ಸಂಭೂತ"ರು ಎಂದು ಹೇಳಿದರು. ನಾನು "ಮೂರು ಸಲ ಅಮೆರಿಕಾಕ್ಕೆ ಹೋಗಿ ೬-೬ ತಿಂಗಳು ಇದ್ದು ಬಂದಿದ್ದೆ. ಅಲ್ಲಿರುವ ಪಡ್ಡೆ ಹುಡುಗರು ಯುವತಿಯರು ಇಂತಹ ಪಡ್ಡೆ ಯತಿಗಳ ಶಿಷ್ಯರಾಗಿಬಿಡುತ್ತಾರೆ" ಎಂದೆ. ನನ್ನ ಮಾತಿನಿಂದ ಅಸಂತುಷ್ಟರಾದ ಬಂಧುವರ್ಯರು ಮುಖ ತಗ್ಗಿಸಿ ಹೊರಟುಹೋಗಿದ್ದರು. ನಿಮಗೂ ನನ್ನ ಕಥಾವಾಚನದಿಂದ ಬೇಸರವಾಗಿದ್ದರೆ ಕ್ಷಮಿಸಿಬಿಡಿ.

ಎಂ. ವಿ. ಭಟ್
'ಶ್ರೀಮಿತ್ತೂರು', ಮುದ್ದರಹಳ್ಳಿ, ಚಿಕ್ಕಬಾಣಾವರ, ಬೆಂಗಳೂರು - [illegible]



# ಕೂಸಪ್ಪನ ಉತ್ತರಿಸಲಾಗದ ಪ್ರಶ್ನೆಗಳು

**ಬೆಂ**ಬತ್ತಿದ ಬೇತಾಳನಂತೆ ಆ ದಿನವೂ ಸಂಜೆ ನಾಲ್ಕೂವರೆಗೆ ಕೂಸಪ್ಪನ ಪ್ರವೇಶ – ನನ್ನ ಟೇಬಲ್ ಎದುರಲ್ಲಿ.

''ಕ್ಷಮಿಸಿ ಸರ್, ನನ್ನನ್ನು ಕೆಲವು ಸಮಸ್ಯೆಗಳು ಕಾಡ್ತಾ ಇದ್ದಾವೆ. ರಾತ್ರಿ ಮಲಗಿದ್ದಾಗ್ಲೂ ತಲೆ ತಿಂತಾವೆ. ಒಂದು ಹತ್ನಿಮಿಷ ಸಾರ್'' ಎಂದವನೇ ಕುಳಿತುಬಿಟ್ಟ.

ಪೀಠಿಕೆ ಆಯ್ತು. ಇನ್ನೇನು ಮಾಡೊಕೂ ಆಗೋದಿಲ್ಲವೆಂದು ಪೆನ್ನು ಕೆಳಗಿಟ್ಟು ಋಷಿಯೆದುರು ಕುಳಿತು ಬರೆಯುವ ಗಣಪತಿಯಂತೆ ಕುಳಿತುಬಿಟ್ಟೆ.

''ಸರ್, ನಿಮ್ಮ ನಾರಾಯಣ, ವಿಷ್ಣು, ಕೃಷ್ಣ, ರಾಮ, ಗೋವಿಂದಾ – ಈ ಎಲ್ಲಾ ಪದಗಳು ದೇವರ ಬಗ್ಗೆ ಅಲ್ವಾ ?''

''ಹೌದಪ್ಪ, ಶೈವರು ಶಿವ, ಶಂಭೂ, ಮಹಾಲಿಂಗೇಶ್ವರ, ದಕ್ಷಿಣಾಮೂರ್ತಿ, ಈಶ್ವರ ಎಂದು ಪ್ರಾರ್ಥನೆ ಮಾಡ್ತಾರೆ. ವೈಷ್ಣವರು ಕೃಷ್ಣಾ, ಗೋವಿಂದಾ, ಗೋಪಾಲ, ರಾಮಾ, ನಾರಾಯಣ ಅಂತಾರೆ. ಕ್ರೈಸ್ತರು ಮೇರಿ, ಏಸು, ಜೀಸಸ್ ಅಂತಾರೆ. ಮುಸ್ಲಿಮರು ಅಲ್ಲಾ ಅಂತಾರೆ. ಆದರೆ ಈ ಎಲ್ಲ ದೇವರುಗಳೂ ಒಬ್ಬನೇ ಎಂದು ನನ್ನ ಭಾವನೆ, ಅನಿಸಿಕೆಯೂ ಹೌದು.'' ''ಹೌದು. ನಿನಗೇಕೆ ಈ ಸಂಶಯ ಬಂತು ?'' ಎಂದು ಕೇಳಿದೆ.

''ನನ್ನ ಸಮಸ್ಯೆ ಅದಲ್ಲ ಸರ್. ಎಲ್ಲಾ ದೇವರೂ ಒಂದೇ, ನಿಜ. ಆದರೆ ನಿಮ್ಮವರು ರಥ ಎಳೆಯುವಾಗ ''ಗೋವಿಂದಾ ! ಗೋವಿಂದಾ !'' ಅಂತಾರೆ. ಕಷ್ಟ ಬಂದಾಗ ''ಕೃಷ್ಣಾ'' ಅಂತಾರೆ. ಆದರೆ ಯಾರಾದರೂ ಸತ್ತಾಗ ಹೆಣದ ಚಟ್ಟ ಎತ್ತುವಾಗ, ಹೊರುವಾಗ ''ನಾರಾಯಣ'', ''ನಾರಾಯಣ'' ಅಂತಾರಲ್ಲಾ, ಹಾಗಾದರೆ 'ಗೋವಿಂದಾ' ಶಬ್ದಕ್ಕೂ 'ನಾರಾಯಣ' ಶಬ್ದಕ್ಕೂ ಎಸ್.ಸಿ., ಎಸ್.ಟಿ. ಹಾಗೆ ಕಾದಿಟ್ಟ ಹೆಸರುಗಳಿವೆಯೇ ?''

ನಾನೇನು ಉತ್ತರಿಸಬೇಕು ! ಅವನ ಬಾಯಿಂದ ತಪ್ಪಿಸಿಕೊಳ್ಳಲು, ''ಹಾಗಲ್ಲ ಕೂಸಪ್ಪಾ, ಎರಡೂ ಪುಣ್ಯ ಪಡೆಯುವ ಶಬ್ದಗಳಲ್ವಾ ? ಅದು ಹೆಣ, ಇದು ರಥಾಂತ ಗೊತ್ತಾಗೋದಕ್ಕೆ ಹಿರಿಯರು ಹೀಗೆ ಮಾಡಿರಬಹುದು'' ಎಂದೆ.

''ಏನೋ ಸರ್, 'ನಾರಾಯಣ, ನಾರಾಯಣ' ಎನ್ನುವಾಗ ಸ್ವಲ್ಪ ಕಷ್ಟ ಆಗುತ್ತೆ. ನಾರದ ಪಾತ್ರಧಾರಿಯೂ 'ನಾರಾಯಣ, ನಾರಾಯಣ' ಎಂಬ ಶಬ್ದ ಹೇಳಿ ಏನಾದ್ರೂ ಅವಾಂತರ ಮಾಡ್ತಿದ್ನಂತಲ್ಲ ?'' ''ಗೋವಿಂದಾ, ಗೋವಿಂದಾ, ಗೋವಿಂದಾ'' ಎನ್ನುವಾಗ ಹುರುಪು ಬರ್ತದೆ. ಹೋಗ್ಲಿಬಿಡಿ. ನಿಮ್ಮ ಊಟ ಸಮಾರಂಭಗಳಲ್ಲಿ ಪಾಯಸ, ಮಜ್ಜಿಗೆ ವಿಚಾರಿಸಿದ ಮೇಲೆ ಆಮಂತ್ರಣ ಕೊಟ್ಟವರು ಪ್ರತಿಯೊಬ್ಬರ ಬಳಿಬಂದು 'ಸಾವಕಾಶ ಊಟ ಮಾಡಿ, ಸಾವಕಾಶ' ಅಂತಾರಂತಲ್ಲ, ಅದು ಯಾತಕ್ಕೆ ? ಊಟಕ್ಕೆ ಮೊದಲೇ ಹೇಳಿದರೆ ಸಾವಕಾಶವಾಗಿ ಊಟ ಮಾಡಬಹುದಿತ್ತಲ್ಲ ?''

''ಅಯ್ಯೋ ಕೂಸಪ್ಪ, ಅದು ''ಸಾವಕಾಶವಾಗಲಿ'' ಎಂದು ಹೇಳುವುದು ನಿಧಾನವಾಗಿ ಏಳಿ, ಹೊಟ್ಟೆ ತುಂಬಿದ್ರಿಂದ ಏಳೋಕೆ ಕಷ್ಟವಾಗಬಹುದು ಎಂಬ ಅರ್ಥದಿಂದ. 'ಸಾವಕಾಶ' ಹೇಳಿದ ಮೇಲೆ ಏಳಲೇ ಬೇಕು. ಏಕೆಂದರೆ ಎಲೆ ಮುಸುರೆ ತೆಗೆಯುವವರಿದ್ದಾರೆ ಎಂಬ ಎಚ್ಚರಿಕೆ. ಅದಿರ್ಲಿ ಕೂಸಪ್ಪ ? ನಮ್ಮ ಅಲ್ಪಸಂಖ್ಯಾತ ಬ್ರಾಹ್ಮಣರ ವಿಷಯ ತಿಳಿಯೋದಕ್ಕೆ ನಿನಗೆ ಅವಶ್ಯಕತೆಯೇಕೆ ಬಂತು ? ನಿಮ್ಮವರ್ಯಾರೂ ನಮ್ಮ ಸಾಂಪ್ರದಾಯಿಕವಾದ ಭೋಜನಕೂಟದಲ್ಲಿ ಊಟ ಮಾಡಿಲ್ಲವೇ ?''

''ಮಾಡಿದ್ದೇನೆ. ಸರ್, ಕೆಲವು ಬಾರಿ ಮಾಡಿದ್ದೇನೆ. ಆದರೆ ಊಟಮಾಡುವ ಆ ಚಾಕಚಕ್ಯತೆ ನಮ್ಮಲ್ಲಿಲ್ಲ ಸರ್. ಮೊದಲೇ ಒಂದಷ್ಟು ಅನ್ನ ಮತ್ತೂ ಸ್ವಲ್ಪ ಹಾಕಿಸಿಕೊಂಡು ಎಲ್ಲವನ್ನೂ ಸಾರಲ್ಲೇ ಕಲಸಿ ತಿಂದಮೇಲೆ ಹೊಟ್ಟೆ ತುಂಬಿಹೋಗಿತ್ತು. ಆಮೇಲೆ ಬಂದ ಮೆಣಸು ಕಾಯಿ, ಅವಿಲ್, ಎರಡೆರಡು ಸಾಂಬಾರುಗಳಿಗಾಗಲೀ ಬಗೆಬಗೆಯ ಭಕ್ಷ್ಯಗಳಿಗಾಗಲೀ ಪಾಯಸಕ್ಕಾಗಲೀ ಜಾಗವೇ ಇರೋದಿಲ್ಲ, ತಿನ್ಬೇಕೂಂತ ಆಸೆ. ಆದರೆ ಈ ಹೊಟ್ಟೆ ತುಂಬಿಹೋಗಿದೆಯಲ್ಲಾ ?''

''ಅದಕ್ಕೆ ಹೇಳೋದು 'ಬ್ರಾಹ್ಮಣೋ ಭೋಜನಪ್ರಿಯ' ಅಲ್ಲ, ಅಲ್ಲ 'ಬ್ರಾಹ್ಮಣೋ ಬಹುಜನ ಪ್ರಿಯ' ಎಂದು. ನಮಗೆ ಗೊತ್ತಿದ್ದ ''ಸಾರಿಗೆಷ್ಟು ಅನ್ನ, ಮೆಣಸು ಕಾಯಿಗೆಷ್ಟು, ಕುಂಬಳಕಾಯಿ ಸಾಂಬಾರಿಗೆಷ್ಟು, ಬೋಂಡ ಹುಳಿಗೆಷ್ಟು'' ಎಂಬುದನ್ನು ಅರಿತುಕೊಂಡು ಮುಂದಿನ ಐಟಮ್, ಸ್ವೀಟ್‌ಗಳು, ಪಾಯಸ, ಮೊಸರಿಗೆ ಬೇಕಾದಷ್ಟು ಹೊಟ್ಟೆ ಖಾಲಿ ಇಡ್ತೇವೆ. ನೀವು ಮೊದಲು ಬಂದ ಸಾರಲ್ಲೇ ಮುಗಿಸಿಬಿಡ್ತೀರಿ. ಅಲ್ವಾ ?''

''ಹೌದು ಸರ್, ಸಾರು ಚೆನ್ನಾಗಿದೆ ಎಂದು ಮೊದಲೇ ಹೊಟ್ಟೆ ತುಂಬಿಸಿಕೊಳ್ತೇವೆ. ನೇಮದಂತೆ ಬ್ರಾಹ್ಮಣರು ಮಾತ್ರವಲ್ಲ, ನಮ್ಮಂಥವರೂ ಭೋಜನ ಪ್ರಿಯರೇ, ಊಟ ಯಾರಿಗೆ ಬೇಡ ?''

''ಹಾಗೆ ಹೇಳು. ಇರಲಿ, ಮತ್ತೇನು ನಿನ್ನ ಸಮಸ್ಯೆ ?''

''ಮತ್ತೆ ನಿಮ್ಮಲ್ಲಿ ಊಟ ಹಾಕಿಯೂ ದಕ್ಷಿಣೆ ಕೊಡ್ತಾರಲ್ಲ ?''

''ಇಲ್ಲ ಕೂಸಪ್ಪ, ಈಗ ಕಾಲ ಬದಲಾಗಿದೆ. ಪುರೋಹಿತರ ಹತ್ತಿರ ಕುಳಿತ ಕೆಲವು ಬ್ರಾಹ್ಮಣ ಸುಹಾಸಿನಿಯರಿಗೆ ಮಾತ್ರ ದಕ್ಷಿಣೆ ಕೊಡ್ತಾರೆ. ಅದನ್ನು ಹೆಚ್ಚಿನವರು ದೇವರ ಡಬ್ಬಕ್ಕೆ ಹಾಕಿಬರ್ತಾರೆ. ನೀನನ್ನೊದೇನೋ ಸರಿ. ನಿನ್ನಂತಹವರಿಗೆ ದಕ್ಷಿಣೆ ಕೊಡಬೇಕು. ಯಾಕೇಂದ್ರೆ ಆಮೇಲೆ ಅಜೀರ್ಣವಾದರೆ ಮೆಡಿಸಿನ್ ತಗೋಬೇಕಲ್ಲಾ. ಅಲ್ವಾ ?''

''ತಮಾಷೆ ಬಿಡಿ ಸರ್. ಮತ್ತೊಂದು ವಿಚಾರ ಕೇಳಿದ್ದೇನೆ. ಅನ್ನ ಬಡಿಸಿದ ಮೇಲೆ ಪುರೋಹಿತರು ನಾಲ್ಕೈದು ಮುತ್ತೈದೆಯರಿಗೆ ತೀರ್ಥ ಕೊಟ್ಟು 'ಆಮೇಲೆ ನಮಗೆ ಕೊಡಿ' ಅಂತಾರಂತಲ್ಲಾ ? ಯಾಕೆ ?''

''ನೋಡು ಕೂಸಪ್ಪ, ಈಗ ಮಹಿಳೆಯರು ಮೊದಲ ಸ್ಥಾನ ಕೊಡ್ಬೇಕೂಂತ ಸರ್ಕಾರ ಹೇಳ್ತ ಇದೆಯಲ್ಲಾ. ಈ ರೀತಿಯಲ್ಲಾದರೂ ಅವರನ್ನು ಮುಂದಕ್ಕೆ ಬಿಟ್ಟು ನಾವು ಗಂಡಸರು 'ನಿಮ್ಮ ಹಿಂದಿದ್ದೇವೆ' ಎನ್ನೋಕೆ, ಸಾಕಾ ಕೂಸಪ್ಪಾ, ಇನ್ನೂ ಇದೆಯಾ ನಿನ್ನ ಸಮಸ್ಯೆ ?''

''ಕೊನೇದು ಸಾರ್. ಒಂದೇ ಒಂದು, ಭಿಕ್ಷೆ ಬೇಡೋಕೆ ಬರ್ತಾರಲ್ಲಾ ? ಭಿಕ್ಷುಕರು. ಅವರೂ ಮೊದಲು ಪ್ರಾಶಸ್ತ್ಯ ಕೊಡೋದು ಮಹಿಳೆಯರಿಗೇನೇ, 'ಅಮ್ಮಾ ತಾಯೀ' ಅಂತಾರೆಯೇ ಹೊರತು 'ಅಪ್ಪಾ ತಂದೇ' ಎನ್ನುವುದಿಲ್ಲ, ಏಕೆ ? ಅದೇ ಈಗ ಹೇಳಿದ್ನಲ್ಲಾ ಮನೆ ಮಂತ್ರಿಗಳು ಹೆಂಗಸರು, ಆರ್ಥಿಕ ಮಂತ್ರಿಗಳು ಗಂಡಸರು. ಆರ್ಥಿಕ ಮಂತ್ರಿಗಳಿಂದ ಏನೂ ದಕ್ಕಲಿಕ್ಕಿಲ್ಲ. ಆದ್ದರಿಂದ ಮನೆ ಮಂತ್ರಿಗಳನ್ನು ಬೇಡಿದರೆ ಏನಾದರೂ ಸಿಗಬಹುದೆಂಬ ಆಸೆ. ನೋಡು, ಇಲ್ಲೂ ಹೆಂಗಸರಿಗೆ ಭಿಕ್ಷುಕರು ಮೊದಲು ಸಲಾಂ ಕೊಡ್ತಾರೆ, ಅಲ್ವಾ ? ಆಯಿತು ಕೂಸಪ್ಪ. ಇನ್ನೇನಾದ್ರೂ ಸಮಸ್ಯೆಯಿದ್ರೆ, ನಾಳೆ ಶನಿವಾರ ಆಫೀಸು ಬಿಟ್ಟಮೇಲೆ ಚರ್ಚಿಸೋಣ ಆಗಬಹುದಾ ?''

''ಆಯ್ತು ಸರ್, ನನಗಿಷ್ಟೆ ಸಂಶಯಗಳಿದ್ದದ್ದು. ಮುಖ್ಯವಾಗಿ 'ಗೋವಿಂದಾ ನಾರಾಯಣ'ಗಳ ಭೇದ ನನ್ನ ಸಮಸ್ಯೆಗೆ ಉತ್ತರ ಸಿಕ್ಕಿತು. ಹೊರಡೋಣ ಸಾರ್. ಐದೂಕಾಲು ಗಂಟೆ ಆಯಿತು. ನಮಸ್ಕಾರ.''

**ರಾಘವೇಂದ್ರ ಉಡುಪಿ**

**ಕೆ. ರಾಘವೇಂದ್ರ ಭಟ್**

'ಶ್ಯಾಮಲ ಸದನ', ೮-೩-೫೧, ಕಟ್ಟೆ ಆಚಾರ್ಯ ಮಾರ್ಗ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

ಭಾರತದಲ್ಲಿ ವೈಚಾರಿಕತೆಯು ಇತ್ತೀಚೆಗೆ ಸಾಕಷ್ಟು ಗಟ್ಟಿಗೊಳ್ಳುತ್ತಿರುವುದು ಕಂಡುಬರುತ್ತಿದೆ. ಇದು ಆರೋಗ್ಯಕರ ಬೆಳವಣಿಗೆಯೆ. ಪ್ರಮುಖವಾಗಿ ಕವಿಗಳು, ಸಾಹಿತಿಗಳು ಮತ್ತು ಪ್ರಗತಿಪರ ಬರಹಗಾರರಿಂದ ಉತ್ತಮ ಸಾಹಿತ್ಯ ಪ್ರಕಟವಾಗುತ್ತಿರುವುದು ಸಂತಸದ ಸಂಗತಿ. ಬಸವಣ್ಣ ಹೇಳಿದ 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ಮಾತಿನಲ್ಲಿ ಪ್ರಖರವಾದ ವೈಚಾರಿಕ ಚಿಂತನೆಯಿದೆ. ಪ್ರಸ್ತುತದಲ್ಲಿ ಸ್ಥಾವರ ಸಂಸ್ಕೃತಿಯೇ ಶ್ರೇಷ್ಠವೆಂದು ಹೇಳುತ್ತಲೇ, ಚಲನಶೀಲತೆಯಿಂದ ಸ್ಥಗಿತತೆಯೆಡೆಗೆ ಬಹುಜನರು ನಡೆದಿರುವುದು ಅಪಾಯದ ಸಂಕೇತ. ಜಡವಾದುದು ಸಮಾಜದ ಬೆಳವಣಿಗೆಗೆ ಅಪಾಯವನ್ನುಂಟು ಮಾಡುತ್ತದೆ. ಚಲನಶೀಲವಾದುದು ಯಾವತ್ತೂ ಆರೋಗ್ಯಕರವಾದ ಸಮಾಜ ನಿರ್ಮಾಣದಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಚಲನಶೀಲತೆಗೆ ಪ್ರೇರಣೆಯೇ ವೈಚಾರಿಕತೆ. ಅದು ಜಂಗಮ ಸ್ವರೂಪಿಯಾಗಿರುತ್ತದೆ. ಜಡ ಸಂಸ್ಕೃತಿ ಸ್ಥಾವರವಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ.

# ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ

ಡಾ॥ ಎಚ್. ಟಿ. ಪೋತೆ

ವಿಚಾರವಂತಿಕೆ ಮನುಷ್ಯನ ಸ್ವತ್ತು. ಇತರ ಪ್ರಾಣಿವರ್ಗದಿಂದ ಅವನನ್ನು ಬೇರ್ಪಡಿಸುವ ಮತ್ತು ಜೀವಸಂಕುಲದಲ್ಲಿ ಪ್ರಬಲವಾಗಿಸಿರುವ ವಿಶಿಷ್ಟ ಗುಣಗಳೆಂದರೆ, ಬುದ್ಧಿವಂತಿಕೆ ಮತ್ತು ವಿಚಾರವಂತಿಕೆಗಳು. ಬುದ್ಧಿವಂತರೆಲ್ಲರೂ ವಿಚಾರವಂತರಾಗಿರಲೇಬೇಕೆಂಬ ನಿಯಮವಿಲ್ಲ. ಸ್ಥೂಲ ಅರ್ಥದಲ್ಲಿ ವಿಮರ್ಶಾತ್ಮಕವಾದ ಬುದ್ಧಿವಂತಿಕೆಯನ್ನೇ ವಿಚಾರವಂತಿಕೆ ಎಂದು ಕರೆಯಬಹುದು. ಅದನ್ನೇ ನಾವು ಶರಣರ ಪರಿಭಾಷೆಯಲ್ಲಿ ಜಂಗಮ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ವಾಸ್ತವವಾಗಿ ವೈಚಾರಿಕತೆ ಎಂಬುದು ಒಬ್ಬ ಮನುಷ್ಯನ ಜನ್ಮದೊಂದಿಗೆ ಜನ್ಮತಾಳುತ್ತದೆ. ಎಳೆಯ ಕೂಸು ತೊಟ್ಟಿಲಲ್ಲಿ ಮಲಗಿ ಕುತೂಹಲದಿಂದ ಹೊರಜಗತ್ತನ್ನು ಗಮನಿಸುವ ಪ್ರಕ್ರಿಯೆ ಜ್ಞಾನಕ್ಕೆ ಮತ್ತು ವಿಚಾರವಂತಿಕೆಗೆ ನಾಂದಿಯಾಗುತ್ತದೆ, ಎನ್ನಬಹುದು. ಬುದ್ಧಿ ಮತ್ತು ಪಕ್ವತೆಗಳು ಬೆಳೆಯುತ್ತ ಹೋದಂತೆ ಪ್ರಶ್ನಾರ್ಥಕತೆ ಮತ್ತು ವಿಮರ್ಶಾತ್ಮಕತೆಗಳು ಗಟ್ಟಿಗೊಳ್ಳುತ್ತ ಹೋಗುತ್ತವೆ. ಜೊತೆಗೆ ಕೂಸಿಗೆ ಒಂದಿಷ್ಟು ಒಳ್ಳೆಯ ಸಂಸ್ಕಾರ ಮತ್ತು ಹೆಚ್ಚಿನ ಅರಿವು ಪ್ರಾಪ್ತವಾಗುವುದು ಅದರ ವೈಚಾರಿಕತೆಯನ್ನು ಗಟ್ಟಿಗೊಳಿಸುತ್ತ ಹೋಗುತ್ತದೆ. ಇದನ್ನು ನೋಡಿದಾಗ ವ್ಯಕ್ತಿಯೋರ್ವನ ಮನಃಸ್ಥಿತಿ, ಸಮಕಾಲೀನ ಸಾಮಾಜಿಕ, ಆರ್ಥಿಕ ಪರಿಸ್ಥಿತಿ ಮತ್ತು ಶೈಕ್ಷಣಿಕ ವಾತಾವರಣಗಳು ವೈಚಾರಿಕತೆಯ ಕೇಂದ್ರಸ್ಥಾನಗಳೆಂಬುದು ಕಂಡುಬರುತ್ತದೆ.

ವೈಚಾರಿಕತೆ ಎಂಬುದು ಒಂದು ಬಗೆಯ ಚಿಂತನಶೀಲತೆ. ಅದು ತನ್ನ ಮತ್ತು ಇತರರ ಒಳಿತಿಗೆ ಪೂರಕವಾಗಬಲ್ಲ ಒಟ್ಟು ಪರಿಸರವನ್ನು ಬಯಸುತ್ತದೆ. ಹೀಗಾಗಿ ವೈಚಾರಿಕತೆಯ ವ್ಯಾಪಕತೆ ಹೆಚ್ಚುತ್ತ ಹೋಗುತ್ತದೆ. ಮನುಷ್ಯ ಬದುಕಿನ ಆರಂಭದಿಂದ ಹಿಡಿದು ಅಂತ್ಯದವರೆಗಿನ ಎಲ್ಲ ವಸ್ತು ವಿಷಯ ಮತ್ತು ಸಂದರ್ಭಗಳು ವೈಚಾರಿಕತೆಯ ತೆಕ್ಕೆಯಲ್ಲಿ ಕಾಣಬರುತ್ತವೆ. ಅದರಲ್ಲಿ ಲಿಂಗ, ಬಣ್ಣ, ಜಾತಿ, ಅಂತಸ್ತು, ವರ್ಗ, ವರ್ಣ, ಶಿಕ್ಷಣ, ಸಾಹಿತ್ಯ, ಸಮಾಜ, ಧರ್ಮ, ವಿಚಾರಧಾರೆಗಳು ಇವೇ ಮುಂತಾದ ಹಲವು ಹತ್ತು ವಿಷಯಗಳು ಎಡೆ ಪಡೆಯುತ್ತವೆ. ಹಾಗೆ ನೋಡಿದರೆ, ವೈಚಾರಿಕತೆಯ ವ್ಯಾಪ್ತಿಯಿಂದ ಹೊರಗುಳಿಯಬಹುದಾದ ವಸ್ತುವಾಗಲಿ, ವಿಷಯವಾಗಲಿ ಈ ಪ್ರಪಂಚದಲ್ಲಿ ಯಾವುದೂ ಇಲ್ಲವೆಂದೇ ಹೇಳಬಹುದು.

ಮನುಷ್ಯನ ಎದುರಿಗೆ ನೂರಾರು ವಿಚಾರಗಳು ಇರುತ್ತವೆ. ಅವುಗಳಲ್ಲಿ ಹರಿತವಾದ ಮತ್ತು ಜನೋಪಯೋಗಿಯಾದ ಕೆಲವನ್ನು ಮಾತ್ರ ಹೊಂದಿಸಿಕೊಂಡು ಒಬ್ಬ ವ್ಯಕ್ತಿ ತನ್ನ ವೈಚಾರಿಕತೆಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಮನುಷ್ಯನ ಬದುಕಿನಲ್ಲಿ ವಿಚಾರದಿಂದಲೇ ಬದಲಾವಣೆ, ವಿಚಾರದಿಂದಲೇ ಬೆಳಕು. ಬಹುಶಃ ಇದನ್ನೇ ಚನ್ನಬಸವಣ್ಣನು ''ವಿಚಾರಗಳಿಂದ ಸಹಾಯಿಗಳಿಲ್ಲ'' ಎಂದು ಹೇಳಿದ್ದಿರಬೇಕು. ವೈಚಾರಿಕತೆ ಎಂಬುದು ಒಂದು ಬಗೆಯ ಬಂಡಾಯವಿದ್ದಂತೆ. ಜಿಡ್ಡುಗಟ್ಟಿರುವ ಯಾವುದನ್ನೇ ಆದರೂ ವೈಚಾರಿಕತೆಯು ಪ್ರಶ್ನಿಸಬಲ್ಲುದು ಮತ್ತು ಉತ್ತಮಿಕೆಯ ಪರಿಹಾರೋಪಾಯಗಳನ್ನು ಸೂಚಿಸಬಲ್ಲುದು. ಒಳಹೊಕ್ಕು ನೋಡಿದಾಗ ವೈಚಾರಿಕತೆಯು ಧರ್ಮ ಮತ್ತು ವಿಜ್ಞಾನ ಎರಡಕ್ಕೂ ಅತ್ಯಂತ ಸಮೀಪವಾಗಿರುವುದು ಕಂಡುಬರುತ್ತದೆ. ಆದರೆ ಕೆಲವರು ಈ ಸೂಕ್ಷ್ಮವನ್ನು ತಿಳಿಯದೆ ಧರ್ಮವನ್ನು ವೈಚಾರಿಕತೆಯಿಂದ ದೂರವಿಟ್ಟು ಪ್ರತಿಪಾದಿಸುತ್ತಾರೆ. ಅದು ಸಮಾಜಕ್ಕೆ ಹಾನಿಕಾರಕವಾದುದು. ಒಟ್ಟಾರೆ ಒಂದು ಸಮಾಜದ ಶಿಕ್ಷಣ, ಸಾಹಿತ್ಯ, ನಂಬಿಕೆ, ಆಚರಣೆ, ಮೌಲ್ಯ, ಧರ್ಮ, ರಾಜಕೀಯ, ಆರ್ಥಿಕ ಮೊದಲಾದ ವಿಚಾರಗಳು ಸ್ವಸ್ಥವಾಗಿವೆ ಎಂದರೆ ಅಲ್ಲಿ ವೈಚಾರಿಕತೆ ಕಾರ್ಯಪ್ರವೃತ್ತವಾಗಿದೆ ಎಂದೇ ಅರ್ಥ.

ಜಡ ಸಂಸ್ಕೃತಿಯ ತೆಕ್ಕೆಯಲ್ಲಿ ಬೆಂದುಹೋಗಿದ್ದ ಬಹುಸಂಖ್ಯಾತ ವರ್ಗ, ವಸಾಹತು ಕಾಲದಲ್ಲಿ ಅಕ್ಷರ ಸಂಸ್ಕೃತಿಯ ತೆಕ್ಕೆಗೆ ಬಂದ ಮಹಿಳೆಯರು, ದಲಿತರು, ಶೂದ್ರರು ಹೊಸದೊಂದು ಜಗತ್ತಿಗೆ ಪದಾರ್ಪಣೆ ಮಾಡಿದರು. ಈ ರೀತಿಯ ಹಲವು ಕಾರಣಗಳಿಂದಾಗಿ ಗ್ರಾಮಾಂತರ ಜನತೆಯ ಬದುಕಿನಲ್ಲಿ ಒಂದು ರೀತಿಯ ಹೊಸ ಬದಲಾವಣೆ ಆದುದು ಗಮನಾರ್ಹ ಸಂಗತಿ. ಭೌತಿಕ ಬದಲಾವಣೆಗೆ ಪೂರಕವಾದ ಸಂಗತಿಗಳು ಅನೇಕ. ಕೆ. ವಿ. ಪುಟ್ಟಪ್ಪನವರ ಬರಹದಲ್ಲಿ ಮೂಡಿಬಂದ ಸೈಕಲ್, ದೇವನೂರು ಮಹಾದೇವ ಅವರ ಡಾಂಬರು ಬಂದುದು, ರೇಡಿಯೋ, ಅಬಚೂರಿನ ಪೋಸ್ಟ್ ಆಫೀಸು, ಗ್ರಾಮಾಫೋನ್ ಇವೆಲ್ಲ ನಗರ ಸಂಸ್ಕೃತಿಯ ಸಂಚಲನೆಗೆ ಕಾರಣವಾದವು.

ಪಾಶ್ಚಾತ್ಯರ ಶಿಕ್ಷಣ ನೀತಿಯಿಂದ ಅನೇಕ ಸೌಲಭ್ಯಗಳು ತಳವರ್ಗಗಳಿಗೆ ದೊರೆತವು. ಸ್ವಾತಂತ್ರ್ಯ ಚಳವಳಿಯ ಪ್ರಭಾವ ಕೂಡ ಒಂದು ಹೊಸ ಬದುಕಿಗೆ ಕಾರಣವಾಯಿತು. ತಳವರ್ಗದ ಸಮುದಾಯಕ್ಕೆ ಫುಲೆ, ಪೆರಿಯಾರ್, ಅಂಬೇಡ್ಕರ್ ಅವರ ಹೋರಾಟದ ಫಲದಿಂದ ಬುದ್ಧ, ಬಸವ, ಅಲ್ಲಮ ಎಲ್ಲರೂ ಅರಿವಿಗೆ ಬಂದರು. ಗ್ರಾಮ ಸ್ವರಾಜ್ಯದ ಕಲ್ಪನೆಯಲ್ಲಿ ಹಳ್ಳಿಗಳ ಮೂಲಕ ಭಾರತವನ್ನು ಹೊಸ ಜಗತ್ತಿನಲ್ಲಿ ನಿರ್ಮಾಣ ಮಾಡುವುದು ನಡೆಯಿತು. ಮೀಸಲಾತಿ ಕಲ್ಪನೆ ಕಾರ್ಯಗತಗೊಂಡು ಇಲ್ಲಿಯವರೆಗೆ ದಲಿತರಿಗೆ, ಶೂದ್ರರಿಗೆ, ಮಹಿಳೆಯರಿಗೆ ದಕ್ಕದೇ ಇದ್ದುದನ್ನು ದಕ್ಕಿಸಿಕೊಳ್ಳುವ ಪ್ರಯತ್ನ ಜೀವ ಪಡೆದುಕೊಂಡಿತು. ಗಾಂಧಿ, ಅಂಬೇಡ್ಕರ್ ತತ್ವಗಳು ಪ್ರಚಲಿತವಾದವು.

ಎಪ್ಪತ್ತರ ದಶಕದಲ್ಲಿ ಮಹಿಳಾ ಚಳವಳಿ, ದಲಿತ ಚಳವಳಿ, ಬಂಡಾಯ ಚಳವಳಿ ಕಾರ್ಮಿಕ ಚಳವಳಿಗಳು ಒಂದೇ ಬ್ಯಾನರ್‌ನ ಅಡಿಯಲ್ಲಿ ತಮ್ಮ ಹಕ್ಕುಗಳ ಈಡೇರಿಕೆಗಾಗಿ ಹೋರಾಟಕ್ಕಿಳಿದವು. ಆ ಸಂದರ್ಭದ ಸಾಹಿತ್ಯ ಮುಖ್ಯವಾಗಿ ಪ್ರಸ್ತಾಪ ಮಾಡಿದ್ದು ಶಿಕ್ಷಣದ ಮೂಲಕವೇ ಕ್ರಾಂತಿ ಸಾಧ್ಯ, ಕಲಿಯಬೇಕು, ಕಲಿಯುವುದರ ಮೂಲಕ ಪರಿವರ್ತನೆ ಕಂಡುಕೊಳ್ಳಬೇಕು ಎನ್ನುವುದು. ಮೂಢನಂಬಿಕೆ ಹಾಗೂ ಸ್ಥಗಿತ ಮೌಲ್ಯಗಳ ನಿರಾಕರಣೆ ಮಾಡುವ ಬಹುಮುಖ್ಯವಾದ ಚಿಂತನೆ ಪ್ರಧಾನವಾಯಿತು. ಕ್ರಮೇಣ ಸಾಹಿತ್ಯ, ರಾಜಕೀಯ, ಶೈಕ್ಷಣಿಕ ಹೋರಾಟಗಳು ಬೇರೆಬೇರೆಯಾಗಿ ಕಾಣಿಸಲಿಲ್ಲ. ಈ ಎಲ್ಲ ಚಿಂತನಧಾರೆಗಳು ಹೊಸದೊಂದು ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ

ನೆಲೆಗಳಿಗೆ ಕಾರಣವಾದವು. ಆಧುನಿಕ ಮಾಧ್ಯಮಗಳು ಬಂದ ಮೇಲೆ ಮನೆಯಲ್ಲಿಯೇ ಜಗತ್ತಿನ ವಿದ್ಯಮಾನ ನೋಡಲು ಸಾಧ್ಯವಾಯಿತು.

ವಸಾಹತೀಕರಣದ ವಿಸ್ತೃತ ರೂಪವೇ ಜಾಗತೀಕರಣ ಎನ್ನುವುದನ್ನು ನಾವೆಲ್ಲರೂ ಬಲ್ಲೆವು. ನಮಗರಿವಿಲ್ಲದೆ ಆಧುನಿಕ ಮಾಧ್ಯಮಗಳ ಮೂಲಕ ಖಾಸಗೀಕರಣ, ಉದಾರೀಕರಣ ಹಾಗೂ ಜಾಗತೀಕರಣವನ್ನು ನಾವು ಒಪ್ಪಿಕೊಂಡು ಬಿಟ್ಟಿದ್ದೇವೆ. ನಾವು ಹೊರದೇಶದ ಸಂಸ್ಕೃತಿಯನ್ನು ಅಪ್ಪಿ ಕೊಂಡಿರುವುದು ದಿಟವಾದರೂ, ಅದನ್ನು ಒಪ್ಪಿಕೊಳ್ಳುತ್ತಲೇ ವಿರೋಧಿಸುತ್ತಲೂ ಇದ್ದೇವೆ. ನಮ್ಮಲ್ಲಿರುವ ಮೊಬೈಲ್ ಮೂಲಕ ಸಂವಹನ ಮಾಡುತ್ತಲೇ ಪರ್ಯಾಯ ಸಂಸ್ಕೃತಿ ಕುರಿತು ಮಾತನಾಡುವ ನಾವು ಜಾಗತೀಕರಣದ ಲಾಭಗಳನ್ನು ಬಳಸಿಕೊಳ್ಳುವುದನ್ನು ಬಿಟ್ಟಿಲ್ಲ.

ಜಾಗತೀಕರಣದಿಂದಾಗಿ ತಳಸಂಸ್ಕೃತಿಗಳಿಗೆ ಒಂದಷ್ಟು ಲಾಭವೇ ಆಗಿದೆ. ಆದರೆ ಬೆಂಕಿ ಆರಿದರೂ ಬೂದಿಯ ಕಾವು ಆರಿಲ್ಲ ಎನ್ನುವಂತೆ ಅಸ್ಪೃಶ್ಯತಾ ಸಮಸ್ಯೆಗಳು ಹಾಗೆಯೇ ಉಳಿದುಕೊಂಡಿವೆ. ಸಮಾಜದಲ್ಲಿ ಅಪರಾಧಗಳು ಹೆಚ್ಚುತ್ತಲಿವೆ. ದಲಿತರ ಮೇಲಿನ ದೌರ್ಜನ್ಯಗಳು ಕಡಿಮೆಯಾಗಿಲ್ಲ. ಪ್ರಪಂಚದಲ್ಲಿ ಮಾನವೀಯತೆ ಇಲ್ಲವೇನೋ ಎನ್ನುವಂತಹ ಪರಿಸ್ಥಿತಿ ಉಂಟಾಗಿದೆ. ಅದಕ್ಕೆ ಪೂರಕವಾಗಿ ನಮ್ಮ ರಾಜಕಾರಣದಲ್ಲಿ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಕೇಸರೀಕರಣ, ಕೋಮುವಾದ ಒಳಸುಳಿಯುತ್ತಿವೆ. ಪ್ರತಿಗಾಮಿ ಶಕ್ತಿಗಳು ವೃದ್ಧಿಸುವುದಕ್ಕೆ ವಾತಾವರಣ ನಿರ್ಮಾಣವಾಗಿದೆ. ಅಶೋಕನಂತಹ ರಾಜರು ಹಿಂಸೆಯ ನೆಲೆಯನ್ನು ತೊರೆದು, ಅಹಿಂಸೆಯ ನೆಲೆಯಿಂದ ಸಮಾಜೋದ್ಧಾರ ಮಾಡಿದರು. ಆದರೆ ಪ್ರಸ್ತುತ ಸಂದರ್ಭದಲ್ಲಿ ಆಗುತ್ತಿರುವ ಪರಿಣಾಮವೇ ಬೇರೆ. ಹಿಂದಿನವರು ಅಹಿಂಸೆಯೆಡೆಗೆ ಮುಖಮಾಡಿದರೆ, ಇಂದು ಅಂತಹ ಸಮಾಜ ಸುಧಾರಕರ ಅನುಯಾಯಿಗಳು ದಿಕ್ಕು ಬದಲಾಯಿಸಿದರು. ಅಂದರೆ, ಅವರ ಹೆಸರಲ್ಲಿ ಶಿವಸೇನೆ, ಹಿಂದೂಸೇನೆ, ವಿಷ್ಣುಸೇನೆ ಇವೇ ಮೊದಲಾದ ಸೇನೆಗಳನ್ನು ಕಟ್ಟಿದರು. ಈಗ ಇವುಗಳದೇ ಪಾರುಪತ್ಯ. ಈದ್ಗಾ, ದತ್ತ ಪೀಠದಂತಹ ವಿಷಯಗಳು ಇವರಿಗೆ ಆಹಾರವಾಗಿವೆ. ಗುಡಿಗುಂಡಾರಗಳ ಹೆಸರಿನಲ್ಲಿ ಹೊಡೆದಾಡುವ ಇವರು ಚಲನಶೀಲವಾದುದನ್ನು ಜಡವಾಗಿಸುವ ಪ್ರವೃತ್ತಿ ಬೆಳೆಸಿಕೊಂಡಿದ್ದಾರೆ. ವೈದಿಕರ ಅಷ್ಟಮಠದ ಪುತ್ತಿಗೆ ಸ್ವಾಮಿಗಳು ವಿದೇಶಕ್ಕೆ ಹೋಗಿಬಂದಿದ್ದಾರೆ. ಆ ಕಾರಣ ಅವರು ಕೃಷ್ಣನ ಪೂಜೆ ಮಾಡಲು ಅರ್ಹರಲ್ಲವೆಂದು ಹೇಳುವ ಈ ವೈದಿಕರು ವಿದೇಶದಲ್ಲಿ ಕೃಷ್ಣನ, ಗಣಪನ ಗುಡಿಗಳನ್ನು ಕಟ್ಟಲು ಟೊಂಕ ಕಟ್ಟಿ ನಿಂತಿದ್ದಾರೆ. ವಿದೇಶೀ ಹಣ ಬಳಸಿಕೊಂಡು ಭಾರತದಲ್ಲಿ ದೇವಸ್ಥಾನಗಳ ಜೀರ್ಣೋದ್ಧಾರ ಮಾಡಲು ಇವರಿಗೆ ಯಾವ ಮುಜುಗರವೂ ಇಲ್ಲ.

ವೈದಿಕರು ವೈದಿಕರನ್ನೇ ಅಸ್ಪೃಶ್ಯರಂತೆ ನೋಡುವಾಗ ಇನ್ನು ಇಲ್ಲಿಯ ದಲಿತರ, ಶೂದ್ರರ ಗತಿಯೇನು? ಈ ನಡುವೆ ನಗರ ಮತ್ತು ಹಳ್ಳಿಯ ನಡುವೆ ಕಂದರಗಳು ಏರ್ಪಟ್ಟು ನಗರಗಳು ಹಳ್ಳಿಗಳನ್ನು ಖಾಲಿಮಾಡಿವೆ. ನಮ್ಮ ನೆಲದ ನಿಜವಾದ ಸಂಸ್ಕೃತಿ ನಾಪತ್ತೆಯಾಗಿದೆ. ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಿಕೊಳ್ಳಲು ಯುವಕರು ನಗರಗಳಿಗೆ ವಲಸೆ ಹೋಗುತ್ತಾರೆ. ಆದರೂ ಅಭದ್ರತೆ ಅವರನ್ನು ಕಾಡಿಸುತ್ತದೆ. ಇದರಿಂದಾಗಿ ನೆಲಮೂಲ ಸಂಸ್ಕೃತಿ, ಕೃಷಿ ಚಟುವಟಿಕೆಗಳು ನಾಶದ ಅಂಚಿನಲ್ಲಿವೆ.

ಪ್ರಸ್ತುತ ಸಂದರ್ಭದಲ್ಲಿ ಮೀಸಲಾತಿ ಕುರಿತ ಚರ್ಚೆಗಳು ನಡೆಯುತ್ತಿವೆ. ಮೀಸಲಾತಿ ಸೌಲಭ್ಯವನ್ನು ಪಡೆದವರೇ ಅದರ ವಿರುದ್ಧ ನಿಂತಿದ್ದಾರೆ. ಕೆನೆಪದರದ ಪರಿಭಾಷೆಯಲ್ಲಿ ಇದರ ಚರ್ಚೆ ನಡೆದಿದೆ. ದಲಿತರಲ್ಲಿ ಆರಂಭವಾದ ಈ ಚರ್ಚೆಯೇ ಅಲ್ಲದೆ ಸಮಾಜದ ಎಲ್ಲ ಜಾತಿಯ ಜನವರ್ಗಗಳಲ್ಲಿ ಒಳಮೀಸಲಾತಿಯ ಚರ್ಚೆಗಳು ನಡೆಯುತ್ತಿವೆ. ಆದರೆ ಯಾರು ಈ ಕುರಿತು ಮಾತನಾಡುತ್ತಿದ್ದರೋ, ಅವರೇ ಈ ಚರ್ಚೆಯನ್ನು ಮತ್ತು ವರ್ಗೀಕರಣವನ್ನು ನಿಲ್ಲಿಸಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಪ್ರಸ್ತುತದಲ್ಲಿ ಸಮಾಜವು ಹೊಸ ದಿಕ್ಕಿನೆಡೆಗೆ ಸಾಗದೆ ಅನೇಕಾನೇಕ ಕಾರಣಗಳಿಂದಾಗಿ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿ ವಿಘಟನೆಯ ಹಂತದಲ್ಲಿದೆ.

ಇವತ್ತು ಹುಟ್ಟಿಕೊಳ್ಳುತ್ತಿರುವ ಸಾಹಿತ್ಯವು ಕೂಡ ಈ ಎಲ್ಲ ವೈರುಧ್ಯಗಳನ್ನು, ಸಮಸ್ಯೆಗಳನ್ನು ಅಭಿವ್ಯಕ್ತಿಸುತ್ತಿದೆ. ರಾಜಕೀಯ ಕ್ಷೇತ್ರದಲ್ಲಿ ಗುಂಪುಗಾರಿಕೆ ಇರುವ ಹಾಗೆ ಸಾಹಿತ್ಯ, ಸಂಸ್ಕೃತಿ ಕ್ಷೇತ್ರಗಳಲ್ಲೂ ಗುಂಪುಗಾರಿಕೆ ಇದೆ. ನಾಡು-ನುಡಿ-ಭಾಷೆ ಇತ್ಯಾದಿಗಳ ಕುರಿತ ಚರ್ಚೆಯ ಸಂದರ್ಭದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳನ್ನು ಕಾಣುತ್ತೇವೆ. ಸಮಸ್ಯೆಗಳನ್ನು ನಿವಾರಣೆ ಮಾಡಬೇಕಾದವರೇ ಸಮಸ್ಯೆಗಳನ್ನು ಸೃಷ್ಟಿಸುತ್ತಿದ್ದಾರೆ.

ಪ್ರಜಾಪ್ರಭುತ್ವವಿದ್ದರೂ ಅದು ಇಲ್ಲವೇನೋ ಎಂಬ ರೀತಿಯಲ್ಲಿ ಬದುಕು ಸಾಗುತ್ತಿದೆ. ಜನಪರವಾದಂತಹ ಚಳವಳಿಗಳು ಇಲ್ಲವಾಗಿವೆ. ಅದರ ಬದಲಾಗಿ ಸಂಕುಚಿತ ಭಾವನೆಗಳು ಪುಟದೇಳುತ್ತಿವೆ. ಇಂತಹ ಸಂದರ್ಭದಲ್ಲಿ ವೈಚಾರಿಕ ಚಿಂತನೆ ತುಂಬ ಪ್ರಖರವಾಗಬೇಕಾಗಿದೆ. ಧರ್ಮದ ಹೆಸರಿನಲ್ಲಿ ಕೋಮುವಾದ, ಭಯೋತ್ಪಾದನೆಗಳ ಬೀಜವನ್ನು ಬಿತ್ತಿ ವ್ಯವಸಾಯ ಮಾಡುವ ಕ್ರಿಯೆ ಅವ್ಯಾಹತವಾಗಿ ಸಾಗಿದೆ. ಅದನ್ನು ವಿರೋಧಿಸುವ, ನಮ್ಮ ಸಮುದಾಯದಿಂದ ನಿರ್ಮೂಲ ಮಾಡುವ ಸಲುವಾಗಿ ಜಗತ್ತಿನ ಹೊಸ ಚಿಂತನೆಗಳು, ಆಲೋಚನೆಗಳು ಇಂದು ಅಗತ್ಯವಾಗಿವೆ. ವಿಶೇಷವಾಗಿ ಬಸವಾದಿ ಶರಣರ ಪ್ರಗತಿಪರ ವಿಚಾರಗಳು ದಾರಿದೀಪಗಳಂತಿದ್ದು, ಅವುಗಳನ್ನು ನಾವು ಬಳಸಿಕೊಳ್ಳುವುದು ಮುಖ್ಯವಾಗಬೇಕು.

ಅದೇ ಸಂದರ್ಭದಲ್ಲಿ ಭಾರತದಲ್ಲಿ ವೈಚಾರಿಕತೆಯು ಇತ್ತೀಚೆಗೆ ಸಾಕಷ್ಟು ಗಟ್ಟಿಗೊಳ್ಳುತ್ತಿರುವುದೂ ಕಂಡುಬರುತ್ತಿದೆ. ಇದು ಆರೋಗ್ಯಕರ ಬೆಳವಣಿಗೆಯೆ. ಪ್ರಮುಖವಾಗಿ ಕವಿಗಳು, ಸಾಹಿತಿಗಳು ಮತ್ತು ಪ್ರಗತಿಪರ ಬರಹಗಾರರಿಂದ ಉತ್ತಮ ಸಾಹಿತ್ಯ ಪ್ರಕಟವಾಗುತ್ತಿರುವುದು ಸಂತಸದ ಸಂಗತಿ. ಬಸವಣ್ಣ ಹೇಳಿದ 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ಮಾತಿನಲ್ಲಿ ಪ್ರಖರವಾದ ವೈಚಾರಿಕ ಚಿಂತನವಿದೆ. ಪ್ರಸ್ತುತದಲ್ಲಿ ಸ್ಥಾವರ ಸಂಸ್ಕೃತಿಯೇ ಶ್ರೇಷ್ಠವೆಂದು ಹೇಳುತ್ತಲೇ, ಚಲನಶೀಲತೆಯಿಂದ ಸ್ಥಗಿತತೆಯೆಡೆಗೆ ಬಹುಜನರು ನಡೆದಿರುವುದು ಅಪಾಯದ ಸಂಕೇತ. ಜಡವಾದುದು ಸಮಾಜದ ಬೆಳವಣಿಗೆಗೆ ಅಪಾಯವನ್ನುಂಟುಮಾಡುತ್ತದೆ. ಚಲನಶೀಲವಾದುದು ಯಾವತ್ತೂ ಆರೋಗ್ಯಕರವಾದ ಸಮಾಜ ನಿರ್ಮಾಣದಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಚಲನಶೀಲತೆಗೆ ಪ್ರೇರಣೆಯೇ ವೈಚಾರಿಕತೆ. ಅದು ಜಂಗಮ ಸ್ವರೂಪಿಯಾಗಿರುತ್ತದೆ. ಜಡ ಸಂಸ್ಕೃತಿ ಸ್ಥಾವರವಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ.


**ಡಾ|| ಎಚ್. ಟಿ. ಪೋತೆ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ - ೫೮೫ ೧೦೬


### ಒಂದಿಷ್ಟು ಅಂಕಿ-ಅಂಶಗಳು

* ದೇಶದಲ್ಲಿ ಒಟ್ಟು ೧೫,೦೦೦ ಅಕ್ರಮ ಗಣಿಗಳಿವೆ. ಪರವಾನಗಿ ಪಡೆದು ಸಕ್ರಮವಾಗಿರುವ ಗಣಿಗಳು ೮೭೧. ಇದು ವಿವಿಧ ಸರಕಾರಿ ಸಂಸ್ಥೆಗಳ ಅಂದಾಜು.
* ಸ್ವಾತಂತ್ರ್ಯಾನಂತರದ ನಾಲ್ಕೂವರೆ ದಶಕಗಳ ಅವಧಿಯಲ್ಲಿ ಗಣಿಗಾರಿಕೆಯಿಂದಾಗಿ ಬೀದಿಪಾಲಾದ ಬಡಜನರ ಸಂಖ್ಯೆ ಸುಮಾರು ಎರಡೂವರೆ ಕೋಟಿ. ಇಂಥವರಲ್ಲಿ ಪುನರ್ವಸತಿ ಸೌಲಭ್ಯ ದೊರೆತದ್ದು ಕಾಲುಭಾಗ ಜನರಿಗೆ ಮಾತ್ರ. ನಿರಾಶ್ರಿತರಾದವರ ಪೈಕಿ ಅರ್ಧದಷ್ಟು ಜನ ಬುಡಕಟ್ಟು ಜನಾಂಗದವರು.
* ನಮ್ಮ ದೇಶದ ಅರಣ್ಯಪ್ರದೇಶದಲ್ಲಿ ಈಗಾಗಲೆ ಸುಮಾರು ಒಂದು ಲಕ್ಷ ಅರವತ್ತನಾಲ್ಕು ಸಾವಿರ ಹೆಕ್ಟೇರು ಪ್ರದೇಶವನ್ನು ಗಣಿಗಾರಿಕೆಗೆ ನೀಡಲಾಗಿದೆ. ೨೦೦೫-೦೬ರಲ್ಲಿ ಕಬ್ಬಿಣದ ಅದಿರು ಉದ್ಯಮಕ್ಕಾಗಿ ೭೭ ಮಿಲಿಯ ಟನ್ ನೀರನ್ನು ಉಪಯೋಗಿಸಲಾಯಿತು. ಇದು ಮೂರು ಮಿಲಿಯ ಜನರಿಗೆ ಅತ್ಯಗತ್ಯವಾದ ನೀರು ಪೂರೈಕೆಗೆ ಸಮ.
* ೨೦೦೬ರಲ್ಲಿ ಪ್ರಮುಖ ಗಣಿಗಾರಿಕೆ ಉದ್ಯಮಗಳು ೧.೮೪ ಬಿಲಿಯ ಟನ್ (ಬಿಲಿಯನ್ ಎಂದರೆ ಒಂದು ಲಕ್ಷ ಕೋಟಿ) ತ್ಯಾಜ್ಯವನ್ನು ಹೊರಹಾಕಿದವು. ಇದರಲ್ಲಿ ಬಹು ಭಾಗ ಈಗಾಗಲೇ ವಿಲೇವಾರಿಯಾಗದೆ ಬಿದ್ದಿದೆ. ತ್ಯಾಜ್ಯ ಹೊರ ಹಾಕುವುದು (ಕಲ್ಲಿದ್ದಲು ಗಣಿಗಾರಿಕೆ ಉದ್ಯಮ) ಪ್ರತಿ ಟನ್ ಕಲ್ಲಿದ್ದಲಿಗೆ ಮೂರು ಟನ್ ತ್ಯಾಜ್ಯ ಉತ್ಪತ್ತಿಯಾಗುತ್ತದೆ.
* ಗಣಿಧಣಿಗಳು ದೇಶದ ಸಂಪತ್ತನ್ನು ಬೇಕಾಬಿಟ್ಟಿಯಾಗಿ ಲೂಟಿ ಹೊಡೆಯುತ್ತಿರುವುದು ಆ ಪ್ರದೇಶಗಳಲ್ಲಿ ಸಾಮಾಜಿಕ ಘರ್ಷಣೆಗಳಿಗೆ ಎಡೆಯಾಗಿದೆ. ಹಾಗಾಗಿ ದೇಶದಲ್ಲಿ ಗಣಿಗಾರಿಕೆ ನಡೆಯುತ್ತಿರುವ ಸಂಪದ್ಭರಿತ ಜಿಲ್ಲೆಗಳಲ್ಲಿ ಶೇಕಡ ೬೦ರಷ್ಟು ಪ್ರದೇಶದಲ್ಲಿ ಮಾವೋವಾದಿ ಚಟುವಟಿಕೆಗಳು ಅಧಿಕವಾಗಿವೆ ಎಂದು ಒಂದು ಅಂದಾಜು.
* ದೇಶದಲ್ಲಿ ಸುಮಾರು ೩,೭೮೪ ಪ್ರಮುಖ ಖನಿಜಗಳನ್ನು ತೆಗೆಯಲು ಪರವಾನಗಿ ನೀಡಲಾಗಿದೆ. ಇದಲ್ಲದೆ ಸಾವಿರಾರು ಇತರ ಗಣಿಗಳು ಮತ್ತು ಕಲ್ಲು ಗಣಿಗಳು ಇವೆ.
* ೨೦೦೫ರಲ್ಲಿ ದೇಶದಲ್ಲಿ ೧೪,೫೦೪ ಅಕ್ರಮ ಗಣಿಗಳನ್ನು ಪಾರ್ಲಿಮೆಂಟರಿ ಸಮಿತಿಯೊಂದು ಗುರ್ತಿಸಿದೆ.
* ದೇಶದಲ್ಲಿ ೨,೯೯೬ ಅಕ್ರಮ ಗಣಿಗಳಿವೆ. ಇವೆಲ್ಲ ಪ್ರಮುಖ ಖನಿಜಗಳಿಗೆ ಸಂಬಂಧಿಸಿವೆ. ಅಲ್ಲದೆ, ಇತರ ಖನಿಜಗಳಿಗೆ ಸಂಬಂಧಪಟ್ಟಂತೆ ೨೫,೦೫೫ ಅಕ್ರಮ ಗಣಿಗಳಿವೆ. ಇದು ಇತ್ತೀಚೆಗೆ ಗಣಿಗಾರಿಕೆ ಸಚಿವಾಲಯ ಪ್ರಕಟಿಸಿರುವ ಅಂಕಿ-ಅಂಶ.
* ದೇಶದಲ್ಲಿ ಗಣಿ ಮಾಫಿಯಾ ಎಷ್ಟು ಪ್ರಬಲವಾಗಿದೆ ಎನ್ನುವುದು ಇದರಿಂದ ಗೊತ್ತಾಗುತ್ತದೆ.

# ಗೋಣು ನೋವು ಬೆಂಬತ್ತಿದ ಕಥೆ

ಹಠಮಾರಿ ಗೋಣು ನೋವು ನನ್ನ ಮಾನಸಿಕ ನೆಮ್ಮದಿಯನ್ನು ಹರಣ ಮಾಡಿತ್ತು. ಘಾಸಿಗೊಂಡ ಮನ. ಪಾತಾಳಕ್ಕೆ ಕುಸಿದ ಧೈರ್ಯ. ಮಾಯವಾದ ಮೊಗದ ಮುಗುಳ್ನಗೆ. ಹಳಿತಪ್ಪಿದ ಬದುಕು. ನಾನು ಅನುಭವಿಸಿದ ನೋವು, ಸಂಕಟ ದೇವರಿಗೇ ಪ್ರೀತಿ ! ಈ ಪೀಡೆ ತನ್ನಿಂತಾನೆ ತೊಲಗುವ ಭರವಸೆ ಬೆಳ್ಳಿ ಗೆರೆ. ಯಾರಿಗೆ ಬೇಕು ಇಂತಹ ಬಾಳ್ವೆ ? ಅದರ ನಿವಾರಣೆಗೆ ಏನಾದರೂ ಮದ್ದು ಮಾಡಲೇಬೇಕು. ಯೋಚನೆ ಹೊಳೆದಿದ್ದೇ ತಡ, ನಾನು ಗದುಗಿನ ಪ್ರಸಿದ್ಧ ಡಾಕ್ಟರ್ ಮೊರೆಹೊಕ್ಕೆ. ಅವರು ಒಂದು ಸಣ್ಣ ಸುತ್ತಿಗೆಯಿಂದ ನನ್ನ ಕತ್ತಿನ ಸುತ್ತಲೂ ಮೆಲ್ಲಗೆ ಬಾರಿಸಿ ಪರೀಕ್ಷಿಸಿದರು.

**ರೋ**ಗ-ರುಜಿನ ಮಾನವರಿಗೆ ಬಾರದೆ ಮರಕ್ಕೆ ಬಂದೀತೆ ? ಅವು ಮನುಷ್ಯರಿಗೆ ಬೇಡವಾದ ಅತಿಥಿಗಳು. ಯಾವಾಗ, ಯಾರಿಗೆ ಯಾವ ರೋಗ ವಕ್ಕರಿಸುತ್ತೆಂಬುದು ಸಾಕ್ಷಾತ್ ಹರಿಬ್ರಹ್ಮರಿಗೂ ತಿಳಿದಿಲ್ಲ...! ಕೆಲವೊಮ್ಮೆ ಮೇಲ್ನೋಟಕ್ಕೆ ರೋಗ ಸಣ್ಣದೆನಿಸಿದರೂ ಅದರ ಕಾಟ ಸಹಿಸಿಕೊಳ್ಳಲಾಗದಷ್ಟು! ಕತ್ತು ನೋವಿನ ಪ್ರಸಂಗ ನನ್ನ ನೆನಪಿನ ಗಣಿಯಲ್ಲಿ ಇನ್ನೂ ಮರೆಯಾಗಿಲ್ಲ. ಈ ಸಮಸ್ಯೆ ಕರಗಿಸಲು ನಾನು ತುಳಿದ ಹಾದಿ ಸುಗಮವಾಗಿರಲಿಲ್ಲ. ಕತ್ತು ನೋವಿನಿಂದ ಮುಕ್ತಿ ದೊರಕಿದ್ದು ಹೇಗೇ ?

ಪ್ರತಿದಿನ ನಾನು ಬೆಳಗ್ಗೆ ಹಾಸಿಗೆ ಬಿಟ್ಟೆದ್ದ ಕೂಡಲೆ ಗೋಡೆ ಮೇಲೆ ವಿರಾಜಿತ ದೇವರ ದರ್ಶನ ಪಡೆದ ನಂತರವೇ ಮುಂದಿನ ಕಾರ್ಯ. ಬಾಲ್ಯದಿಂದಲೇ ಬೆಳೆದು ಬಂದ ಪರಿಪಾಠ. ಆ ದಿನ ಎದ್ದು ವಾಡಿಕೆಯಂತೆ ಬಲ ಬದಿಗೆ ಕತ್ತು ತಿರುಗಿಸಲು ಸಾಹಸಪಟ್ಟೆ. ದುಸ್ತರವೆನಿಸಿತು. ಕತ್ತಿನಲ್ಲಿ ವಿಪರೀತ ಸಿಡಿತ. ಎಡಬದಿಗೆ ಹೊರಳಲು ಹೋದೆ. ಗೋಣು ಸಹಕರಿಸಲಿಲ್ಲ. ಗೋಣು ನೋವು ತನ್ನ ಶಕ್ತಿಯ ವಿರಾಟ ಸ್ವರೂಪದ ಪರಿಚಯ ಮಾಡಿಸಿ ಕೊಟ್ಟಿತು ! ಇದರ ರಗಳೆಯಿಂದ ಪಾರಾಗುವ ಪರಿ ಯಾವುದಯ್ಯಾ ? ಈ ಪೀಡೆ ತೊಲಗುವ ಗಳಿಗೆ ಯಾವಾಗ ಕೂಡಿಬರುತ್ತೋ ?

ಹಠಮಾರಿ ಗೋಣು ನೋವು ನನ್ನ ಮಾನಸಿಕ ನೆಮ್ಮದಿಯನ್ನು ಹರಣ ಮಾಡಿತ್ತು. ಘಾಸಿಗೊಂಡ ಮನ. ಪಾತಾಳಕ್ಕೆ ಕುಸಿದ ಧೈರ್ಯ. ಮಾಯವಾದ ಮೊಗದ ಮುಗುಳ್ನಗೆ. ಹಳಿತಪ್ಪಿದ ಬದುಕು. ನಾನು ಅನುಭವಿಸಿದ ನೋವು, ಸಂಕಟ ದೇವರಿಗೇ ಪ್ರೀತಿ! ಈ ಪೀಡೆ ತನ್ನಿಂತಾನೆ ತೊಲಗುವ ಭರವಸೆ ಬೆಳ್ಳಿ ಗೆರೆ. ಯಾರಿಗೆ ಬೇಕು ಇಂತಹ ಬಾಳ್ವೆ ? ಅದರ ನಿವಾರಣೆಗೆ ಏನಾದರೂ ಮದ್ದು ಮಾಡಲೇಬೇಕು. ಯೋಚನೆ ಹೊಳೆದಿದ್ದೇ ತಡ, ನಾನು ಗದುಗಿನ ಪ್ರಸಿದ್ಧ ಡಾಕ್ಟರ್ ಮೊರೆಹೊಕ್ಕೆ. ಅವರು ಒಂದು ಸಣ್ಣ ಸುತ್ತಿಗೆಯಿಂದ ನನ್ನ ಕತ್ತಿನ ಸುತ್ತಲೂ ಮೆಲ್ಲಗೆ ಬಾರಿಸಿ ಪರೀಕ್ಷಿಸಿದರು. ಡಾಕ್ಟರ್ ತಪಾಸಣೆ ಮುಗಿದಿದ್ದೇ ತಡ, ಬದುಕಿದೆಯಾ ಬಡಜೀವವೇ ಎನ್ನುವಂತೆ ನಿರಾಳವಾಗಿ ಉಸಿರಾಡಿದೆ.

''ಮಾಸ್ತರ, ನಿಮ್ಗೆ ಭಯ ಬೀಳುವಂಥಾದ್ದೇನು ಆಗಿಲ್ಲ. ಕೊಂಚ ನರಗಳ ಪ್ರಾಬ್ಲೆಂ ಐತಿ. ಕತ್ತಿನ ನರಗಳು ಒಂದುರಾಗೊಂದು ತಳಕು ಹಾಕ್ಕೊಂಡು ಅದ್ವಾನ ಆಗ್ಯಾವು. ನಿಮ್ಗೆ ಸ್ಟಿಫ್‌ನೆಕ್ ಆಗ್ಯೆತಿ. ಕೊಟ್ಟ ಮಾತ್ರೇನ ಹೊತ್ತೊತ್ತಿಗೆ ನುಂಗಿ, ಕುತ್ತಿಗೆಗೆ ಲೇಪನ ಮೆತ್ತಿದ್ರ ಒಂದ ವಾರದಾಗ ಸರಿ ಆಗ್ತೀರಿ. ಮಾತ್ರೆ ಮುಗಿದ ಮ್ಯಾಲೆ ಮತ್ತೊಮ್ಮೆ ಬರ್ರಿ'' ಎಂದು ಹೇಳಿ, ನನ್ನನ್ನು ಹೊರಗೆ ಅಟ್ಟಿದರು.

ನಾನು ಡಾಕ್ಟರ್ ಸೂಚನೆಗಳನ್ನು ಅಕ್ಷರಶಃ ಪಾಲಿಸಿದರೂ ಹರ ಇಲ್ಲ, ಶಿವ ಇಲ್ಲ! ಗೋಣುನೋವಿಗೆ ರಾಜೋಪಚಾರ ದೊರಕಿದರೂ ತಟಕು ಮಿಸುಕಾಡಲಿಲ್ಲ. ಮೊದಲ ಯತ್ನಕ್ಕೆ ಎಳ್ಳುನೀರು ಬಿಟ್ಟಂತಾಯಿತು.

ಇತ್ತೀಚೆಗೆ ನಮ್ಮ ಮನೆ ಸಮೀಪ ಒಂದು ಕ್ಲಿನಿಕ್ ತಲೆ ಎತ್ತಿತ್ತು. 'ಚಿಕ್ಕ ಪ್ರಾಯದ, ಸ್ಮಾರ್ಟ್ ಆಯುರ್ವೇದ ಡಾಕ್ಟರ್. ಭಾರಿ ಜಾಣ. ತುಂಬಾ ತಾಳ್ಮೆ ಸ್ವಭಾವ. ಹಸ್ತಗುಣದಲ್ಲಿ ಎತ್ತಿದ ಕೈ. ಮುಂಗಡ ಅಪಾಯಿಂಟ್‌ಮೆಂಟಿನ ಅಗತ್ಯವಿಲ್ಲ' – ಹೀಗಂತ ಕಿಲಾಡಿ ಮಾನಿನಿಯರಲ್ಲಿ ದೊಡ್ಡ ಗುಲ್ಲು. ಅದು ನನ್ನ ಕಿವಿಗೂ ತಲುಪಿತ್ತು. ಒಂದು ದಿನ ಡಾಕ್ಟರ್‌ನ ಮನೆಗೆ ಕರೆಯಿಸಿಕೊಂಡು, ನನ್ನ ಗೋಳನ್ನು ಅವರೆದುರು ತೋಡಿಕೊಂಡೆ. ಅವರಿಂದ ಬಂದದ್ದು ನೀರಸ ಪ್ರತಿಕ್ರಿಯೆ. ಅವರು ಹಠಾತ್ತಾಗಿ ನನ್ನ ಸೊಂಟಕ್ಕೆ ಸೂಜಿ ಹೆಟ್ಟಿ, ನುಂಗಲು ಮಾತ್ರೆ ಕೊಟ್ಟು, ಕ್ಲಿನಿಕ್‌ಗೆ ದಡದಡ ಹೊರಟುಹೋದರು.

''ಅಯ್ಯೊ, ಅದೇನ್ ಕೇಳ್ತೀರಾ ? ಸೂಜಿ ಪವಾಡವೊ... ಕಣ್ಕಟ್ಟೊ...! ಗೋಣು ನೋವೆಲ್ಲ ನಾಪತ್ತೆ! ಕೆಲವೊಮ್ಮೆ ದೊಡ್ಡವರಿಗಿಂತ ಸಣ್ಣವರು ಎಷ್ಟೋ

ಡಾ|| ರುದ್ರಯ್ಯ ವಿ. ಗದಗ



ಮೇಲು. ನಾನು ಪರಾರಿಯಾದ ಗೋಣು ನೋವಿನ ಭ್ರಮೆಯಲ್ಲಿ ತೇಲಾಡಿದೆ. ಹಿಡಿಸಲಾರದಷ್ಟು ಆನಂದ. ಸಂಜೆಯಾಗುತ್ತಿದ್ದಂತೆ ನನ್ನ ಸಂಭ್ರಮಕ್ಕೆ ತಣ್ಣೀರು ಬಿತ್ತು. ಪರಾರಿಯಾಗಿದ್ದ ಗೋಣು ನೋವು ಮಳ್ಳಿ ಹಾಗೆ ವಾಪಸ್ ಬರಬೇಕೇ! ಒಂಟಿಯಾಗಿ ಬರದೆ, ತನ್ನೊಂದಿಗೆ ಇನ್ನೊಂದನ್ನು ಎಳೆದುಕೊಂಡು ಬಂದಿತ್ತು. ನಾನು ಎದ್ದುನಿಂತರೆ, ಕಣ್ಣಿಗೆ ಕತ್ತಲಾವರಿಸಿ, ಕುಸಿದು ಬೀಳುವಂತಾಗಿತ್ತು. 'ಮಿಕ್ಕ ಮಾತ್ರೆ ನುಂಗಿದರೆ ನನಗೆಲ್ಲಿದೆ ಉಳಿಗಾಲ' ಎಂಬ ಭಾವನೆ ಮೂಡಿದ್ದೆ ತಡ, ಅವನ್ನೆಲ್ಲ ತಿಪ್ಪೆಗೆಸೆದು ಕೈತೊಳೆದುಕೊಂಡೆ.

ಒಂದು ದಿನ ನಾನು ಮಾರ್ಕೆಟ್‌ಗೆ ಹೋದಾಗ, ಅಪರೂಪಕ್ಕೆ ನನ್ನ ಚಡ್ಡಿದೋಸ್ತ ರಂಗ ಎದುರಾದ. ಇಬ್ರೂ ಹೋಟೆಲ್ ಹೊಕ್ಕು, ವಗ್ಗರಣೆ ಮಂಡಕ್ಕಿ, ಮೆಣಸಿನಕಾಯಿ ಬಜ್ಜಿ ತಿನ್ನುತ್ತಾ ಹರಟೆಯಲ್ಲಿ ಮುಳುಗಿದ್ದೆವು. ಮಾತಿನ ಮಧ್ಯೆ ನನ್ನ ಗೋಣು ನೋವಿನ ಕಥೆ ತೂರಿಬಂತು. ರಂಗ ಅದರ ಮೇಲೆ ಒಂದು ಉಪನ್ಯಾಸ ನೀಡಿದ.

''ನರದ ಬ್ಯಾನಿ ಭಾರಿ ಅಡ್ನಾಡಿದೊ ಮಾರಾಯ. ಅದನ ಸಸಾರ ತಗೋ ಹಾಗಿಲ್ಲ. ಏನಾರ ಹೆಚ್ಚು-ಕಮ್ಮಿ ಆಗಾಕ ಮುಂಚೇನೆ ಅದಕ್ಕೆ ಬುದ್ಧಿ ಕಲಿಸ್ಬೇಕು. ಹುಬ್ಬಳ್ಯಾಗಿರೋ ನರದ ವಿಶೇಷತಜ್ಞ ಡಾಕ್ಟರ್ ನನ್ಗೆ ಪರಿಚಿತರು. ಭಾರಿ ಶಾಣ್ಯಾ ಡಾಕ್ಟರ್. ಹಸ್ತಗುಣದಲ್ಲಿ ಕೇಳುವುದೇ ಬ್ಯಾಡ. ನೀ ಯಾಕ ಒಂದ್ಸಲ ಅವ್ರ ಹಂತೇಕ ಚೆಕ್‌ಅಪ್ ಮಾಡಿಸ್ಕೊಬಾರ್ದು? ಏಳು ಹನ್ನೊಂದು ಆಗೊದ್ರಾಗ ಅಲ್ಲಿಗೆ ಹೋಗಿಬಾ. ನಾನಂತು ಊದೋದನ ಊದೀನಿ. ಇದ್ರಮ್ಯಾಗ ಮುಂದಿನದು ನಿನ್ ವಿವೇಚನೆಗೆ ಬಿಟ್ಟದ್ದು''. ಹೀಗೆ ಹುಬ್ಬಳ್ಳಿ ಡಾಕ್ಟರ್‌ನನ್ನು ಹೊಗಳಿ ಅಟ್ಟಕ್ಕೇರಿಸಿ, ಅವ್ರ ಕಾರ್ಡ್ ನನ್ನ ಕೈಯಲ್ಲಿ ತುರುಕಿ, ಬಸ್ಸಿಗೆ ತಡ ಆಗುತ್ತ ಅಂತ ಹೇಳಿ, ಬಡಬಡ ಬಸ್‌ಸ್ಟ್ಯಾಂಡ್ ದಾರಿ ಹಿಡಿದ.

ಅಪರಿಚಿತ ಡಾಕ್ಟರ್ ಬಳಿ ಹೋಗುವ ಮೊದಲು, ಅವರ ಚರಿತ್ರೆ ತಿಳಿದುಕೊಳ್ಳೋದು ವಾಡಿಕೆ. ಹುಬ್ಬಳ್ಳಿಯಲ್ಲಿ ನೆಲೆಸಿರುವ ಸ್ನೇಹಿತ ರವಿಗೆ ಫೋನಾಯಿಸಿದೆ. ಡಾಕ್ಟರ್ ಬಗ್ಗೆ ಅವನ ನಿರ್ದಿಷ್ಟ ಅಭಿಪ್ರಾಯ ತಿಳಿಸೆಂದು ಯಾಚಿಸಿದೆ.

''ಇದೆಲ್ಲಾ ಏನ್ ಕತೆ ಮಾರಾಯ? ನಿನ್ ತಲೆ-ಗಿಲೆ ಕೆಟ್ಟದ್ಯಾ ಹೇಗೆ? ಆ ಡಾಕ್ಟರ್ ಹತ್ರ ಹೋಗೋದು ನನ್ಗೆ ತಟಗು ಸರಿ ಕಾಣ್ಸುದಿಲ್ಲ ಬಿಡು. ಅವ್ರ ಕಥೇನೆ ಒಂಥರಾ. ಅವ್ರುದು ಬರಿ ದುಡ್ಡಿನ ಮೊಕ ನೋಡೊ ಜಾಯಮಾನ. ದವಾಖಾನೆಗೆ ಕಾಲಿಟ್ಟ ಕೂಡ್ಲೆ, ಯಾವ್ದರ ರೋಗ ಇರಲಿ, ಎಲ್ಲಾ ಅನಗತ್ಯ ಕ್ಲಿನಿಕಲ್ ಪರೀಕ್ಷೆ ಮುಗ್ಸಿದ ಮ್ಯಾಲೇನ ಮುಂದಿನ ಕೆಲ್ಸ. ಬಳಿಕ ಔಷಧಿಗಳ ಸುದೀರ್ಘ ಯಾದಿ ನಿನ್ ಕೈ ಸೇರುತ್ತೆ. ಒಟ್ನಾಗ, ಎಗ್ಗಿಲ್ದ ಹಣ ಹಿರಿಯೋ ಸಂಚು. ನಿನ್ ತಲೀನ ನುಣ್ಗೆ ಬೋಳ್ಸಿಬಿಡ್ತಾರ. ಈಟಾದ್ರು ಸೈತ ನಿನ್ ಸಮಸ್ಯೆಗೆ ಪರಿಹಾರ ಸಿಗೋದು ಮರೀಚಿಕೆ! ನಾನಂತು ನಿನ್ನ ಸಮಸ್ಯೆಗೆ ಬೆಳಕು ಚೆಲ್ಲೀನಿ. ನೀ ಅಲ್ಗೆ ಹೋಗೋದು, ಬಿಡೋದು ನಿನ್ನಿಷ್ಟ.'' ನುಂಗಲಾರದ ಮಾಹಿತಿ ನೀಡಿ, ಅಡ್ಡಗೋಡೆ ಮೇಲೆ ದೀಪ ಇಟ್ಟು, ಫೋನು ಕುಕ್ಕಿಟ್ಟ.

ರಂಗ ಹುಬ್ಬಳ್ಳಿ ಡಾಕ್ಟರನ್ ಹೊಗಳಿ, ಅಟ್ಟಕ್ಕೇರಿಸಿ, ಸಿಂಗಾರ ಪಟ್ಟಿ ಕಟ್ಟಿದ್ದ. ರವಿ ಅದೇ ಡಾಕ್ಟರ್‌ಗೆ 'ಧನ ಪಿಸಾಚಿ' ಹಣೆಪಟ್ಟಿ ತಗಲಿಸಿ, ಹಿಗ್ಗಾಮುಗ್ಗಾ ಜಾಲಾಡಿದ್ದ. ಇವರೀರ್ವರಲ್ಲಿ ಯಾರ ಮಾತನ್ನು ನಂಬುವುದು? ಉತ್ತರ ಕಾಣದೆ ಧರ್ಮಸಂಕಟದಲ್ಲಿ ಸಿಕ್ಕೊಂಡೆ. ವಿಚಾರ ಮಾಡಿ, ಮಾಡಿ ತಲೆ ಕಾದ ಇಸ್ತ್ರಿಪೆಟ್ಟಿಗೆಯಾಯಿತು. ಒಂದು ಲೋಟಾ ತಂಪಾದ ನೀರು ಗಟಗಟನೆ ಕುಡಿದೆ. ಎಷ್ಟೇ ಹಣ ವೆಚ್ಚವಾದರೂ ಚಿಂತೆಯಿಲ್ಲ. ಆದರೆ ಊದೋದು ಕೊಟ್ಟು ಒದರೋದು ತಂದಂತಾಗಬಾರದು. ಸಾಧ್ಯತೆಗಳು ನನ್ನಲ್ಲಿ ಭಯ, ಆತಂಕ ಮೂಡಿಸಿದವು. ಹುಬ್ಬಳ್ಳಿಗೆ ಹೋಗುವತ್ತ ಮನ ಸರಿಯಲಿಲ್ಲ.

ಮುಗಿಯದ ಮೆಗಾ ಧಾರಾವಾಹಿನಿಯಂತೆ, ಗೋಣು ನೋವು ಠಿಕಾಣಿ ಹೂಡಿ ಆಗಲೇ ತಿಂಗಳ ಮೇಲಾಗಿತ್ತು. ನಾನು ಅದನ್ನು ನಿಗ್ರಹಿಸುವಲ್ಲಿ ಸಂಪೂರ್ಣ ಸೋತಿದ್ದೆ. ನನ್ನ ಮೊಗ ಹತ್ತು ವರ್ಷ ಹೆಚ್ಚಾದಂತೆ ಭಾಸವಾಯಿತು. ಅಜ್ಜಿ ಹಳ್ಳಿಯಿಂದ ದಿಢೀರನೆ ಬಂದಿಳಿದಳು. ಬಣ್ಣಗೆಟ್ಟ ನನ್ನ ಮುಸಡಿ ನೋಡಿ ಕಾರಣ ಕೇಳಿದಳು. ನಾನು ಸಾವಿರ ಸಲ ಹೇಳಿದ್ದನ್ನೆ ಅಜ್ಜಿಗೆ ಪಾಠ ಒಪ್ಪಿಸಿದೆ. ಅವಳು ನನ್ನ ಸಂತಾಪಕ್ಕೆ ಸಹಾನುಭೂತಿ ಹೇಳಿದಳು.

''ಅದಕ್ಯಾಕ ಈಟೊಂದು ಚಿಂತಿ ಮಾಡ್ತೀಯಾ ಮಗು? ಈಟ್ಸಣ್ಣ ಬ್ಯಾನಿಗೆ ಆಕಾಶ ಹರ್‍ಕೊಂಡು ತಲಿಮ್ಯಾಲೆ ಬಿದ್ದೋರ ತರ ಯಾಕ ಪರದಾಡ್ತೀಯಾ? ಇದ್ರ ಬಗ್ಗೆ ನೀ ಏನು ತಲಿಕೆಡಿಸ್ಕೊ ಬ್ಯಾಡ. ಕತ್ತಿನ ಬ್ಯಾನಿಗೆ ಸೇರು ಚಿಕಿತ್ಸೆ ರಾಮ ಬಾಣ! ಅದೊಂದು ನೈಸರ್ಗಿಕ ಚಿಕಿತ್ಸೆ. ನಾ ಹೇಳಿದಾಟು ಮಾಡು. ನಿನ್ ಕತ್ತಿಗೆ ಬಂದ ಕುತ್ತು ಹ್ಯಾಂಗ ಮಾಯವಾಗ್ತದ ನೋಡ್ತಿರು'' ಅಜ್ಜಿ ನಗೆ ಚೆಲ್ಲಿ, ನನ್ನಲ್ಲಿ ಭರವಸೆ ತುಂಬಿದಳು. ನಾನು ಬಿಗುಮಾನ ಬದಿಗಿಟ್ಟು ಅಜ್ಜಿಯ ಸೇರು ಚಿಕಿತ್ಸೆಗೆ ಧೈರ್ಯದಿಂದ ಮುಂದಾದೆ. ನೀರಿನಲ್ಲಿ ಮುಳುಗುತ್ತಿರುವವನಿಗೆ ಹುಲ್ಲು ಕಡ್ಡಿಯೇ ಆಸರೆ!

ಆದಿನ ರಾತ್ರಿ ಊಟದ ಬಳಿಕ, ಸೇರು ಚಿಕಿತ್ಸೆಯಲ್ಲಿ ಮುಳುಗಿದೆ. ಮನದನ್ನೆ ನನ್ನ ಕತ್ತಿನ ಸುತ್ತ ಹರಳೆಣ್ಣೆ ಸವರಿ, ಮಾಲಿಸ್ ಮಾಡಿದಳು. ನಾನು ಪಡಸಾಲೆಯಲ್ಲಿ, ಹುಲ್ಲಿನ ಚಾಪೆ ಹಾಸಿ, ದೊಡ್ಡ ಸೇರನ್ನು ದಿಂಬಾಗಿಸಿಟ್ಟು, ಅದರ ಮೇಲೆ ಗೋಣು ಚೆಲ್ಲಿ, ಉದ್ದಕ್ಕೆ ಕಾಲು ಚಾಚಿ, ಅಂಗಾತ ಅಡ್ಡಾದೆ. ಮೈಮೇಲೆ ಹಾವು ಹರಿದಾಡಿದರೂ ಅರಿವು ಆಗದಷ್ಟು ಗಾಢ ನಿದ್ದೆ.

ನಾನು ಕಣ್ಣುಬಿಟ್ಟದ್ದು ಗೋಡೆ ಗಡಿಯಾರ ೭ ಬಾರಿಸಿದಾಗ. ಪರಮಾಶ್ಚರ್ಯ! ನನ್ನಲ್ಲಿ ನಂಬಲಾಗದ ಬದಲಾವಣೆ. ಏನೋ ಹೊಸತನ. ಅದಮ್ಯ ಉತ್ಸಾಹ, ನೂರ್ಮಡಿಸಿದ ಚೈತನ್ಯ. ಸಂಭ್ರಮಕ್ಕೆ ಮುಸುಕಿದ್ದ ಮೋಡ ಚೆದರಿತ್ತು. ಕತ್ತಿನ ನೋವು ಸರಹೊತ್ತಿನಲ್ಲಿ ಪರಾರಿಯಾಗಿತ್ತು. ನಾನು ಸೆರೆಮನೆ ವಾಸದಿಂದ ಬಿಡುಗಡೆಯಾದ ಖುಷಿಯಲ್ಲಿ ಬೀಗಿದೆ. ಪ್ರಪಂಚವನ್ನೇ ಗೆದ್ದ ಆನಂದ!

'ಹಿತ್ತಲಗಿಡ ಮದ್ದಲ್ಲ' ಎಂಬ ಕನ್ನಡ ಗಾದೆ ಹುಟ್ಟಿಕೊಂಡಿದ್ದು ಬಹುಶಃ ಇದಕ್ಕೆ ಇರಬೇಕು. ಹಳೆ ತಲೆಗಳಲ್ಲಿ ಅಡಗಿದ್ದ ಪಾರಂಪರಿಕ ಜ್ಞಾನ ಹೊಸಪೀಳಿಗೆಗೆ ವರ್ಗಾವಣೆಯಾಗದಿರುವುದು ದುಃಖದ ಸಂಗತಿ!

ಡಾ|| ರುದ್ರಯ್ಯ ಎ. ಗದಗ
ನಂ. ೨೪೦/೪೨, 'ಪಂಚವಟಿ', ವಿವೇಕಾನಂದ ನಗರ
ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧



# ಸಾವಿನ ಕನಸು

ಅರ್ನೆಸ್ಟ್ ಹೆಮಿಂಗ್‌ವೇ

**ಅ**ವನು ನಮ್ಮ ಕೊಠಡಿಗೆ ಕಿಟಕಿ ಬಾಗಿಲುಗಳನ್ನು ಮುಚ್ಚಲು ಬಂದಾಗ ನಾವಿನ್ನೂ ಹಾಸಿಗೆಯ ಮೇಲೆ ಮಲಗಿದ್ದೆವು. ಅವನ ಮುಖದಲ್ಲಿ ಅನಾರೋಗ್ಯದ ಚಹರೆ ಕಾಣಿಸುತ್ತಿತ್ತು. ಮುಖವೆಲ್ಲಾ ಬಿಳಿಚಿಕೊಂಡಿತ್ತು. ನಡೆಯಲಾಗದೆ ಗಡಗಡ ನಡುಗುತ್ತಿದ್ದ.

''ಪುಟ್ಟು, ನಿನಗೆ ಏನಾಗಿದೆ ? ಯಾಕೆ ನಡಗುತ್ತಿದ್ದೀಯ ?''

''ನನಗೆ ತುಂಬಾ, ತುಂಬಾ ತಲೆ ನೋಯುತ್ತಿದೆ.''

''ಯಾಕೆ ಅಡ್ಡಾಡುತ್ತಿದ್ದೀಯ ? ಹೋಗಿ ಮಲಗಿಕೊಳ್ಳಬಾರದೆ ?''

''ನಾನು ಮಲಗುವುದಿಲ್ಲ. ನನಗೇನೂ ಆಗಿಲ್ಲ. ನಾನು ಡ್ರೆಸ್ ಮಾಡಿಕೊಂಡ ಮೇಲೆ ನಿಮ್ಮನ್ನು ಮಾತನಾಡಿಸುತ್ತೇನೆ'' ಎನ್ನುತ್ತಾ ಅವನು ತನ್ನ ಡ್ರೆಸಿಂಗ್ ಕೊಠಡಿಯತ್ತ ಚಲಿಸಿದ. ಸ್ವಲ್ಪ ಹೊತ್ತಿನ ನಂತರ ಅವನು ಡ್ರೆಸ್ ಮಾಡಿಕೊಂಡು ಕೆಳಕ್ಕೆ ಬಂದ. ಬಂದವನೇ ಚಳಿ ಕಾಯಿಸುತ್ತಾ ಬೆಂಕಿಯ ಮುಂದೆ ಕುಳಿತಿದ್ದ ನಾನು ಅವನ ಹಣೆಯ ಮೇಲೆ ಕೈಯಿಟ್ಟು ನೋಡಿದಾಗ ಹಣೆ ತುಂಬಾ ಬಿಸಿಯಾಗಿತ್ತು. ಅವನು ಜ್ವರದ ತಾಪದಿಂದ ನರಳುತ್ತಿದ್ದ.

''ನಿನಗೆ ಜ್ವರ ಬಂದಿದೆ, ಹೋಗಿ ಮಲಗು'' ನಾನು ಸ್ವಲ್ಪ ಒತ್ತಾಯಪೂರ್ವಕವಾಗಿ ಹೇಳಿದೆ.

''ನಾನು ಚೆನ್ನಾಗಿದ್ದೇನೆ, ನನಗೇನೂ ಆಗಿಲ್ಲ'', ಅವನಿಂದಲೂ ಖಡಾಖಂಡಿತವಾದ ಉತ್ತರ. ಅವನ ಮಾತಿಗೆ ಬೆಲೆ ಕೊಡದೆ ತಕ್ಷಣವೇ ನಾನು ಕುಟುಂಬದ ವೈದ್ಯರಿಗೆ ತಿಳಿಸಿದೆ.

ಸ್ವಲ್ಪಹೊತ್ತಿನ ನಂತರ ಕುಟುಂಬದ ವೈದ್ಯರು ಬಂದರು. ಅವರು ಮಗುವಿನ ಜ್ವರವನ್ನು ಥರ್ಮಾಮೀಟರನಿಂದ ಪರೀಕ್ಷಿಸತೊಡಗಿದರು. ಆಗ ನಾನು ಸ್ವಲ್ಪ ಉದ್ವೇಗದಿಂದಲೇ ಕೇಳಿದೆ, ''ಎಷ್ಟು ಜ್ವರ ಇದೆ ?''

''ಒಂದು ನೂರಾಎರಡು.''

ವೈದ್ಯರು ಸಮಾಧಾನದಿಂದಲೇ ಉತ್ತರಿಸಿದರು. ನಂತರ ಕೆಳಗೆ ಬಂದ ವೈದ್ಯರು ಮೂರು ವಿಧದ ಔಷಧಿಗಳನ್ನು ಕೊಟ್ಟರು. ಮೂರೂ ಔಷಧಿಗಳನ್ನು, ಅವುಗಳನ್ನು ಹೇಗೆ ಕೊಡಬೇಕೆಂಬುದರ ಬಗ್ಗೆ ತಿಳಿವಳಿಕೆಯನ್ನು ಕೊಟ್ಟರು. ಅದರಲ್ಲಿ ಒಂದು ಔಷಧಿ ಜ್ವರದ ತಾಪವನ್ನು ಕಡಿಮೆ ಮಾಡುತ್ತದೆ; ಮತ್ತೊಂದು ನೋವಿನ ಶಮನಕ್ಕಾದರೆ, ಮಗದೊಂದು ಅತಿಯಾದ ಆಮ್ಲೀಯ ರೋಗದ ಮದ್ದು.

ಇನ್‌ಫ್ಲೂಯೆಂಜಾ ಕ್ರಿಮಿಗಳು ಕೇವಲ ಆಮ್ಲೀಯ ಸ್ಥಿತಿಯಲ್ಲಿ ಮಾತ್ರಾ ವೃದ್ಧಿಯಾಗಲು ಸಾಧ್ಯ ಎಂದು ವಿವರಿಸಿದರು. ಈ ಜ್ವರದ ಬಗ್ಗೆ ಬಹಳ ಆತಂಕಪಡಲು ಕಾರಣವಿಲ್ಲ, ಜ್ವರ ನೂರಾನಾಲ್ಕಕ್ಕಿಂತ ಹೆಚ್ಚಿಗೆ ಹೋಗದೆ. ಆದರೆ ಭಯಪಡುವುದು ಬೇಡ, ಇದು ಕೇವಲ ಅಂಟುಜಾಡ್ಯ. ಇದು ನಿಮೋನಿಯದತ್ತ ವಾಲದಿದ್ದರೆ ಏನೂ ಅಪಾಯವಿಲ್ಲ ಎಂದು ತಿಳಿಸಿದರು.

ನಾನು ಹೊತ್ತಿಂದ ಹೊತ್ತಿಗೆ ಸರಿಯಾಗಿ ಮಗುವಿಗೆ ಮಾತ್ರೆಗಳನ್ನು ಕೊಡುತ್ತಾ ಅವನ ಶರೀರದ ಉಷ್ಣತೆಯನ್ನು ಒಂದು ಪುಸ್ತಕದಲ್ಲಿ ಬರೆದುಕೊಳ್ಳುತ್ತಿದ್ದೆ. ಆಗಾಗ್ಗೆ ಅವನಿಗೆ ಕತೆ ಕೇಳುವ ಅಭ್ಯಾಸವಿದ್ದುದರಿಂದ ''ನಿನಗೊಂದು ಕತೆ ಓದಿ ಹೇಳಲೇ ?'' ಎಂದು ಕೇಳಿದೆ.

''ನಿಮಗಿಷ್ಟವಿದ್ದರೆ ಓದಿ'' ಎಂದು ನಿರ್ಲಿಪ್ತನಾಗಿ ನುಡಿದ. ಅವನ ಮುಖ ಪೂರ್ತಿಯಾಗಿ ಬಿಳಿಚಿಕೊಂಡು ಕಣ್ಣಾಲಿಗಳ ಕೆಳಭಾಗವೆಲ್ಲಾ ಕಪ್ಪಾಗಿ ಕಾಣಿಸುತ್ತಿತ್ತು. ಅವನು ಹಾಸಿಗೆಯ ಮೇಲೆ ತಣ್ಣಗೆ ಮಲಗಿದವನು ಈ ಪ್ರಪಂಚದಲ್ಲಿ ಏನಾಗುತ್ತಿದೆ ಎಂಬುದರ ಬಗ್ಗೆ ಗಮನವೇ ಇಲ್ಲದವನಂತಿದ್ದ.

ನಾನು ಈಸೋಪನ ಕತೆಗಳನ್ನು ಜೋರಾಗಿ ಓದುತ್ತಿದ್ದರೂ ಅವನು ಅದನ್ನು ಗಮನಿಸುವಂತೆ ಕಾಣಿಸುತ್ತಿರಲಿಲ್ಲ. ಹಾಗಾಗಿ ಕತೆ ಓದುವುದನ್ನು ಅಲ್ಲಿಗೇ ನಿಲ್ಲಿಸಿ, ''ಪುಟ್ಟು, ಹೇಗಿದ್ದೀಯ ?'' ಎಂದು ಕೇಳಿದೆ.

''ಹಾಗೇ ಇದೆ ಅಪ್ಪ'' ಎಂದು ಸಣ್ಣದಾಗಿ ಉತ್ತರಿಸಿದ.

ನಾನು ಅವನ ಹಾಸಿಗೆ ಬಳಿಯಲ್ಲಿಯೇ ಕುಳಿತುಕೊಂಡು ಕತೆಯನ್ನು ನನ್ನಷ್ಟಕ್ಕೆ ನಾನೇ ಓದಿಕೊಳ್ಳತೊಡಗಿದೆ. ಅವನಿಗೆ ಇನ್ನೊಂದು ಮಾತ್ರೆಯನ್ನು ಕೊಡುವ ಸಮಯಕ್ಕಾಗಿ ಕಾಯತೊಡಗಿದ್ದೆ. ಸಹಜವಾಗಿ ಅವನು ಈ ಹೊತ್ತಿಗೆ ನಿದ್ರೆಹೋಗಬೇಕಾಗಿತ್ತು. ಆದರೆ ಅವನು ಕಾಲ ಬಳಿ ಕುಳಿತಿದ್ದ ನನ್ನ ಕಡೆ ವಿಚಿತ್ರವಾಗಿ ನೋಡತೊಡಗಿದ್ದ. ಹಾಗೂ ಅವನ ವರ್ತನೆ ವಿಚಿತ್ರವಾಗಿ ಕಾಣಿಸುತ್ತಿತ್ತು. ನನ್ನಲ್ಲುಂಟಾದ ಆತಂಕವನ್ನ ತಡೆಯಲಾರದೆ ''ಯಾಕೆ ಪುಟ್ಟು, ನಿದ್ದೆ ಮಾಡಬಾರದೆ ?, ನೀನು ಔಷಧಿಯನ್ನು ತೆಗೆದುಕೊಳ್ಳುವ ಸಮಯಕ್ಕೆ ಸರಿಯಾಗಿ ನಿನ್ನನ್ನು ಎಬ್ಬಿಸುವೆ'' ಎಂದೆ.

''ಇಲ್ಲ ಅಪ್ಪ, ನಾನು ಎಚ್ಚರವಾಗಿಯೇ ಇರುತ್ತೇನೆ.''

ಸ್ವಲ್ಪ ಹೊತ್ತಿನ ನಂತರ ಅವನು ನನ್ನ ಕಡೆ ತಿರುಗಿ, ''ಅಪ್ಪ, ನಿಮಗೆ ಬೇರೆ ಕೆಲಸವಿದ್ದರೆ ಹೋಗಿ, ತೊಂದರೆಯಿಲ್ಲ ನಾನು ಮಲಗಿಕೊಂಡಿರುತ್ತೇನೆ'' ಎಂದ.

''ನನಗೇನೂ ತೊಂದರೆಯಿಲ್ಲ ನಾನಿಲ್ಲೇ ಇರುತ್ತೇನೆ.''

''ಇಲ್ಲ ಅಪ್ಪ, ನಿಮಗೆ ತೊಂದರೆ ಇದ್ದರೆ ಹೋಗಿ. ನನಗೇನೂ ಸಮಸ್ಯೆಯಾಗುವುದಿಲ್ಲ. ನೀವು ಹೋಗಿ'' ಎಂದು ಮತ್ತೆ ಮತ್ತೆ ಹೇಳಿದ.

ನಾನು ಅಲ್ಲಿದ್ದರೆ ಅವನಿಗೆ ಸ್ವಲ್ಪ ಕಿರಿಕಿರಿಯಾಗಬಹುದೆಂದೆಣಿಸಿ ಹನ್ನೊಂದು ಗಂಟೆಗೆ ಕೊಡಬೇಕಾದ ಮಾತ್ರೆಗಳನ್ನು ಕೊಟ್ಟು ಸ್ವಲ್ಪ ಹೊರಕ್ಕೆ ಹೋಗಿಬರೋಣವೆಂದೆಣಿಸಿ ಅಲ್ಲಿಂದ ಹೊರಟೆ.

ಅದೊಂದು ಪ್ರಶಾಂತವಾದ ತಣ್ಣಗಿನ ರಾತ್ರಿ. ಊರಾಚೆ ಹೊರಟಂತೆಲ್ಲ ಹೊರವಲಯದ ಮೈದಾನವೆಲ್ಲ ಮಂಜಿನಿಂದ ಆವೃತವಾಗಿ ಸುತ್ತಮುತ್ತಲಿರುವ ಮರಗಿಡ, ಬಳ್ಳಿಗಳು ದಟ್ಟವಾಗಿ ಬೆಳೆದಿದ್ದವು. ಪೊದೆಗಳು ಹಸಿರಾಗಿ ಬೆಳೆದುನಿಂತಿದ್ದ ಹಾಗೂ ಕತ್ತರಿಸಲ್ಪಟ್ಟಿದ್ದ ಹುಲ್ಲಿನ ಹಾಸುಗಳೆಲ್ಲವೂ ದಟ್ಟವಾದ ಮಂಜಿನಿಂದ ಬಳಿಯಲ್ಪಟ್ಟಂತೆ ಕಾಣಿಸುತ್ತಿದ್ದವು. ನಾನೊಬ್ಬ ಸಹಪಾಠಿಯ ಜೊತೆಯಲ್ಲಿ ಊರುಗೋಲಿನ ಸಹಾಯದಿಂದ ಆ ಮಂಜುಮಂಜಾದ ಜಾರುಹಾದಿಯ ಮೇಲೆ ನಿಧಾನವಾಗಿ ನಡೆಯತೊಡಗಿದೆ. ಹೀಗೆ ಕಷ್ಟಪಟ್ಟು ನಡೆಯುತ್ತಿರುವಾಗ ಒಂದೆರಡು ಬಾರಿ ಜಾರಿಬಿದ್ದು ನನ್ನ ಕೈಯಲ್ಲಿದ್ದ

ಬಂದೂಕು ಕೂಡ ಆಯತಪ್ಪಿ ಕೆಳಕ್ಕೆ ಬಿದ್ದುಹೋಯಿತು.

ಹೀಗೆ ನಾವು ಆ ಮಂಜಿನ ದಟ್ಟಡವಿಯಲ್ಲಿ ಮುಂದುವರಿಯುತ್ತಿದ್ದಾಗ ಒಂದು ಮರದ ಮೇಲೆ ಒಂದು ಹಿಂಡು ಪಕ್ಷಿಗಳು ಚಳಿಯಲ್ಲಿ ನಡುಗುತ್ತಾ ಕುಳಿತಿರುವುದು ಕಾಣಿಸಿತು. ನಾನು ನನ್ನ ಬಂದೂಕಿನ ಸಹಾಯದಿಂದ ಅವುಗಳಲ್ಲಿ ಒಂದು ಪಕ್ಷಿಯನ್ನು ಗುರಿಯಿಟ್ಟು ಹೊಡೆದೆ. ಆ ಪಕ್ಷಿ ಕೆಳಗೆ ಬಿದ್ದು ಸಾಯುತ್ತಲೇ ಉಳಿದೆಲ್ಲಾ ಪಕ್ಷಿಗಳು ಕಣ್ಣಿಗೆ ಕಾಣದಂತೆ ಹಾರಿಹೋದವು. ಹೀಗೆ ಚದುರಿದ ಪಕ್ಷಿಗಳು ದೂರದಲ್ಲಿ ಎಲ್ಲೋ ಮರಗಳ ಮೇಲೆ, ಪೊದೆಯ ಒಳಗಡೆ, ಹುಲ್ಲಿನ ಮಧ್ಯೆ ಜೀವಭಯದಿಂದ ಅಡಗಿಕೊಂಡವು. ನಾನು ಅಲ್ಲಿ ಜಾರುತ್ತ ಇಲ್ಲಿ ಜಾರುತ್ತ ನಾಲ್ಕಾರು ಕಡೆಗಳಲ್ಲಿ ಎದ್ದುಬಿದ್ದು ಕೊನೆಯಲ್ಲಿ ಎರಡು ಪಕ್ಷಿಗಳನ್ನು ಕೊಲ್ಲುವುದರಲ್ಲಿ ಮಾತ್ರ ಯಶಸ್ವಿಯಾದೆ. ನನ್ನಿಂದ ತಪ್ಪಿಸಿಕೊಂಡು ಹೋದ ಅನೇಕ ಪಕ್ಷಿಗಳು ಅಲ್ಲಲ್ಲಿ ಅಡಗಿಕೊಂಡಿರುವುದು ಕಾಣುತ್ತಿದ್ದರೂ ಮುಂದಿನ ದಿನಗಳಿಗಾಯಿತೆಂದುಕೊಂಡು ಹಾಗೇ ಬಿಟ್ಟುಬಂದೆ.

ಮನೆಗೆ ವಾಪಾಸು ಬಂದಾಗ ಮಗ ಯಾರನ್ನೂ ತನ್ನ ಕೊಠಡಿಯೊಳಗೆ ಪ್ರವೇಶಿಸಲು ಅವಕಾಶ ಕೊಟ್ಟಿರಲಿಲ್ಲ ಎಂಬ ವಿಷಯ ನನ್ನ ಗಮನಕ್ಕೆ ಬಂದಿತು. ನಾನು ಕೊಠಡಿಯೊಳಗೆ ಕಾಲಿಟ್ಟಾಗ, ''ನೀವು ಒಳಕ್ಕೆ ಬರಬೇಡಿ, ನಿಮಗೆ ನನ್ನ ಕಾಹಿಲೆ ಬರಬಾರದು'' ಎಂದು ಚೀರಿ ಹೇಳಿದ ಅವನ ಮಾತನ್ನು ಕೇಳಿ ನನಗೆ ಆಶ್ಚರ್ಯವಾಯಿತು.

ನಾನು ಒಳಕ್ಕೆ ಹೋಗಿ ಅವನನ್ನು ಪರೀಕ್ಷಿಸಿದಾಗ ಅವನು ಮೊದಲಿನ ಸ್ಥಿತಿಯಲ್ಲಿಯೇ ಪವಡಿಸಿದ್ದ. ಜ್ವರದ ತಾಪಕ್ಕೆ ಕೆನ್ನೆಗಳೆಲ್ಲಾ ಬಾಡಿ ತುಂಬಾ ಬಿಳುಚಿಕೊಂಡಿದ್ದ. ತನ್ನ ಕಾಲಿನ ಕಡೆಗೇ ನೇರವಾದ ನೋಟ ಬೀರುತ್ತಿದ್ದ. ನಾನು ಅವನ ಜ್ವರದ ಪರಿಮಾಣವನ್ನು ಪರೀಕ್ಷಿಸಿದೆ.

''ಈಗ ಎಷ್ಟು ಜ್ವರವಿದೆ ?'' ಅವನ ಮಾಮೂಲು ಪ್ರಶ್ನೆ.

''ಸುಮಾರು ನೂರರವರೆಗೆ ಇದೆ'' ಎಂದು ನಾನು ಉತ್ತರಿಸಿದರೂ ಅವನಿಗೆ ನೂರಾ ಎರಡು ಇತ್ತು.

''ಇಲ್ಲ, ನನಗೆ ನೂರಾ ಎರಡು ಇದೆ'' ಅವನು ಪ್ರತಿಕ್ರಿಯಿಸಿದ.

''ನಿನಗೆ ಯಾರು ಹೇಳಿದರು ?''

''ನನ್ನನ್ನು ಪರೀಕ್ಷಿಸಲು ಬಂದ ವೈದ್ಯರು ಹೇಳಿದರು.''

''ನಿನ್ನ ಜ್ವರ ನಾರ್ಮಲ್ ಆಗೇ ಇದೆ. ಅದರ ಬಗ್ಗೆ ಏನೂ ಯೋಚಿಸುವುದು ಬೇಡ'', ನಾನು ಅವನನ್ನು ಸಮಾಧಾನಪಡಿಸುತ್ತ ಹೇಳಿದೆ.

''ನಾನೇನೂ ಆ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಆದರೆ ಅದರ ಬಗ್ಗೆ ಯೋಚಿಸದೇ ಇರಲು ಸಾಧ್ಯವಿಲ್ಲ''

ಅವನ ಉತ್ತರವನ್ನು ಕೇಳಿ ನಾನು ದಂಗಾಗಿಹೋದೆ.

''ಖಂಡಿತಾ ಯೋಚಿಸಬೇಡ, ನಿನಗೇನೂ ಆಗುವುದಿಲ್ಲ''.

''ಹೌದು, ನಾನೇಕೆ ಯೋಚಿಸಲಿ ? ಯೋಚಿಸುವುದರಿಂದ ಯಾವ ಪ್ರಯೋಜನವೂ ಇಲ್ಲ'' ಎಂದು ದೃಷ್ಟಿಯನ್ನು ಎತ್ತಲೋ ತಿರುಗಿಸುತ್ತಾ ಹೇಳಿದ.

ನಾನು ಅವನಿಗೆ ಮಾತ್ರೆ ಮತ್ತು ಔಷಧಿಗಳನ್ನು ಕೊಡುತ್ತ, ''ಇವುಗಳನ್ನು ನೀರಿನ ಜೊತೆಯಲ್ಲಿ ತೆಗೆದುಕೋ'' ಎಂದೆ.

''ಅಪ್ಪ ಇವುಗಳಿಂದ ಏನಾದರೂ ಉಪಯೋಗವಾಗುತ್ತದೆಯಾ ?''

''ಅನುಮಾನವೇ ಇಲ್ಲ, ಖಂಡಿತವಾಗಿಯೂ ಉಪಯೋಗವಾಗುತ್ತದೆ.''

ನಾನು ಪಕ್ಕದಲ್ಲಿರುವ ಕುರ್ಚಿಯಲ್ಲಿ ಕುಳಿತುಕೊಂಡು ಅವನಿಗಾಗಿ ಈಸೋಪನ ಕಥೆಗಳನ್ನು ಓದತೊಡಗಿದೆ. ಆದರೆ ಅವನಿಗೆ ಅವುಗಳ ಮೇಲೆ ಆಸಕ್ತಿಯೇ ಇದ್ದಂತೆ ತೋರಲಿಲ್ಲ.

''ಅಪ್ಪ, ನಾನು ಎಷ್ಟು ಹೊತ್ತಿಗೆ ಸಾಯಬಹುದು ?''

ಅವನ ಪ್ರಶ್ನೆಯನ್ನು ಕೇಳಿ ನಾನು ಹೌಹಾರಿದೆ.

''ಏನಂದೆ ?''

''ನಾನು ಎಷ್ಟು ಹೊತ್ತಿಗೆ ಸಾಯಬಹುದು ?'' ಅವನು ತನ್ನ ಪ್ರಶ್ನೆಯನ್ನು ಪುನರುಚ್ಚರಿಸಿದ.

''ನಿನಗೇನಾಗಿದೆ ? ನೀನು ಸಾಯುತ್ತೀಯ ಎಂದು ಯಾರು ಹೇಳಿದರು ? ಇಲ್ಲ, ನೀನು ಖಂಡಿತ ಸಾಯುವುದಿಲ್ಲ''.

''ನನಗೆಲ್ಲಾ ಗೊತ್ತಿದೆ ಬಿಡಿ, ವೈದ್ಯರು ನನಗೆ ನೂರಾ ಎರಡು ಜ್ವರ ಇದೆ ಎಂದಿದ್ದನ್ನು ಕೇಳಿದ್ದೇನೆ.''

''ನೂರಾ ಎರಡಕ್ಕೆ ಯಾರೂ ಸಾಯುವುದಿಲ್ಲ, ಸುಮ್ಮನೇ ಪೆದ್ದನ ಹಾಗೆ ಮಾತನಾಡಬೇಡ.''

''ಇಲ್ಲ ನೀವು ಹೇಳುತ್ತಿರುವುದು ಸುಳ್ಳು, ನಾನು ಸಾಯುವುದು ನಿಜ. ಏಕೆಂದರೆ ಶಾಲೆಯಲ್ಲಿ ನನ್ನ ಸಹಪಾಠಿಗಳು ಹೇಳಿದ್ದಾರೆ ಜ್ವರದ ತಾಪ ನಲವತ್ನಾಲ್ಕು ಡಿಗ್ರಿಯ ಮೇಲೆ ಹೋದರೆ ಯಾರೂ ಬದುಕುವುದಿಲ್ಲವಂತೆ. ನನಗೆ ಜ್ವರ ನೂರಾ ಎರಡು ಡಿಗ್ರಿಗೆ ಹೋಗಿರುವುದರಿಂದ ನಾನು ಬದುಕಲು ಸಾಧ್ಯವೇ ಇಲ್ಲ''

ಬೆಳಗ್ಗೆ ಒಂಬತ್ತು ಗಂಟೆಯಿಂದ ಅವನು ಸಾಯುವುದಕ್ಕೆ ತಯಾರಾಗಿ ಕುಳಿತಿದ್ದಾನೆ. ಹಾಗಾಗಿ ಹೇಗೆ ಹೇಗೋ ಆಡುತ್ತಿದ್ದಾನೆ ಎಂಬುದನ್ನರಿತ ನಾನು ''ಪುಟ್ಟು, ನೀನು ತಪ್ಪಾಗಿ ತಿಳಿದುಕೊಂಡಿದ್ದೀಯ. ನಿನಗೆ ಮೈಲಿ ಮತ್ತು ಕಿಲೋಮೀಟರ್ ಬಗ್ಗೆ ಇರುವ ವ್ಯತ್ಯಾಸ ಗೊತ್ತಿಲ್ಲವೇ ? ಅಂತೆಯೇ ಜ್ವರದ ತಾಪಮಾನವನ್ನು ಅಳೆಯಲು ಬೇರೆಬೇರೆ ಅಳತೆಯ ಸಾಧನಗಳಿವೆ. ನೀನು ಹೇಳಿದ ಥರ್ಮಾಮೀಟರ್‌ನಲ್ಲಿ ಮೂವತ್ತೇಳು ಡಿಗ್ರಿ ಅಂದರೆ ನಾರ್ಮಲ್. ಆದರೆ ನಾವು ಅಳೆಯುತ್ತಿರುವ ಥರ್ಮಾಮೀಟರ್‌ನಲ್ಲಿ ತೊಂಬತ್ತೆಂಟು ಡಿಗ್ರಿ ನಾರ್ಮಲ್ ಅಳತೆಯಾಗಿರುತ್ತದೆ.''

''ಅಪ್ಪ, ನೀವು ಹೇಳುತ್ತಿರುವುದು ನಿಜವೇ ?''

''ನಾನು ಹೇಳುತ್ತಿರುವುದು ನೂರಕ್ಕೆ ನೂರು ಸತ್ಯ. ನೀನು ಅದರಲ್ಲಿ ಯಾವ ಅನುಮಾನವನ್ನೂ ಇಟ್ಟುಕೊಳ್ಳುವುದು ಬೇಡ. ಇದು ಒಂದು ತರಹ ಮೈಲಿಗಳು ಮತ್ತು ಕಿಲೋಮೀಟರ್‌ಗಳು ಇದ್ದ ಹಾಗೆ. ಎಪ್ಪತ್ತು ಮೈಲಿ ಪ್ರಯಾಣ ಮಾಡಿದರೆ ಎಷ್ಟು ಕಿಲೋಮೀಟರ್‌ಗಳನ್ನು ಪ್ರಯಾಣ ಮಾಡಿದಂತಾಗುತ್ತದೆ ? ನೀನೇ ಯೋಚಿಸಿ ನೋಡು.''

''ಅಯ್ಯೋ ! ಇಷ್ಟೇನಾ ? ನನಗೆ ಗೊತ್ತೇ ಇರಲಿಲ್ಲ''

ಎನ್ನುವಾಗ ಅವನ ಮುಖ ಮಂದಹಾಸದಿಂದ ಬೀಗುತ್ತಿತ್ತು. ಸಪ್ಪೆ ಮುಖ ಮಾಡಿಕೊಂಡು ಎತ್ತಲೋ ನೋಡುತ್ತಿದ್ದ ಅವನ ದೃಷ್ಟಿ ಆಗಲೇ ಬದಲಾಗಿಬಿಟ್ಟಿತ್ತು. ಮಾರನೆಯ ದಿನ ಹಾಸಿಗೆಯಿಂದೆದ್ದಾಗ ಎಲ್ಲ ಮಕ್ಕಳಂತೆ ಕುಣಿದು ಕುಪ್ಪಳಿಸುತ್ತಾ ಹಾರಾಡತೊಡಗಿದ್ದ.


ಇಂಗ್ಲಿಷ್ ಮೂಲ : **ಅರ್ನೆಸ್ಟ್ ಹೆಮಿಂಗ್‌ವೇ**

ಕನ್ನಡಕ್ಕೆ : **ವಿ. ಗಣೇಶ**

ವಿಶ್ರಾಂತ ಪ್ರಾಂಶುಪಾಲರು, ನಂ. ೫೬, ಚಾಮರಾಜಪೇಟೆ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ




ನವಕರ್ನಾಟಕ ಪ್ರಕಟಿಸಿರುವ ಶ್ರೀ ಸಂಜಯ್ ಗುಬ್ಬಿ ಅವರ 'ವನ್ಯಜೀವಿಗಳ ಜಾಡು ಹಿಡಿದು' – ಕೃತಿಯ ಲೋಕಾರ್ಪಣೆ ಜುಲೈ 3ರಂದು ಬೆಂಗಳೂರಿನ ಸುರಾನಾ ಕಾಲೇಜು ಸಭಾಂಗಣದಲ್ಲಿ ನಡೆಯಿತು. ಕ್ರಿಕೆಟ್‌ಪಟು ಶ್ರೀ ಅನಿಲ್ ಕುಂಬ್ಳೆ ಸಮಾರಂಭದ ಅಧ್ಯಕ್ಷತೆ ವಹಿಸಿ ಕೃತಿಯನ್ನು ಅನಾವರಣ ಮಾಡಿದರು. ಕರ್ನಾಟಕ ಸರ್ಕಾರದ ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆಯ ಕಾರ್ಯದರ್ಶಿ ಶ್ರೀಮತಿ ಮೀರಾ ಸೆಕ್ಸೇನಾ ಮುಖ್ಯ ಅತಿಥಿಗಳಾಗಿದ್ದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಪಿ. ಬಿ. ಶ್ರೀವಾಸ್ತವ್, ಶ್ರೀ ಸಂಜಯ್ ಗುಬ್ಬಿ, ಶ್ರೀಮತಿ ಮೀರಾ ಸೆಕ್ಸೇನಾ, ಶ್ರೀ ಅನಿಲ್ ಕುಂಬ್ಳೆ ಮತ್ತು ಡಾ|| ರವಿ ಚೆಲ್ಲಂ

# ಸರ್ಜರಿ ಸುಖಿ

**ಗುಂಡುರಾವ್ ದೇಸಾಯಿ**

**ಹೆ**ಣ್ಮಕ್ಕಳಿಗೆ ಕೆಲವು ದಿನ ನಿರಾಳತೆಯಿಂದ ರೆಸ್ಟು ತೊಗೋಳೊಕೆ, ಹಲವರ ಅನುಕಂಪ ಪಡಕೊಳ್ಳೋಕೆ ಪ್ರಕೃತೀನೆ ಬಾಣಂತನದ ಭಾಗ್ಯನ ಕರುಣಿಸಿದೆ. ಅದೇ ಅಂತಹ ವಿಶ್ರಾಂತಿ, ಅನುಕಂಪ ಪಡಿಯೋ ಭಾಗ್ಯ ಪಾಪಿ ಈ ಗಂಡು ಜನ್ಮಕ್ಕ ಇಲ್ವೇ! ಆದರೆ ಅಂತಹ ಸ್ವಲ್ಪ ಭಾಗ್ಯ ಸಿಗೋದು ಕಾಯಿಲೆ ಕಸಾಲೆ ಬಂದಾಗ, ಯಾವುದೊ ಸರ್ಜರಿಗೆ ಒಳಗಾದಾಗ ಅನ್ನೋದು ನನ್ನ ಅಂದಾಜು.ಆದರ ಸುಡುಗಾಡು ಜಡ್ಡು, ಸರ್ಜರಿಯಿಂದ ಯಾವಾಗ ಗುಣವಾಗುವುದೋ, ಏನಾಗುವುದೋ ಎನ್ನುವ ಆತಂಕದಲ್ಲಿ ಬಾಣಂತಿಯಲ್ಲಿ ಇರುವಂತಹ ನಿರುಮ್ಮಳತೆ ಇರುತ್ತೆ ಅಂತೀರಾ ? ಆದ್ರೂ ಬಹಳಷ್ಟು ಜನ ಇಂತಹ ಕಾಯಿಲೆ ಬಂದಾಗ, ಸರ್ಜರಿಗೆ ಒಳಗಾದಾಗ ನೋವಿನಲ್ಲೂ ಸಿಗುವ ಸಾಂತ್ವನ, ಅನುಕಂಪದಿಂದ ಎಂಜಾಯ್ ಮಾಡ್ತಾರೆ. ನಾನು ಇತ್ತೀಚಿಗೆ ಸಣ್ಣ ಹರ್ನಿಯಾ ಸರ್ಜರಿಗೆ ಒಳಗಾದಾಗ ಅಂತಹುದನ್ನು ಅನುಭವಿಸಬೇಕೆಂದರೂ ಇರಸುಮುರಸು ಹಿಡಿಸಿದ್ದೆ ಹೆಚ್ಚು.

ಕೆಲತಿಂಗಳ ಹಿಂದೆ ನನ್ನ ಗುರುಗಳೊಬ್ಬರಿಗೆ ಅಪಘಾತವಾದಾಗ ಅವರನ್ನು ಮಾತನಾಡಿಸಲು ಬರುವವರ ಕ್ಯೂ ಹತ್ತಿತ್ತು. ಎಲ್ಲರ ಅಚ್ಚುಮೆಚ್ಚಿನ ಗುರುಗಳಾಗಿದ್ದ ಅವರನ್ನು ಮಾತಾಡಿಸಲು ಬರುವ ಶಿಷ್ಯವರ್ಗ, ಸ್ನೇಹಿತರು, ಆತ್ಮೀಯರು, ಅಭಿಮಾನದ ಬಳಗ, ತಂಡೋಪತಂಡವಾಗಿ ಬರುವುದನ್ನು ನೋಡಿ ಆಸ್ಪತ್ರೆಯ ವೈದ್ಯರು ನನ್ನ ಮೂವತ್ತು ವರ್ಷದ



ಅನುಭವದಲ್ಲಿ ನಿಮ್ಮಂತಹ ಪೇಷಂಟ್‌ಗಳನ್ನ ನೋಡೆ ಇಲ್ಲ ಅಂತ ಉದ್ಗಾರ ತೆಗೆದಿದ್ದರು. ಗುರುಗಳಷ್ಟು ಸಾಧ್ಯವಾಗದಿದ್ದರೂ ತಕ್ಕಮಟ್ಟಿಗೆ ಅಂತಹ ಅನುಭವ ಪಡೆದರಾಯಿತು ಅಂತ ಬಯಸಿದ್ದೆ. ಸರ್ಜರಿಗಾಗಿ ಅಂತ ಆಸ್ಪತ್ರೆಗೆ ಅಡ್ಮಿಟ್ ಆಗಿ ಖಾಲಿ ಮಲಗಿದಾಗ ಬಂದ ಆಲೋಚನೆಯಂತೆ 'ಆಕ್ಸಿಡೆಂಟಾಗಿದ್ದರೆ ಹಿಂಗಿಂಗ ಆಯ್ತು ಅಂತ, ಹಾರ್ಟ್ ಅಥವಾ ಅಪೆಂಡಿಕ್ಸೋ, ಇನ್ನಾವುದೋ ಆಪರೇಷನ್ನೋ ಆಗಿದ್ದರೆ ಹಿಂಗ ಆಗಿತ್ತು ಅಂತ ಹೇಳಬಹುದು. ಆದರೆ ಈ ಹರ್ನಿಯಾ, ಪೈಲ್ಸ್, ಪಿಸ್ತುಲಾ ಹಾಂಗ ಹೇಳುವಂತಹುವೇ ? ಮುಂದಿನ ಘಟನೆಗಳನ್ನು ಆಲೋಚಿಸಿ ನಾಚಿಕೆ ಎನಿಸಿ, ಯಾರಿಗೂ ಹೇಳದೆ ಇರುವುದೇ ಲೇಸೆನಿಸಿ ಆ ಬಗ್ಗೆ ಜೊತೆಗೆ ಇದ್ದ ಅಕ್ಕನಿಗೂ ''ದಯವಿಟ್ಟು ಯಾರಿಗೂ ತಿಳಿಸಬೇಡ ತಾಯಿ'' ಎಂದು ಸರ್ಜರಿಗೆ ಒಳಗಾದೆ.

ಒಂದು ಸೂಜಿ ಮಾಡಿಸಿಕೊಳ್ಳದೆ ಹತ್ತು ವರ್ಷವಾಗಿತ್ತು, ಬಾಟಲಿಗಳನ್ನಂತೂ ಜೀವಮಾನದಲ್ಲೇ ಕಂಡಿರಲಿಲ್ಲ. ಸುಮಾರು ಎರಡು ಸಾವಿರ ರೂಪಾಯಿಗಳಷ್ಟು ಬಾಟಲ್, ಸರ್ಜರಿಗೆ ಬೇಕಾದ ಸಾಮಾನು, ಚಾಕಲೇಟುಗಳಂತೆ ಕೊಟ್ಟ ಇಪ್ಪತ್ತು ಮೂವತ್ತು ಸಿರಂಜುಗಳನ್ನು ನೋಡಿ ನನ್ನ ಜಂಘಾಬಲವೇ ಉಡುಗಿಹೋಯಿತು. ಆದರೆ ಆತ್ಮೀಯರಾಗಿದ್ದ ಅರಿವಳಿಕೆ ತಜ್ಞರಾದ ಡಾ|| ಸಿದ್ದಣ್ಣನವರು ''ಮೇಷ್ಟ್ರೆ , ನೀವು ಚಿಂತೆಮಾಡಬೇಡಿ ನಿಮಗ ಯಾವುದೇ ನೋವು ಆಗಧಾಂಗ ನಮ್ಮ ಸ್ನೇಹಿತ್ರು ಮಾಡ್ತಾರೆ. ನೀವು ಆಪರೇಷನ್ನೆಲ್ಲ ನೋಡುದಂಗ ಅರಿವಳಿಕೆ ನೀಡುತ್ತೇನೆ'' ಎಂದು ನೋವಾಗದ ರೀತಿಯಲ್ಲಿ ಬೆನ್ನಿಗೆ ನೀಡಿದರು. ಕೊಯ್ದ ಭಾಗದಲ್ಲಿ ಬರುವಂತಹ ಅಂಗಾಂಗಗಳನ್ನೆಲ್ಲ ತೋರಿಸುತ್ತ ನನ್ನೊಂದಿಗೆ ಆತ್ಮೀಯವಾಗಿ ಸಂಭಾಷಿಸುತ್ತ ''ನೀವು ಮೇಷ್ಟ್ರು, ನಾಲ್ಕು ಮಂದಿಗೆ ನಮ್ಮ ಹೆಸರು ಪ್ರಚಾರ ಮಾಡ್ತೀರಿ ಅಂತ ಇಷ್ಟು ಕೇರ್ ತೊಗೊಂಡು ಮಾಡಕತಿವಿ'' ಎಂಬುದನ್ನು ಸರ್ಜರಿ ವೈದ್ಯರು ಹೇಳಲು ಮರೆಯಲಿಲ್ಲ. ಸೂಜಿಗೆ ಹೆದರುತ್ತಿದ್ದ ನನಗೆ ಸರ್ಜರಿ ಒಂದು ತರಹದ ಆತ್ಮಬಲ ಹೆಚ್ಚಿಸಿತು. ಆಪರೇಷನ್ ಅಂದ್ರನೆ ಫಿಫ್ಟಿ-ಫಿಫ್ಟಿ ಅಂತ ತಿಳಿದಿದ್ದೆ; ಆಪರೇಷನ್ನ ಮುಂಚೆ ಕಾಗದ ಪತ್ರಗಳೊಂದಿಗೆ ಆಗುವ ಒಡಂಬಡಿಕೆ ನೋಡಿ !

ಆಪರೇಷನ್ ಥೇಟರಿನಿಂದ ಹೊರಬರುತ್ತಿದ್ದಂತೆ ಸಹಜವಾಗಿ ದುಗುಡದ ಛಾಯೆ ಹೊರಗಿದ್ದವರಲ್ಲಿ ಮೂಡಿತ್ತು. ನಾನು ಹೊರಬರುತ್ತಲೇ ಅವರನ್ನು ಮಾತಾಡಿಸಿದಾಗ ದುಗುಡದ ಜೊತೆಗೆ ತಲಿ ತುರಿಸಿಕೊಳ್ಳಹತ್ತಿದರು. ಅವರು ಅದು ಇದು ಅಂತ ತರಲಿಕ್ಕೆ ಹೊರಗೆ ಹೋದಮೇಲೆ ನನ್ನ ಅಕ್ಕ ''ಸ್ವಲ್ಪ ಸಿರಿಯಸ್ಸಾಗಿರೋ ಮಹರಾಯ, ಸ್ವಲ್ಪ ಆ್ಯಕ್ಟಿಂಗೂ ಮಾಡು, ಈ ಪರಿ ನಕ್ಕೋತ ಮಾತಾಡಿದ್ರ ಎಲ್ಲರೂ ಕಣ್ಣು ಬಿಟ್ಟು ಏನರ ಆದೀತು'' ಅಂತ ಉಗದ್ಲು. ಅವಳ ಮಾತಿಗೆ ನಗು ಬಂದಿತಾದರೂ ಮೌನ ವಹಿಸಿದೆ. ಅರಿವಳಿಕೆ ಪವರ್ ಹೋದ ಮೇಲೆ ಸ್ವಲ್ಪ ನೋವು ಉಂಟಾಯಿತು. ನಾನು ನಕ್ಕೋತ ಇದ್ದುದ್ದನ್ನು ನೋಡಿ ಬಂಧುಗಳು, ಸ್ನೇಹಿತರು ಊರಿಗೆ, ಮನೆಗೆ ತೆರಳಿದ್ದರು. ಮಲಗಿದ್ದ ಸಹೋದರಿಗೆ ತೊಂದರೆ ಯಾಕೆ ಕೊಡಬೇಕು ಎಂದು ನೋವನ್ನು ತಡೆದುಕೊಳ್ಳಲೆತ್ನಿಸಿದರೂ... ನಾನು ಮಲಗದೇ ಚಡಪಡಿಸುತ್ತಿರುವದನ್ನು ಸ್ವಲ್ಪ ಎಚ್ಚರವಾದಾಗ ನೋಡಿದ ಅಕ್ಕ ''ಬಡಕೊಂಡೆ, ಸೀರಿಯಸ್ಸಾಗಿರು ಅಂತ. ಈಗ ನೋಡು ಕಣ್ಣು ಬಿಟ್ಟದಕ ಹ್ಯಾಗ ಒದ್ದಾಡಕತಿದಿ'' ಅಂತ ಎಂತದೋ ದೃಷ್ಟಿ ತೆಗೆದು ಮನಸ್ಸಿಗೆ ಸಮಾಧಾನ ಮಾಡಿಕೊಂಡು ಮಲಗಿದಳು. ಅವಳ ಕಿಟಿಕಿಟಿಯಿಂದ ತಪ್ಪಿಸಿಕೊಳ್ಳಲು ನಾನು ಆರಾಮಾದಂತೆ ನಟಿಸಿ ಮಲಗಿದೆ. ನಂತರ, ಮರುದಿನ ಸುದ್ದಿ ತಿಳಿದ ಕೆಲ ಆತ್ಮೀಯರು, ಪರಿಚಿತರು ಭೇಟಿಯಾಗಲಿಕ್ಕ ಬಂದರು. ಬಂದವರೆಲ್ಲರೊಂದಿಗೆ ಸಾಯಂಕಾಲದವರೆಗೆ ಮಾತಾಡತ ಮಾತಾಡತ ತಲಿಸೂಲೆ ಬಂತು. ಅದು ಬದುಕಿನಲ್ಲೆ ಕಂಡರಿಯದಂಥದ್ದು, ಸಹಜವಾಗಿ ಸಹೋದರಿಯಿಂದ ಮಂಗಳಾರತೀನೂ ಆಯ್ತು. ಸದಾ ಮೌನ ಇಷ್ಟಪಡುವ ನನಗೆ ಮಾತುಗಳು ಚಿಟ್ಟು ಹಿಡಿಸಿ ಯಮಯಾತನೆ ಅನಿಸಿದವು. ಅವರಿಗೆಲ್ಲ ಹೋಗುವಾಗ ದಯವಿಟ್ಟು ಯಾರಿಗೂ ಹೇಳಬೇಡಿ ಅಂತ ನನ್ನ ಪರಿಸ್ಥಿತಿ ಹೇಳಿಕಳುಹಿಸಿದೆ. ಒಂದ ದಿನಕ್ಕ ಕೆಲವೆ ಜನರಿಂದ ತತ್ತರಿಸಿಹೋದವ ಅದೇ ನನ್ನ ಗುರುಗಳು ಆ ಜನಸಾಗರವನ್ನು ಹೇಗೆ ತಡೆದುಕೊಂಡರೋ ಅನ್ನುವುದು ವಿಸ್ಮಯ ಅನಿಸಿತು. ಬಿಡದ ಕರ್ಮವೆಂದು ಭಾವಿಸಿಯೋ ಅಥವಾ ಬೇಸತ್ತೋ ಏನೋ ಆ ಗುರುಗಳು ಒಂದೆರಡು ದಿನಗಳಲ್ಲಿ ಯಾರಾದ್ರೂ ಮಾತಾಡಿಸಲಿಕ್ಕ ಬಂದ ಕೂಡಲೇ ಅವರು ವಿಚಾರಿಸುವ ಮೊದಲೇ ''ಏನಿಲ್ಲರಿ, ಗಾಡಿ ಮೇಲೆ ಕಾರ್ಯಕ್ರಮಕ್ಕಂತ ಬರಕತಿದ್ದೆನ್ರಿ, ಕಣ್ಣಿಗೆ ಚಕ್ರ ಬಂದಂಗಾತು, ಎದುರಿಗೆ ಜೀಪೊಂದು ಬಂತು. ಅದಕ್ಕ ಡಿಕ್ಕಿ ಹೊಡದೆ, ಹಿಂಗಾತು. ಇಲ್ಲಿ ಆಪರೇಷನ್ ಆಗ್ಯಾದ, ಆರಾಮ ಇದ್ದಿನಿ'' ಅಂತ ವರದಿ ಒಪ್ಪಿಸಿಬಿಡೋರು. ಇಷ್ಟೆಲ್ಲ ಹೇಳಿದ ಮೇಲೆ ಮುಂದುವರಿಸಲಿಕ್ಕೆ ಮಾತು ಎಲ್ಲಿ ಉಳದಿರುತಾವ ಹೇಳಿ. ಹೀಗೆ ಜನರನ್ನ ಸಾಗಹಾಕತಿದ್ರು. ಆದರೂ ಅವರು ಅದ್ಹೇಗೆ ಮಾತುಗಳ ಪ್ರವಾಹವನ್ನು ಎದುರಿಸಿದ್ದರೋ ನಾನು ಒಂದೆ ದಿನಕ್ಕೆ ಬೋಲ್ಡ್ ಆದೆ.

ಮೂರ ದಿನಕ್ಕ ಡಿಸ್‌ಚಾರ್ಜ ಆಗಿ ಊರಿಗೆ ಬಂದ ಮೇಲೆ ಯಾರಿಗೂ ತಿಳಿಸಿರದಿದ್ದರೂ ಮನೆ ಸುತ್ತಮುತ್ತಿನವರು, ಆತ್ಮೀಯರು, ಸ್ನೇಹಿತರು ಕುಶಲ ವಿಚಾರಿಸಲಿಕ್ಕೆ ಬರಹತ್ತಿದರು. ಹೆಣ್ಮಕ್ಕಳು ಬಂದರೆ ಬಲು ಮುಜುಗರವಾಗತ್ತಿದ್ದರಿಂದ ಅಂತಹ ಸೂಚನೆ ಕಂಡುಬಂದರೆ ಮಲಗಿದಂತೆ ನಟಿಸಿಬಿಡುತ್ತಿದ್ದೆ. ಫೋನ ಮಾಡಿ ವಿಚಾರಿಸುತ್ತಿದ್ದವರಿಗೆ ''ಎಲ್ಲ ಆರಾಮ

ಆಗಿದೆ. ಬರುವ ಅವಶ್ಯಕತೆನೇ ಇಲ್ಲ'' ಎಂದು ಖಡಾಖಂಡಿತವಾಗಿ ಹೇಳಿಬಿಡುತ್ತಿದ್ದೆ. ಬಂದವರಲ್ಲಿ ಕೆಲವರದು ಸಹಜ ಕುತೂಹಲ ಆಪರೇಷನ್ನ ಆದ ಜಾಗ ನೋಡ ಬೇಕೆನ್ನುವುದು. ಒತ್ತಾಯಪೂರ್ವಕವಾಗಿ ತೋರ್ಸಿ ತೋರ್ಸಿ ಜಿಗುಪ್ಸೆ ಬಂದುಬಿಟ್ಟಿತ್ತು. ಎಲ್ಲಾದರೂ ಅಜ್ಞಾತದಲ್ಲಿದ್ರೆ ಚೆನ್ನಾಗಿರತ್ತಿತ್ತು ಎನಿಸುತ್ತಿತ್ತು. ಬಂದವರಲ್ಲಿ ಎಲ್ಲರೂ ಅನುಕಂಪ ಪಡುವವರು ಇರಲ್ಲ. ಆಕ್ಸಿಡೆಂಟ್ ಆಗಿದ್ದರೆ, ''ಅಬಾಬಬ... ಇವ ಗಾಡಿ ಮ್ಯಾಲೆ ಇಷ್ಟು ಉರಿತ್ತಿದ್ದನಪ'' ಎಂದೋ, ''ಇಲ್ಲ ಇವನಿಗೆ ಗಾಡಿ ಮ್ಯಾಲೆ ಕೂತ್ರ ಕಣ್ಣ ಕಾಣತಿರಲಿಲ್ಲ'' ಎಂದೋ ಬಯ್ಯುವ ಜನಕ್ಕ ನೆವ ಸಿಗತಿತ್ತು. ಆದರ ನನ್ನ ವಿಷಯಕ್ಕ ಅಂತಹ ನೆವ ಇರಲಿಲ್ಲ. ನನ್ನ ಮಾವ ಮಾತಾಡಿಸಲು ಬಂದಾಗ ಸದಾ ಬಯ್ಯುವ ಆತನಿಗೆ ನೆಪ ಸಿಗಲ್ಲ ಅಂತ ಮಾಡಿದ್ದೆ. ಯಾಕಂದ್ರ ಸಣ್ಣೋನಿದ್ದಾಗ ಕೈ ಮುರುಕೊಂಡಾಗ, ಪಟಾಕಿ ಸಿಡಿಸಲು ಹೋಗಿ ಕೈ ಸುಟ್ಟುಕೊಂಡಾಗ ಎಲ್ಲರೂ ಅನುಕಂಪ ಪಟ್ಟು ಧೈರ್ಯ ತುಂಬಿದ್ದರು. ಆದರೆ ಇವ ಬಂದವನೆ ಕಪಾಳಕ್ಕ 'ಪಟಾರ್' ಅಂತ ಹೊಡೆದು ''ಹುಡುಗರು ಎಷ್ಟು ಸೂಕ್ಷ್ಮ ಇರಬೇಕೆಂಬುದು ಗೊತ್ತಿಲ್ಲೆನಲೇ? ಕೆತ್ತಕ ಹೋಗಿದ್ದೆನಪ'' ಎಂದು ಬಾರಿಸಿದ್ದ, ಪೇಷಂಟು ಅನ್ನೋದು ಖಬರಿರದೆ! ವೈದ್ಯರ ಬಳಿ ಎಲ್ಲಾ ವಿಚಾರ ಮಾಡಿ ಬಂದಿದ್ದ ಅವ ''ಅಲ್ಲ, ಮೊದಲಾ ಕೈಲಾಗಲ್ಲ, ಏನು ಕಿಸ್ಯಾಕ ಹೋಗಿದ್ದೆಪ, ಏನ್ ಎತ್ತಿ ಮಾಯ ಮಾಡಿ ಹರ್ನಿಯಾ ಆಗೋಂಗ ಮಾಡಿಕೊಂಡಿ?'' ಎಂದು ಒದರ್ಯಾಡಿ, ಬಡಿಯೋ ವಯಸ್ಸಲ್ಲ ನೋಡಿ! ಮನೆಯವರಿಗೆ ಹಕೀಕತ್ತು ಗೊತ್ತಾಗ್ಲೂ ಹಾಂಗ ಮಾಡಿದ್ದರ ಫಲ ಇಂದು ಮನ್ಯಾಗ ತಂಬಿಗಿ ಕೂಡ ಎತ್ತಕ ಸ್ವತಂತ್ರ ಇಲ್ಲದಾಂಗ ಮಾಡ್ಯಾನ.




ಎಲ್ಲಾರು ಒಂದು ರೀತಿಯಿದ್ರ ನಮ್ಮವ್ವನದೊಂದು. ಅವಳ ಮುಗ್ಧ ಭಕ್ತಿ ಮುಂದ ಎಲ್ಲಾರ ಶ್ಯಾಣೇತನ ಬಾರಲು ಬಿಳತಾವ. ಆಕಿದೂ ಒಂದೇ ಹಠ, ಪ್ರಳಯ ಆದ್ರೂ ಚಿಂತಿಲ್ಲ ದೇವ್ರ ಪೂಜ ಬಿಡಬಾರದು ಅನ್ನೋದು. ನಾನು ಅತಿಯಾಗಿ ಮಾಡುವ ಮಡಿವಂತಿಕೆಗೆ ಬಯ್ಯತಿದ್ರ, ''ಸನ್ಯಾಸಿ, ನೀ ಈ ಮಟ್ಟಕ್ಕ ಇರಬೇಕಾದ್ರೆ ನನ್ನ ಪೂಜ ಕಾರಣ ರಂಡೆಗಂಡ, ಮೊನ್ನ ಚಿಕನ್ ಗುನ್ಯಾ ಇಡೀ ಊರಿಗೆ ಬಂತು, ನಮಗ ಬಂದ್ರೂ ನಿನಗ ಯಾಕ ಬರಲಿಲ್ಲ ಹೇಳು? ಅದು ನಾನು ಮಾಡಿದ ಪೂಜಾಫಲ'' ಎಂದು ಪ್ರೀತಿಯಿಂದ ಬಯ್ಯುವಾಗ ನಾನು ಮೌನ ವಹಿಸಿಬಿಡತೀನಿ. ಅದೂ ನಾನು ಸರ್ಜರಿಗೆ ಒಳಗಾಗಿದ್ದು ದೀಪಾವಳಿ ಟೈಮಿನ್ಯಾಗ. ನನ್ನ ಸರ್ಜರಿಗಿಂತಲೂ ದೇವ್ರ ಪೂಜಾದ ಚಿಂತಿ ಅವ್ವಳದು. ಪೂಜಿ ಅಪ್ಪಿತಪ್ಪಿ ಮಾಡಲಿಲ್ಲ ಅಂದ್ರ, ವಾರತನ ಮನಿ ವಾತಾವರಣನ ಬ್ಯಾರೆ ಇರುತ್ತೆ. ಮುಖ ಗಂಟ್ಹಾಕಿಕೊಂಡು ಊಟಬಿಟ್ಟು ಮೂಲಿ ಸೇರಿಬಿಟ್ರ ಮುಗಿದೋತು. ನನ್ನ ಆದರ್ಶಗಳೆಲ್ಲ ಗೆದ್ದಲು ತಿಂದಂಗ! ಪುಣ್ಯಕ್ಕ ಆಸ್ತಿಕತೆ ಹಾಗೂ ನಾಸ್ತಿಕತೆ ಗಳೆರಡರ ಒಳ್ಳೆ ವಿಚಾರಗಳನ್ನು ಒಪ್ಪಿಕೊಳ್ಳುವ ನಡಸ್ತಿಕ ನಾನಾಗಿರುವುದರಿಂದ ಎರಡು ಮಾತಿಲ್ಲದ ಅವಳ ಮಾತಿಗೆಲ್ಲ ಒಪ್ಪಿಗೋತಿನಿ. ಒಂದು ವೇಳೆ ನಾನು ಎಡಪಂಥೀಯ ನಾಗಿದ್ದರೆ ಏನಾಗುತ್ತಿತ್ತೋ...? ಇರಲಿ ವಿಷಯಾಂತರವೇಕೆ, ನಾನು ಮನೆಗೆ ಬರುತ್ತಿದ್ದಂತೆ ಅವ್ವ ಮೊದಲು ಕೇಳಿದ್ದು, ''ಚತುರ್ದಶಿಗೆ ಪೂಜಾ ಮಾಡ್ತಿಲ್ಲ?'' ಅಂತ. ಸ್ನಾನ ಹದಿನೈದು ದಿನಗಳವರೆಗೆ ಮಾಡಬಾರದು ಎಂದು ಹೇಳಿರುವ ವಿಷಯ ಗೊತ್ತಾದ ಮೇಲೆ ಹಲುಬಿದ್ದೆ ಹಲುಬಿದ್ದು, ''ಎಂತಹ ಟೈಮಿನ್ಯಾಗ ಆಪರೇಷನ್ ಮಾಡಿಸಿಕೊಂಡ ಇವ ಭಂಡ, ನನ್ನ ದೇವ್ರ ಗತಿ ಏನು?'' ಅಂತ. ನಾನು ಯಾಕಾದ್ರೂ ಮಾಡಿಸಿಕೊಂಡೆನೋ ಅನ್ನೋ ಹಾಗೆ ಮಾಡಿದ್ಲು. ಪುಣ್ಯಕ್ಕ ದೀಪಾವಳಿಗೆ ನಾಲ್ಕುದಿನ ರಜೆ ಹಾಕಿ ಹಾಯಾಗಿರೋಣ ಅಂತ ಬಂದ ಭಾವಗ ಬಿತ್ತು ಪೂಜಾದ ಭಾರ. ನಾನು ಉಳಕೊಂಡೆ ಅನ್ನಿ.

ಬಂದವರೆಲ್ಲ ತಂದಿದ್ದ ಬ್ರೆಡ್ಡು, ಬಿಸ್ಕಟ್ಟು, ಹಣ್ಣು ಮನೆ ತುಂಬಿದ್ದವು. ಅಕ್ಕನ ಮಗ ರಾಜು ಒಂದಿನ ''ಮಾಮ ಈ ಬ್ರೆಡ್ಡು, ಬಿಸ್ಕಟ್ಟು, ಹಣ್ಣು ತಿಂದು ತಿಂದು ಸಾಕಾಗಿ ಹೋಗ್ಯಾದ, ಸ್ವಲ್ಪ ವೆರೈಟಿ ವೆರೈಟಿ ತೊಗೊಂಡು ಬಾ ಅಂತ ಹೇಳಪ ನೀನು'' ಎಂದಾಗ ಕೇಕು, ಖಾರ ಡಾಣಿ ತೊಗೊಂಡು ಬಾ ಅಂತ ಹೇಳಲು ಮಗಳು ಮರೀಲಿಲ್ಲ. ಹಾಗೆ ಮನೆಯಲ್ಲಿ ಬಿಸ್ಕಟ್, ಬ್ರೆಡ್ಡು ಪಾಕೇಟು ಹೆಚ್ಚಾದ್ರ ಅಕ್ಕಪಕ್ಕದ ಮನೆಯ ಮಕ್ಕಳಿಗೆ ಕೊಡಲು ಹೇಳಿದ್ದೆ. ಒಂದು ದಿನ ಪಕ್ಕದ ಮನೆಯ ಮಗು ಬಂದಿದ್ದೆ ''ಬ್ರೆಡ್ಡು, ಬಿಸ್ಕಟ್ಟು ಕೊಟ್ಟಿದ್ದಕ್ಕೆ, ಥ್ಯಾಂಕ್ಯೂ ಅಂಕಲ್. ಯಾವಾಗಲೂ ನಿಮಗೆ ಹೀಗೆ ಆಗತಿರಲಿ'' ಅಂತ ತೊದಲು ನುಡಿಗಳಾಡಬೇಕೆ! ಈ ಮಕ್ಕಳ ಮಾತುಗಳಿಗೆ ಏನು ಉತ್ತರಿಸಬೇಕು, ಹೇಳಿ.

ವಾರ ಕಳೀತು. ಸ್ಟಿಚಸ್ ಬಿಚ್ಚಿದರು, ಎರಡು ದಿನ ರೆಸ್ಟು ತೊಗೊಂಡು ನಿಧಾನವಾಗಿ ಅಡ್ಡಾಡಿ ಎಂದು ಗ್ರೀನ ಸಿಗ್ನಲ್ ನೀಡಿದರು. ಬದುಕಿದೆ ಬಡಜೀವವೇ ಎಂದುಕೊಂಡೆ. ವೈದ್ಯರು ಬೇಕಾದ್ದು ತಿನ್ನಿ ಎಂದಿದ್ದರೂ ಮನೆಯಲ್ಲಿ ಉಣಬಡಿಸುತ್ತಿದ್ದ ಪಥ್ಯದ ಊಟಕ್ಕೆ ಮೆತ್ತಗಾಗಿದ್ದೆ. ನಿಂತ್ರೂ, ಕೂತ್ರೂ, ಮಲಗಿದ್ರೂ, ಮಾತಾಡಿದ್ರೂ ಪ್ರತಿಯೊಂದಕ್ಕೂ ಎಚ್ಚರಿ ಸುತ್ತಿದ್ದ ಮಾತುಗಳಿಗೆ ನಿತ್ರಾಣನಾಗಿದ್ದೆ. ಶಾಲೆ ಆರಂಭವಾಗುವ ದಿನಗಳು ಹತ್ತರ ಬಂದಿತ್ತು. ವಿಷಯ ಗೊತ್ತಾಗಿ ಸಹೋದ್ಯೋಗಿ ಕಾಗಿ ಬಳಗ ಬಂದೀತೆಂದು ಅಂಜಿ ಮೆಡಿಕಲ್ ರಜೆ ಹಾಕೆಂದು ಹಠ ಹಿಡಿದ ಮನೆಯವರ ಮಾತುಗಳನ್ನು ಲೆಕ್ಕಿಸದೆ ಹೋಗಲಾರಂಭಿಸಿದೆ.

ದಾರಿಯಲ್ಲಿ ಹೊರಟಾಗ ಕೇರಿ ಮಂದಿ ಸಹಜವಾಗಿ ತಮ್ಮ ಮಾತಿನ ಪರಿಭಾಷೆಯಲ್ಲಿ ''ಯಾಕಪ ಮಾಸ್ತರ ಇಟು ದಿನ ಛಲೋ ಇದ್ದಿ, ಯಾವ ಕೆಟ್ಟಬ್ಯಾನಿ ಬಡಕೊಂತು?'' ಅಂತ, ಭೇಟಿಯಾದ ಚಡ್ಡಿದೋಸ್ತರು ''ಯಾಕೋ? ಏನಾಯ್ತು? ಎಷ್ಟು ಇಳಿದು ಹೋಗಿದಿ, ನಿನಗೂ ಅದ ಬಡಕೊಂತನೂ, ನಮ್ಮ ಬ್ಯಾಚಿನಾ ಇಪ್ಪತ್ತೊಂದನೇ ದುರಂತ ನಾಯಕರ ಲಿಸ್ಟಿನ್ಯಾಗ ಸೇರಕ ಹೊಂಟೇನು?'' ಎಂದು ಕೇಳಲಾರಂಭಿಸಿದರು. ಆ ಜನರ ಮಾತುಗಳನ್ನು ಅರಗಿಸಿಕೊಂಡರೂ ಗೆಳೆಯರ ಮಾತು ಗಳಿಗೆ ಎದಿ ಝಲ್ ಅಂತು. ಕಾಲ ಈಗ ಇಷ್ಟುಸುಮಾರಾಗ್ಯಾದ ಅಂದ್ರ ಕೆಲದಿನ ಹಾಸಿಗಿ ಹಿಡಿದು ಮಲಗಿದ್ವಿ, ಸೊರಗಿದ್ವಿ ಅಂದ್ರ ಮೊದಲು ಸಸ್ಪೆಕ್ಟು ಮಾಡೋದು. ''ಅದ, ಅವನಿಗೆ ಅದ ಏಡ್ಸ ಬಂದೈತಲೇ'' ಅಂತ ವೈದ್ಯರಿಗಿಂತಲೂ ಮೊದಲ ರಿಪೋರ್ಟ ಕೊಟ್ಟುಬಿಡತಾರೆ. ಇರಲಿ ನಮ್ಮ ಶಾಲಾ ಅವಧಿಯ ಬ್ಯಾಚು ಎಂತಹ ದುರದೃಷ್ಟದ್ದಂದ್ರ ಹಾದಿಗೆ ಹತ್ತಿಕೊಂಡೋರು, ಒಳ್ಳೆ ಸ್ಥಾನದಲ್ಲಿರೋರು ಬಹು ವಿರಳ. ಮದನಗೋಪಾಲರು ತೊಂಬತ್ತೆರಡರಲ್ಲಿ ನಮ್ಮ ಜಿಲ್ಲೆಯ ಡಿ.ಸಿ.ಯಾಗಿದ್ದಾಗ ಮೆಟ್ರಿಕ್ ಪರೀಕ್ಷೆಯಲ್ಲಿ ಕೈಗೊಂಡ ಕಠಿಣ ಕ್ರಮಗಳಿಂದಾಗಿ ನೂರು ಜನರಲ್ಲಿ ಇಪ್ಪತ್ತೇ ಹುಡುಗರು ಪಾಸಾಗಿದ್ವಿ. ಇಲ್ಲಿ ಕಾಟ ತಾಳಲಾರದೆ ಫೇಲಾದ ಹುಡುಗರು ಪಾಸಾಗಲು ಮರುವರ್ಷ ಬಿಜಾಪುರ ಜಿಲ್ಲೆಯ ಕೆಲ ಕುಪ್ರಸಿದ್ಧ ಸೆಂಟರು ಗಳಲ್ಲಿ ದಾಖಲಿಸಿದರು. ಅದೇ ವರ್ಷ ನಮ್ಮ ಜಿಲ್ಲೆ ಡಿ.ಸಿ. ಯವರು ಆ ಜಿಲ್ಲೆಗೆ ಒಕ್ಕರಿಸಬೇಕೆ? ಅಲ್ಲಿ ಡುಮುಕಿ ಹೊಡೆದು ಹೊಡೆದು ನಿತ್ರಾಣಕ್ಕ ಬಿದ್ದು ಪ್ರಯತ್ನ ಮಾಡಿ ಮಾಡಿ ತಕ್ಕೊಳ್ಳಲಾಗದೆ ಕೈಚೆಲ್ಲಿ ಕುಳಿತು ಅದು ಇದು ಅಂತ ಸಿಕ್ಕ ದಾರಿ ಹಿಡಿದ್ರು. ನಮ್ಮ ಬ್ಯಾಚಿಗೆ ಯಾರ ಶಾಪಾನೋ ಕಾಣೆ, ಈಗಾಗಲೇ ಇಪ್ಪತ್ತು ಜನ ಏಡ್ಸ್ ಬಂದು ಮಸಣ ಸೇರಿದ್ದಾರೆ, ನಮ್ಮ ಬ್ಯಾಚಿನ ಹುಡುಗಿಯರಲ್ಲಿ ಹದಿನೈದಕ್ಕಿನ್ನ ಹೆಚ್ಚಿನವರು ವಿಡೋ ಆಗಿದ್ದಾರೆ, ಸಣ್ಣ ವಯಸ್ಸಿನಲ್ಲಿ! ಎಂತಹ ಕಾಕತಾಳೀಯವಲ್ಲವೆ? ಹಾಗೆ ನನ್ನನ್ನು ಆ ಲಿಸ್ಟಿಗೆ ಸೇರಿಸಲು ಹೊರಟ ಗೆಳೆಯರಿಗೆ ವಿಷಯ ತಿಳಿಸಿದಾಗ ''ಅದಕಲೇ ನಮ್ಮಂಗ ಕುಡಿದು ತಿಂದು ಮಜಾ ಮಾಡತಿದ್ರ ಯಾವ ರೋಗ ಬರಲ್ಲ. ಇಲ್ಲಿಕ್ರ ಇದಕ್ಕ ದಂಡ ಬಡಿಬೇಕು ನೋಡು. ಛಲೋ ಆಯ್ತು ಮಗನ, ನೌಕರಿ ಸೇರಿದಾಗನಿಂದ ಒಂದು ಸಾರಿ ಗುಂಡು ಪಾರ್ಟಿ ಕೊಟ್ಟದ್ದಿಲ್ಲ'' ಅನ್ನಬೇಕೆ? ಈ ಕಿರಿಕಿರೀನ ಬ್ಯಾಡ ಎಂದು ಸಹೋದ್ಯೋಗಿಯ ಗಾಡಿಯ ಒಂದೆ ಸೈಡಿನಲ್ಲಿ ಕುಳಿತು ಹೋಗತೊಡಗಿದೆ. ಹಾಗೆ ಕುಳಿತು ಹೋಗುತ್ತಿದ್ದ ನನ್ನನ್ನು ಎಲ್ಲರೂ ದುರಾಯಿಸಿಕೊಂಡು ನೋಡುತ್ತಿದ್ದರು. ಅಂಗಡಿಯಲ್ಲಿ ಒಬ್ಬರು ಕೇಳಿಯೇ ಬಿಟ್ರು, ''ಯಾಕ್ರಿ ಮೇಷ್ಟ್ರೆ, ಆಕ್ಸಿಡೆಂಟು ಆಗಿತ್ತೋ ಏನೋ, ಒಂದೆ ಸೈಡಿನಲ್ಲಿ ಹೆಂಗಸರು ಕುತುಗೊಂಡು ಹೋದಂಗ ಹೋಗುತಿದ್ರಿ'' ಎಂದು ಕೇಳಿದಾಗ ಅದೇ ಕತೆ ಹೇಳಬೇಕಾಯಿತು. ಮನೆಯವರಿಗಿಂತಲೂ ಹೊರಗಿನವರ ಮಾತುಗಳು ಮುಜುಗರ ನೀಡಕತ್ತಿದ್ವು. ವೈದ್ಯರ ಮರುಭೇಟಿಗೆ ಹೋದಾಗ ''ನನಗೆ ಸರ್ಜರಿ ಮಾಡಿಸಿಕೊಂಡಿದ್ದ ತಪ್ಪಾದಂಗ ಆಗ್ಯಾದ'' ಎಂದು ವಿಷಯ ತಿಳಿಸಿ ''ನನಗ ನಿರ್ಭಯದಿಂದ ಅಡ್ಡಾಡುವದಕ್ಕ ಚೆಕ್ ಮಾಡಿ ಟ್ರೀಟ್‌ಮೆಂಟ ನೀಡ್ರಿ'' ಎಂದೆ. ಅವರು ಪರೀಶಿಲಿಸಿ ಓ.ಕೆ. ರಿಪೋರ್ಟ ನೀಡಿದಾಗ ನಿಟ್ಟುಸಿರು ಬಿಟ್ಟೆ. ಕಡಿಮೆ ಅವಧಿಯಲ್ಲಿ ಗುಣವಾಗುವ ಹಾಗೆ ಮಾಡಿದಕ್ಕೆ ಥ್ಯಾಂಕ್ಸ ಹೇಳಿ ಬರ್ತೀನ್ರಿ ಎಂದಾಗ ''ಮತ್ತ್ಯಾವಗ ಬರ್ರಿ?'' ಅಂತ ಅಪಶಕುನ ನುಡಿಬೇಕೆ ಆ ಡಾಕ್ಟ್ರು!

**ಗುಂಡುರಾವ್ ದೇಸಾಯಿ**
ಮಸ್ಕಿ, ರಾಯಚೂರು ಜಿಲ್ಲೆ

ಕೆ. ಎಸ್. ಪಾರ್ಥಸಾರಥಿ

# ಒಂದಿಷ್ಟು ಅರ್ಥಶಾಸ್ತ್ರ: ವಿದೇಶೀ ಹಣದ ಒಳ-ಹೊರ-ಹರಿವು: ಒಂದು ಟಿಪ್ಪಣಿ



ಬಂಡವಾಳ ವ್ಯವಸ್ಥೆಯನ್ನು ಆಡಿಸುವ ಹಲವಾರು ವಿಷಯಗಳು ಬಹಳ ಸೂಕ್ಷ್ಮವಾದುವು ಮತ್ತು ಅವುಗಳನ್ನು ಅಭ್ಯಾಸ ಮಾಡುವವರಿಗೆ ಬಿಟ್ಟು ಸಾಮಾನ್ಯ ಜನರಿಗೆ ತಿಳಿಯದವು ಅಥವಾ ಅವರ ಗ್ರಹಿಕೆಗೆ ನಿಲುಕದವು; ಆದರೂ ಅವರನ್ನು ತೀವ್ರವಾಗಿ ತಟ್ಟುವಂಥವು. ಅಂಥ ಸಂದರ್ಭಗಳಲ್ಲಿ ಅದೇಕೆ ಹಾಗೆ ಆಯ್ತು ಎಂದು ತಿಳಿಯದೆ ಗೊಂದಲಕ್ಕೆ, ಅಸಹಾಯಕತೆಗೆ ಅವರನ್ನು ಕೈಚೆಲ್ಲಿಸುವಂಥವು. ವಿದೇಶೀ ಹಣ ದೇಶದ ಆರ್ಥಿಕತೆಯ ಒಳಗೆ ಪ್ರವೇಶಿಸುವುದು, ಹೊರಗೆ ಹರಿದುಹೋಗುವುದು ಅಂಥ ಒಂದು ವಿಷಯ. ಇದು ಪ್ರತಿಕ್ಷಣ ನಡೆಯುತ್ತಲೇ ಇರುತ್ತದೆ. ಅದರಲ್ಲಿನ ಏರುಪೇರುಗಳು ನಮ್ಮ ಬೆಲೆ ಏರಿಕೆ-ಕುಸಿತಗಳ ಮೇಲೆ, ನಮ್ಮ ಸರಕುಗಳನ್ನು ರಫ್ತು ಮಾಡುವ ಸಾಮರ್ಥ್ಯ ಹಾಗೂ ನಮಗೆ ಬೇಕಾದ್ದನ್ನು ಆಮದು ಮಾಡಿಕೊಳ್ಳುವ ಸಾಮರ್ಥ್ಯಗಳನ್ನು ಪ್ರಭಾವಿಸುತ್ತವೆ. ವಿದೇಶೀ ಹಣ ಯಾವಾಗಲೂ ಸಂಪೂರ್ಣ ಅನಿಯಂತ್ರಿತವಾಗಿ ಚಲಾಯಿಸುವುದಿಲ್ಲ ಹಾಗೂ ಅದು ಸಂಪೂರ್ಣ ನಿಯಂತ್ರಿತವೂ ಅಲ್ಲ. ಈ ಮಾತು ಸಂಪದ್ಭರಿತವೆನ್ನುವ ಪಾಶ್ಚಿಮಾತ್ಯ ಅರ್ಥ ವ್ಯವಸ್ಥೆಗಳಿಗೂ ಅನ್ವಯಿಸುವಂಥದು. ನಮಗೆ ವಿದೇಶೀ ಹಣ ಬೇಕು ಎನ್ನುವುದರಲ್ಲಿ ಸಂಶಯವಿಲ್ಲ. ತಂತ್ರಜ್ಞಾನ, ನಮ್ಮಲ್ಲಿಲ್ಲದ ಸರಕುಗಳು ಹೀಗೆ ಅವಶ್ಯಕತೆಗಳನ್ನು ನೀಗಿಸಿಕೊಳ್ಳಲು ಅದು ಬೇಕು. ಅದನ್ನು ಸಂಪಾದಿಸುವ ಒಂದು ಮಾರ್ಗ ರಫ್ತು ಮಾಡುವುದು. ನಮ್ಮ ಸರಕುಗಳ ಬೆಲೆ, ಗುಣಮಟ್ಟ ಎರಡೂ ಆಕರ್ಷಕವಾಗಿದ್ದರೆ, ರಾಜಕೀಯ ಕಾರಣಗಳು ಇಲ್ಲದಿದ್ದರೆ, ಅವುಗಳ ರಫ್ತು ಆಗಿ, ಆಮದಿಗೆ ಕೊಡಲು ಸಾಕಷ್ಟು ವಿದೇಶೀ ಹಣ ಸಿಗುತ್ತದೆ. ಪಾಕಿಸ್ತಾನ ದುರದೃಷ್ಟವಶಾತ್, ರಾಜಕೀಯ ಕಾರಣಗಳಿಂದಾಗಿ, ಅದಕ್ಕೆ ಅಗತ್ಯವಿದ್ದರೂ, ಲಾಭಕರವಾಗಿದ್ದರೂ ನಮ್ಮಿಂದ ಸರಕುಗಳನ್ನು ಕೊಳ್ಳುವುದಿಲ್ಲ – ಬಹುವಾಗಿ. ಮುಂದುವರಿದ ರಾಷ್ಟ್ರಗಳು, ಅಮೆರಿಕಾ ಮುಂತಾದುವು, ಹಲವಾರು ರಾಜಕೀಯ ಸಂದರ್ಭಗಳಲ್ಲಿ, ನಮ್ಮನ್ನು ಶಿಕ್ಷಿಸಲು, ನಮ್ಮಿಂದ ಕೊಳ್ಳುವುದನ್ನು ಸ್ಥಗಿತಗೊಳಿಸುತ್ತವೆ. ಈ ರಾಜಕೀಯ ನೆಲೆಯ ಚರ್ಚೆ ಈ ಲೇಖನದ ವಿಷಯವಲ್ಲ.

ವಿದೇಶೀ ಹಣದ ಒಳಗೆ ಬರುವ, ಹೊರಗೆ ಹೋಗುವ ವ್ಯವಹಾರ ಒಂದು ಡಾಲರಿಗೆ, ಪೌಂಡಿಗೆ ಎಷ್ಟು ರೂಪಾಯಿ ಎಂಬ ಅಂಶವು ವಿದೇಶೀ ವಿನಿಮಯದ ದರವನ್ನು ನಿರ್ಧರಿಸುತ್ತದೆ. ಈ ದರ ಎಷ್ಟು ಎಂದು ಮುಕ್ತ ಮಾರುಕಟ್ಟೆಯ ವ್ಯವಹಾರ ನಿರ್ಧರಿಸುವುದು ಒಂದು ವಿಧ. ಆದರೆ ಅಭಿವೃದ್ಧಿಶೀಲ ಹಾಗೂ ಹಿಂದುಳಿದ ರಾಷ್ಟ್ರಗಳು ಈ ವ್ಯವಹಾರವನ್ನು ಗಮನಿಸುತ್ತಲೇ, ತಮ್ಮ ಆರ್ಥಿಕತೆಯನ್ನು ಕಾಪಾಡಿಕೊಳ್ಳಲು ಕೃತಕವಾಗಿ, ಅಸಹಜವಾದ ರೀತಿಯಲ್ಲಿ ಈ ವಿನಿಮಯ ದರವನ್ನು ಹಿಡಿದಿಡುತ್ತವೆ. ಭಾರತದಲ್ಲಿ ನಾವು ಈಗ ಈ ಬೆಲೆ ನಿಗದಿ ಮಾಡುವ ಪ್ರಕ್ರಿಯೆಯನ್ನು ಭಾಗಶಃ ಮುಕ್ತಗೊಳಿಸಿದ್ದೇವೆ. ನಮ್ಮ ಅರ್ಥಶಾಸ್ತ್ರಜ್ಞ ಪ್ರಧಾನಿಗೆ ಈ ವಿಷಯದಲ್ಲಿ ಸ್ವಾತಂತ್ರ್ಯ ಇದ್ದಿದ್ದರೆ ಇದನ್ನು ಸಂಪೂರ್ಣ ಮುಕ್ತಗೊಳಿಸಿಬಿಡುವರೇನೋ! ಚೀನಾ ಇದನ್ನು ಅತಿಹೆಚ್ಚು ದರದಲ್ಲಿ ಅಸಹಜವಾಗಿ ನಿಯಂತ್ರಿಸಿ, ತನ್ನ ಸರಕುಗಳು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸುಲಭ ದರದವೆಂದು ಕಾಣುವಂತೆ ಮಾಡಿಕೊಂಡಿದೆ. ಈ ಕಾರಣ ಅದರ ರಫ್ತು ಅಪಾರವಾಗಿ ಹೆಚ್ಚಿದೆ. ಸದ್ಯದಲ್ಲಿ ಅದರ ಆರ್ಥಿಕ ಮತ್ತು ರಾಜಕೀಯ ಪ್ರಾಬಲ್ಯ ಎಷ್ಟಿದೆಯೆಂದರೆ, ಅಮೆರಿಕಾವೂ ಸೇರಿದಂತೆ ಎಲ್ಲ ರಾಷ್ಟ್ರಗಳೂ ಚೀನಾ ಹಣದ ಕೃತಕ ದರದ ವಿರುದ್ಧ ತಕರಾರು ಎತ್ತಿದ್ದರೂ ಏನೂ ಮಾಡಲಾಗುತ್ತಿಲ್ಲ. ಅಂತರರಾಷ್ಟ್ರೀಯ ಬಂಡವಾಳದ ಬಾಲಬಡುಕವಾಗುತ್ತಿರುವ ನಾವು ಇದನ್ನು ಭಾಗಶಃ ನಿಯಂತ್ರಿಸಿದರೂ, ನಮ್ಮ ಸರಕುಗಳು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ದುಬಾರಿ ಬೆಲೆಯವು ಎನ್ನುವ ಪರಿಸ್ಥಿತಿಯನ್ನು ನಾವೇ ಉಂಟುಮಾಡಿಕೊಂಡಿದ್ದೇವೆ. ಅದು ಕಾರಣ ಹೆಚ್ಚು ರಫ್ತು ಮಾಡಲಾಗದೆ ನಮ್ಮ ವಿದೇಶೀ ವಿನಿಮಯ ಪರಿಸ್ಥಿತಿ ನಮಗೆ ವಿರುದ್ಧವಾಗಿದೆ - ಅಸಮತೋಲನವಿದೆ.

ವಿದೇಶದಿಂದ ಹಣ ಹೇಗೆ, ಏಕೆ ಒಳಗೆ ಬರುತ್ತದೆ? ನಮ್ಮ ದೇಶದ ಸರಕುಗಳನ್ನು ವಿದೇಶದವರು ಕೊಂಡಾಗ ಒಳಗೆ ಬರುವುದು. ನಾವು ಅವರ ಸರಕುಗಳನ್ನು ಕೊಂಡಾಗ ಹೊರಗೆ ಹೋಗುತ್ತದೆ. ಈ ಎರಡೂ ಸಂದರ್ಭದಲ್ಲಿ ವಿದೇಶೀ ವಿನಿಮಯ ಓಡಾಡುತ್ತದೆ. ನಮ್ಮ ರಫ್ತು, ಆಮದಿಗಿಂತ ಕಡಿಮೆಯಾದರೆ ನಾವು ಸಾಲಗಾರರಾಗುತ್ತೇವೆ. ನಮ್ಮ ರೂಪಾಯಿಯ ವಿನಿಮಯ ಬೆಲೆ ಕುಸಿಯುತ್ತದೆ. ರಫ್ತೇ ಹೆಚ್ಚಾದರೆ ಇದರ ವಿರುದ್ಧ ಪರಿಣಾಮ ಆಗುತ್ತದೆ. ಐವತ್ತು ರೂಪಾಯಿಗೆ ಒಂದು ಡಾಲರು ಎನ್ನುವುದು ಹತ್ತು ರೂಪಾಯಿಗೆ ಒಂದು ಡಾಲರು ಎಂಬುದಕ್ಕಿಂತ ಕಡಮೆ ಬೆಲೆ ಎಂಬುದನ್ನು ಗ್ರಹಿಸಿ. ಮುಕ್ಕಾಲುವಾಸಿ ಅಭಿವೃದ್ಧಿಶೀಲ, ಹಿಂದುಳಿದ ರಾಷ್ಟ್ರಗಳ ಆಮದು-ರಫ್ತು ವ್ಯವಹಾರದ ಅವರ ವಿರುದ್ಧವಾಗೇ ಇರುವುದು ಸಹಜವೆ. ಈ ಕೊರತೆಯನ್ನು ತುಂಬಲು ವಿದೇಶೀ ಸಾಲ, ಐ.ಎಂ.ಎಫ್. ಮತ್ತು ವರ್ಲ್ಡ್ ಬ್ಯಾಂಕುಗಳಿಂದ ಸಾಲ, ಇವೆಲ್ಲ ಬೇಕಾಗುತ್ತವೆ. ೧೯೯೧ರಲ್ಲಿ ನಮ್ಮ ಪರಿಸ್ಥಿತಿ ಎಷ್ಟು ಹದಗೆಟ್ಟಿತ್ತೆಂದರೆ, ನಮ್ಮಲ್ಲಿದ್ದ ಚಿನ್ನದ ನಿಕ್ಷೇಪವನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಿ, ನಮ್ಮ ವಿದೇಶೀ ವಿನಿಮಯದ ಕೊರತೆಯನ್ನು ನೀಗಿಸಿಕೊಳ್ಳಬೇಕಾಯ್ತು. ಆ ಪರಿಸ್ಥಿತಿಗೆ ಬರಲು ಅದಕ್ಕೆ ಹಿಂದಿನ ಎಂಟು ವರ್ಷಗಳು ನಮ್ಮ ಸರ್ಕಾರದ ಆರ್ಥಿಕ ನೀತಿ ಹೇಗೆ ಕಾರಣವಾಯ್ತು, ಅದು ಒಂದು ಉದ್ದೇಶಪೂರ್ವಕ ನೀತಿಯಾಗಿತ್ತೇ ಅನ್ನುವ ಚರ್ಚೆ ಹಾಗಿರಲಿ, ವಾಸ್ತವವೆಂದರೆ ಅದರ ದೀರ್ಘಕಾಲೀನ ಪರಿಣಾಮ ನಮ್ಮ ಅರ್ಥನೀತಿಯನ್ನು ಯೋಜನಾಬದ್ಧ ನೀತಿಯಿಂದ ಸರಿಸಿ ಮುಕ್ತ ಮಾರುಕಟ್ಟೆಯ ನೀತಿಯತ್ತ ದಬ್ಬಿತು. ಅದು ಅದರಲ್ಲಿ ಹೇಗೆ ಸಫಲವಾಯ್ತು ಎಂಬುದೆಲ್ಲ ಈಗ ಇತಿಹಾಸ. ಅಂದರೆ ವಿದೇಶೀ ವಿನಿಮಯಕ್ಕೆ ಸಂಬಂಧಪಟ್ಟ ತಿಳುವಳಿಕೆ ಎಷ್ಟು ಮುಖ್ಯ ಎಂಬುದರ ಗ್ರಹಿಕೆಯಾದೀತು.

ವಿದೇಶೀ ವಿನಿಮಯ ಒಳಗೆ ಬಂದಾಗ, ಅದಕ್ಕೆ ಅಂದಿನ ವಿನಿಮಯ ದರದಲ್ಲಿ ಸಮಾನವಾದ ರೂಪಾಯಿ ಆಂತರಿಕವಾಗಿ ಚಲಾವಣೆಗೆ ಬರುತ್ತದೆ. ಹೊರಗೆ ಹೋದಾಗ, ಅಷ್ಟು ರೂಪಾಯಿ ಚಲಾವಣೆಯಿಂದ ಬತ್ತಿಹೋಗುತ್ತದೆ. ಬಂದ ಹಣಕ್ಕೆ ಹೋದ ಹಣಕ್ಕೆ ಸಮನಾದ ರೂಪಾಯಿಯನ್ನು ಚಲಾವಣೆಗೆ ಬಿಡುವ ಅಥವಾ ಹಿಂತೆಗೆದುಕೊಳ್ಳುವ ವ್ಯವಹಾರವನ್ನು ರಿಸರ್ವ್ ಬ್ಯಾಂಕ್ ನಿರ್ವಹಿಸುತ್ತದೆ. ನಾನು ರಫ್ತು ಮಾಡಿದರೆ, ನನ್ನ ಆದಾಯ ಡಾಲರ್ ಆದರೆ, ನನಗೆ ಅದಕ್ಕೆ ಸಮಾನವಾದ ರೂಪಾಯಿ ದೊರೆಯುತ್ತದೆ. ನಾನು ಆಮದು ಮಾಡಿಕೊಂಡರೆ ಅದಕ್ಕೆ ಡಾಲರ್ ಬೇಕು. ಅದನ್ನು ರೂಪಾಯಿ ಕೊಟ್ಟು ರಿಸರ್ವ್ ಬ್ಯಾಂಕ್‌ನಿಂದ ಕೊಳ್ಳಬೇಕು. ಈ ವ್ಯವಹಾರವನ್ನು ರಿಸರ್ವ್ ಬ್ಯಾಂಕ್ ಮೂಲಕ ಮಾಡಬೇಕು. ನಮ್ಮ ಬೂರ್ಶ್ವಾ

ವ್ಯವಸ್ಥೆಯ ಮಾರುಕಟ್ಟೆಯಲ್ಲಿ ಹೆಚ್ಚಿನ ಹಣದ ಚಲಾವಣೆ ಅಂದರೆ ಸರಕುಗಳ ಬೆಲೆ ಹೆಚ್ಚಾಗುತ್ತದೆ, ಚಲಾವಣೆ ಕಡಿಮೆಯಾದರೆ ಬೆಲೆ ಕುಸಿಯುತ್ತದೆ. ಡಿಎ – ತುಟ್ಟಿಭತ್ಯೆ ನಮಗೆ ಬಂದಾಗ ಮಾರುಕಟ್ಟೆಯಲ್ಲಿ ಪದಾರ್ಥಗಳ ಬೆಲೆ ಏರುವುದು ನಮ್ಮೆಲ್ಲರ ಅನುಭವ. ಬೆಲೆ ಏರಿಕೆ-ಇಳಿತ ವಿಪರೀತವಾಗದಂತೆ ಅರ್ಥನೀತಿಯನ್ನು ನಿರ್ವಹಿಸುವುದು ಹಣಕಾಸು ಮಂತ್ರಿಯವರ ಹಾಗೂ ರಿಸರ್ವ್ ಬ್ಯಾಂಕ್‌ನ ಕೆಲಸ. ಸಾಮಾನ್ಯವಾಗಿ ಬೆಲೆ ಏರಿಕೆಯಿಂದಾಗಿ ಸಾಧಾರಣ ಜನರ ಶೋಷಣೆಯಾಗುತ್ತದೆ. ಬೂರ್ಷ್ವಾ ವ್ಯವಸ್ಥೆ ಈ ಶೋಷಣೆಯನ್ನು, ಬಂಡವಾಳ ಸಂಗ್ರಹದ ಹೆಸರಿನಲ್ಲಿ, ನಿವಾರಿಸಲು ತಾನಾಗೇ ಮುಂದಾಗುವುದಿಲ್ಲ. ಆದರೆ ಸರ್ಕಾರಗಳು ಜವಾಬ್ದಾರಿಯುತವಾಗಿ ವರ್ತಿಸಿದರೆ ಕೇವಲ ವೋಟಿನ ಮೇಲೆ ಮಾತ್ರ ನಿಗಾ ಇಡದಿದ್ದರೆ, ಈ ಏರಿಕೆ ತೀರ ಅಸಹನೀಯವಾಗದಂತೆ ನಿರ್ವಹಿಸಲು ಹೆಣಗಾಡುತ್ತವೆ. ಇಲ್ಲಿ ಸರ್ಕಾರ, ರಿಸರ್ವ್ ಬ್ಯಾಂಕ್ ಬಡ್ಡಿದರವನ್ನು ನಿರ್ಧರಿಸುವುದು, ಒಂದಷ್ಟು ಹೊಸ ನೋಟುಗಳನ್ನು ಅಚ್ಚುಹಾಕಿಸಿ, ಚಲಾಯಿಸುವುದು, ಕೆಲವು ತೆರಿಗೆಗಳನ್ನು ವಿಧಿಸುವುದು, ಹಿಂತೆಗೆದುಕೊಳ್ಳುವುದು ಮುಂತಾದ ಅಸ್ತ್ರಗಳನ್ನು ಪ್ರಯೋಗಿಸುತ್ತವೆ. ಇವನ್ನೆಲ್ಲಾ ವಿಸ್ತೃತವಾಗಿ ಚರ್ಚಿಸಿದರೆ ಈ ಲೇಖನ ತುಂಬ ದೀರ್ಘವಾಗುತ್ತದೆ. ಆಸಕ್ತ ಓದುಗರು ಪ್ರಶ್ನೆ ಕೇಳಿದರೆ ಉತ್ತರಿಸಬಹುದು. ಪ್ರಭಾವ ಕಳೆದ ಎರಡು ವರ್ಷಗಳಿಂದ ನಮ್ಮ ಆಂತರಿಕ ಬೆಲೆ ಪರಿಸ್ಥಿತಿ ವಿಪರೀತ ಹದಗೆಟ್ಟಿದೆ. ಬರೇ ಸಗಟು ವ್ಯಾಪಾರದ ಸೂಚ್ಯಂಕಗಳನ್ನು ಆಧರಿಸಿ, ಪರಿಸ್ಥಿತಿ ಕೆಟ್ಟಿಲ್ಲವೆಂದು ಸರ್ಕಾರ ಕಣ್ಣುಮುಚ್ಚಿ ಕುಳಿತಿತ್ತು. ಆದರೆ ತಿಳಿದವರ ಹಾಗೂ ರಾಜಕೀಯದ ಒತ್ತಡದಿಂದಾಗಿ ಈಗಷ್ಟೆ ಚಿಲ್ಲರೆ ಹಂತದ ಆಹಾರ ಸರಕುಗಳಿಗೆ ಸಂಬಂಧಪಟ್ಟ ಸೂಚ್ಯಂಕಗಳನ್ನು ಪ್ರಕಟಿಸಲಾಗುತ್ತಿದೆ. ಈಗ ನಾವು ಈ ಕ್ಷೇತ್ರದಲ್ಲಿ ಒಂದು ವರ್ಷದಲ್ಲಿ ಶೇಕಡ ೧೨ಕ್ಕೂ ಮೀರುವ ಬೆಲೆ ಏರಿಕೆಯಿಂದ ನರಳುತ್ತಿದ್ದೇವೆ ಎಂಬುದು ಸ್ಪಷ್ಟವಾಗಿದೆ. ಈ ಮಟ್ಟದ ಬೆಲೆ ಏರಿಕೆ ಹಿಂದೆಂದೂ ಇರಲಿಲ್ಲ. ಜನಸಾಮಾನ್ಯರ ಬವಣೆ ಹೇಳತೀರದಾಗಿದೆ. ಮೊನ್ನೆ ಪ್ರಧಾನಿ ಕಳೆದ ಆರು ವರ್ಷದಲ್ಲಿ ಮೊದಲಬಾರಿಗೆ ಪತ್ರಿಕಾಗೋಷ್ಠಿ ನಡೆಸುವಾಗ, ಈ ವಿಷಯ ಒಪ್ಪಿಕೊಂಡರು. (ಅವರಿಗೆ ಆಗಾಗ್ಗೆ ಪತ್ರಿಕಾಗೋಷ್ಠಿ ನಡೆಸಲು ಏಕೆ ಇಷ್ಟವಿಲ್ಲ ಎಂದು ಇದರಿಂದ ತಿಳಿಯಬಹುದು. ಕಸಿವಿಸಿ ಉಂಟುಮಾಡುವ ಪ್ರಶ್ನೆಗಳು ಬರುತ್ತವಲ್ಲ!) ಅವರು ಬರುವ ಡಿಸೆಂಬರ್ ಒಳಗೆ ಬೆಲೆಗಳು ಕಡಿಮೆಯಾಗುವುದೆಂಬ 'ಆಶಯ' ವ್ಯಕ್ತಪಡಿಸಿದರೆ ವಿನಾ ಈ ಸುಪ್ರಸಿದ್ಧ ಅರ್ಥಶಾಸ್ತ್ರಜ್ಞ ಅದನ್ನು ಆಗಿಸಲು ತಾನೇನು ಮಾಡುತ್ತೇನೆ ಎಂದು ಹೇಳಲಿಲ್ಲ. ಅಥವಾ ಏನೂ ಮಾಡುವುದಿಲ್ಲ ಎಂಬ ಅರ್ಥವೇನೋ. ಅರ್ಥಮಂತ್ರಿ ಪ್ರಣವ್ ಮುಖರ್ಜಿ ಮಾನ್ಸೂನ್ ಮಳೆ ಈ ಕೆಲಸ ಮಾಡುತ್ತದೆ ಎಂದಿದ್ದಾರೆ! ನ್ಯಾಯ. ಈಗ ಈ ಸಂದರ್ಭಕ್ಕೂ, ಜನತೆಗೂ, ಮೇಲಿನ ವಿದೇಶೀ ವಿನಿಮಯ ಚರ್ಚೆಗೂ ಸಂಬಂಧವಿದೆ ಎಂದು ಮತ್ತಷ್ಟು ಸ್ಪಷ್ಟವಾಗಿರಬೇಕು.

ದೇಶದ ಒಳಗೆ ಬರುವ ಹಣ, ಹೊರಗೆ ಹೋಗುವ ಹಣಕ್ಕಿಂತ ಹೆಚ್ಚಾದಾಗ, ಆಂತರಿಕವಾಗಿ ರೂಪಾಯಿ ಚಲಾವಣೆ ಹೆಚ್ಚಿದಾಗ, ಬೆಲೆ ಏರುತ್ತದೆ. ಕೇವಲ ಸರಕುಗಳನ್ನು ಕೊಳ್ಳುವುದೆ ಅಲ್ಲದೆ ಬೇರೆ ಕಾರಣಕ್ಕೂ ಹಣ ಒಳಕ್ಕೆ ಬರುತ್ತದೆ. ನಮ್ಮಲ್ಲಿನ ಬಡ್ಡಿದರ ಅವರದೆ ದೇಶದಕ್ಕಿಂತ ಹೆಚ್ಚಿದ್ದಾಗ ವಿದೇಶೀ ಹಣವುಳ್ಳ ಸಂಸ್ಥೆಗಳು, ವ್ಯಕ್ತಿಗಳು, ನಮ್ಮ ದೇಶದ ಬಾಂಡುಗಳಲ್ಲಿ, ಷೇರುಪೇಟೆಯಲ್ಲಿ ತಮ್ಮ ಹಣವನ್ನು ಹೂಡಿ, ಲಾಭ ಮಾಡಿಕೊಳ್ಳುತ್ತಾರೆ. ಮತ್ತು ಸಾಕೆನಿಸಿ, ದಕ್ಕುವ ಲಾಭ ಕಡಿಮೆಯಾಗಿ ತಮ್ಮ ಹಣ ಹಿಂತೆಗೆದುಕೊಂಡಾಗ ಹಣ ಹೊರಕ್ಕೆ ಹೋಗುತ್ತದೆ. ನಮ್ಮ ಷೇರುಪೇಟೆ ಅನುಭವಿಸುತ್ತಿರುವ ತೀವ್ರ ಏರಿಳಿಕೆಗೆ ಇದು ಬಹುಮುಖ್ಯ ಕಾರಣ. ಕೆಲವೊಮ್ಮೆ ಈ ವ್ಯವಹಾರದಲ್ಲಿ ತೊಡಗಿರುವ ಕೆಲವೇ ವ್ಯಕ್ತಿಗಳು ಅಪಾರ ಹಣವನ್ನು ತಾತ್ಕಾಲಿಕವಾಗಿ ಹೂಡಿ, ಅಷ್ಟೇ ವೇಗದಿಂದ ಹಿಂತೆಗೆದುಕೊಂಡು, ರಾತ್ರೋರಾತ್ರಿ ಪರಾರಿಯಾದಾಗ ಇಂಥ ವ್ಯವಹಾರ (ದುರ್ವ್ಯವಹಾರವೆನ್ನಿ) ಅಂತರರಾಷ್ಟ್ರೀಯ ಷೇರುಪೇಟೆಗಳಲ್ಲಿ ಹಲವೆಡೆ ಏಕಕಾಲದಲ್ಲಿ, ಅನಿರೀಕ್ಷಿತವಾಗಿ ಉಂಟಾದಾಗ, ಮಹಾಪ್ರಮಾಣದ ಕುಸಿತ ಉಂಟಾಗಿ, ಅಲ್ಲೋಲಕಲ್ಲೋಲ ಉಂಟಾಗಿ, ಅದರ ಕೆಟ್ಟ ಪರಿಣಾಮ ಜಾಗತಿಕವಾಗಿ ಇದಕ್ಕೆ ಸಂಬಂಧಪಡದ ಜನಸಾಮಾನ್ಯರ ಮೇಲೇ ಆಗುತ್ತದೆ. (ಹೀಗೆ ಬೇಕಾದಾಗ ಒಳಗೆ ಬರಲು, ಹೊರಗೆ ಹೋಗಲು ಅವರಿಗೆ ನಮ್ಮ ಅರ್ಥನೀತಿಯಲ್ಲಿ ಮುಕ್ತ ಅವಕಾಶ ಮಾಡಿಕೊಟ್ಟಿದ್ದೇವೆ. ಕಾರಣ, ನಮಗೆ ವಿದೇಶೀ ವಿನಿಮಯ, ಬಂಡವಾಳ ಬೇಕು ಅಂತ) ಹಾಗೂ ಇಂಥದೊಂದು 'ಪೆಟ್ಟು' ಮಾರುಕಟ್ಟೆಗೆ ಬಿದ್ದಾಗ, ಅದು ರಿಪೇರಿಯಾಗಬೇಕಾದರೆ ತಿಂಗಳುಗಳೇ ಬೇಕಾಗುತ್ತವೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಬೂರ್ಷ್ವಾ ವ್ಯವಸ್ಥೆಯಲ್ಲಿ ಷೇರುಪೇಟೆಯ ಈ ದಳ್ಳಾಳಿ ಊಹಾಪೋಹಗಳ ಸಟ್ಟಾ ವ್ಯವಹಾರ ಜಾಗತಿಕ ಮಟ್ಟದ ಅರ್ಥ ವ್ಯವಸ್ಥೆಯನ್ನು ಹಾಳುಗೆಡವಿದೆ. ಈ ಹಣದ ಹರಿವು ಮತ್ತು ಷೇರುಪೇಟೆಯ ಸೂಚ್ಯಂಕಗಳಿಗೆ ಹೊಕ್ಕಳ ನಂಟಿದೆ. ಪ್ರಜೆಗಳ ಕ್ಷೇಮವನ್ನು ಬಯಸುವ ಸರ್ಕಾರಗಳು ಈ ವ್ಯವಹಾರವನ್ನು ನಿಯಂತ್ರಿಸಿ, ನಿಗಾ ಇಡುವುದು ಅಗತ್ಯ. ಕಾರಣ ಇಲ್ಲಿ ಎಲ್ಲೂ ವಾಸ್ತವ ಸಂಪತ್ತಿನ ಸೋಂಕು ಇಲ್ಲ. ಬರೇ ನೋಟುಗಳ ಚಲಾವಣೆ, ಫೈನಾನ್ಶಿಯಲ್, ಕರೆನ್ಸಿ

## ನಾವೆಲ್ಲ ಒಂದೇ !

ನನ್ನ ಕೈಯೊಳಗಿತ್ತು ಮಂದಾರ ಪುಷ್ಪಗಳ
ಒಂದು ಸುಂದರ ಮಾಲೆ;
ದೇವರಿಗೆ ಅದನರ್ಪಿಸಲು ತೆರಳಿದೆ
ಪೂಜಾಗೃಹದ ಒಳಗೆ.
ಅಲ್ಲಿ ನಾ ಕಂಡದ್ದು ಒಂದಲ್ಲ, ಎರಡಲ್ಲ
ಹತ್ತಾರು ದೇವ ದೇವಿಯರು;
ಮಧ್ಯ ವಿಘ್ನೇಶ್ವರ, ಎಡಕೆ ವೆಂಕಟರಮಣ
ರಾಮ, ಕೃಷ್ಣ, ವೀರಾಂಜನೇಯ;
ಬಲ ಭಾಗದಲಿ ಲಕ್ಷ್ಮಿ, ಶಾರದೆ, ಸರಸ್ವತಿ
ಸ್ಕಂದ, ಶಂಕರ, ಪಾರ್ವತಿ;
ಮಂಟಪದ ಒಳಗೆ ಅರ್ಧನಾರೀಶ್ವರ, ಷಣ್ಮುಗ,
ಅನ್ನಪೂರ್ಣೆ, ಗಾಯತ್ರಿ, ಮೂಕಾಂಬಿಕೆ;
ನೋಡಿ ತಬ್ಬಿಬ್ಬಾದೆ; ಇಷ್ಟೊಂದು ದೇವರಿರೆ
ಯಾರಿಗರ್ಪಿಸಲಿ ನನ್ನ ಮಾಲೆ ?
ನಿಶ್ಚಯಿಸಲಾರದೇ ನಿಂತೆ !
ಕಡೆಗೊಂದು ನಿರ್ಧಾರಕೆ ಬಂದೆ;
ಯಾವ ದೇವಗೆ ಲಭ್ಯವಿದೆಯೋ ಅವನಿಗೇ
ಅರ್ಪಣೆಯಾಗಲಿ ಎಂದು

ಕೈಯಲ್ಲಿ ಮಾಲೆಯನು ಹಿಡಿದು, ಕಣ್ಮುಚ್ಚಿ, ಧ್ಯಾನಿಸಿ,
ಅಪ್ಪಾಲೆ-ತಿಪ್ಪಾಲೆಯಂತೆ ನನ್ನ ಸುತ್ತಲು ನಾನೆ
ಮೂರು ಸಲ ಗರಗರನೆ ತಿರುಗಿ, ಮುಂಬಗ್ಗಿ
ಮಾಲೆಯನು ಅರ್ಪಿಸಿದೆ !
ಯಾವ ದೇವಗೆ ಸಂದಿತೊ ನನ್ನ ಮಂದಾರ ಮಾಲೆ
ಎಂದು ತಿಳಿಯುವ ಕುತೂಹಲ ಹೆಚ್ಚಿ,
ಕಣ್ದೆರೆದು ನೋಡಿದೆ; ನೋಡಿ ಬೆಕ್ಕಸ ಬೆರಗಾದೆ !
ಆಶ್ಚರ್ಯದಿಂ ಮೂಕ ವಿಸ್ಮಿತನಾದೆ !
ಯಾವೊಬ್ಬ ದೇವನಿಗೂ ಸಂದಿರಲಿಲ್ಲ ಹಾರ !
ನೆಲದ ಮೇಲೂ ಬಿದ್ದಿರಲಿಲ್ಲ !
ಅಲ್ಲಿದ್ದ ಎಲ್ಲ ದೇವ ದೇವಿಯರೂ
ತಂತಮ್ಮ ಸ್ಥಾನದಿಂ ಸರಿದು
ಎಲ್ಲರೂ ಗುಂಪಾಗಿ ಪಕ್ಕಪಕ್ಕದಲೆ ನಿಂತು
ಒಟ್ಟಿಗೇ ಅರ್ಪಿಸಿಕೊಂಡಿದ್ದುವು ಮಾಲೆಯನು !!
ಹೊಮ್ಮಿತ್ತು ಅವರ ತುಟಿಗಳಲಿ ತುಂಟು ನಗೆ !
ದೊರಕಿತ್ತು ನನಗೆ ಅವರ ಸ್ಪಷ್ಟ ಸಂದೇಶ;
''ಹೇ, ಅಜ್ಞಾನಿ ! ನಾವೆಲ್ಲ ಒಂದೇ !''



ಬಿ. ವಿ. ಸುಬ್ಬರಾವ್
ನಂ. ೨೨೦೩/ಎಫ್, 'ಶ್ರೀನಿಧಿ', ೨೩ನೇ ಕ್ರಾಸ್, ೬ನೇ ಮುಖ್ಯರಸ್ತೆ ಹತ್ತಿರ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ಮಾರುಕಟ್ಟೆ. ಆದರೂ ವಾಸ್ತವ ಸಂಪತ್ತಿನ ಮಾರುಕಟ್ಟೆಯ ಮೇಲೆ ಪರಿಣಾಮ ಬೀರುತ್ತವೆ.

ವಿದೇಶೀ ಮೂಲದ ಹಣಕಾಸು ಸಂಸ್ಥೆಗಳು ಈ ವಹಿವಾಟಿನಲ್ಲಿ ಭಾಗವಹಿಸುವುದನ್ನು ಸ್ಪಷ್ಟವಾಗಿ ಕಾಣಬಹುದು. ಕಾರಣ ಅವುಗಳಲ್ಲಿ ಪಾರದರ್ಶಕತೆ ಇದೆ. ಲೆಕ್ಕಕ್ಕೆ ಸಿಗುತ್ತದೆ. ಮೂಲ ಗೊತ್ತಿರುತ್ತದೆ. ಆದರೆ ಅಪಾರವಾದ ಕಳ್ಳ ಹಣ ಒಳಬರುತ್ತಿರುವುದು ಸ್ಪಷ್ಟವಿದೆ. ಈ ಕಳ್ಳ ಹಣದ ಪ್ರಭಾವ ಮಾರುಕಟ್ಟೆಗೆ ಮಾರಕ; ಮಾರುಕಟ್ಟೆಯ ಹೊರಗಿನ - ಒಳಗಿನ ಕೆಲವು ಕಳ್ಳರಿಗೆ ಲಾಭಕರ. ಇವುಗಳ ಮೂಲ ಅದೃಶ್ಯಮಯ. ಸಂಸ್ಥೆಗಳು ಒಳಕ್ಕೆ ತರುವ ಹಣವನ್ನು ಎಫ್‌ಐಐ - ಫಾರಿನ್ ಇನ್‌ಸ್ಟಿಟ್ಯೂಷನಲ್ ಇನ್‌ವೆಸ್ಟ್‌ಮೆಂಟ್ – ವಿದೇಶೀ ಸಂಸ್ಥೆಗಳ ಹೂಡಿಕೆ ಎಂದೂ, ಇತರ ಹಣವನ್ನು ಎಫ್‌ಪಿಐ – ಫಾರಿನ್ ಪೋರ್ಟ್‌ಫೋಲಿಯೋ ಇನ್‌ವೆಸ್ಟ್‌ಮೆಂಟ್ ಹಲವು ಷೇರುಗಳ ಕಂತೆಯಲ್ಲಿ ಹೂಡಿಕೆ – ಎಂದೂ ಹೇಳುತ್ತಾರೆ. ಈ ಎರಡನೆಯ ಎಫ್‌ಪಿಐ ಮೇಲೆ ನಿಗಾ ಇಡಬೇಕು ಎನ್ನುತ್ತಾನೆ ಜಾನ್ ಟೋಬಿನ್ ಎಂಬ ಅಮೇರಿಕಾದ ಬೂರ್ಷ್ವಾ ಅರ್ಥಶಾಸ್ತ್ರಜ್ಞ. ಒಂದು ಕಂಪನಿಯ ಷೇರುದಾರರು ತಮ್ಮ ಷೇರಿನ, ಅರ್ಥಾತ್ ಕಂಪನಿಯ ಬೆಲೆ ಇಷ್ಟು ಎಂದು ಭಾವಿಸುತ್ತಾರೆ. ಮಾರುಕಟ್ಟೆ ಇದು ಅದಕ್ಕಿಂತ ಹೆಚ್ಚು ಅಥವಾ ಕಡಿಮೆ ಎಂದು ಲೆಕ್ಕಹಾಕಿ, ಹೂಡಿಕೆದಾರರು ಅದರಂತೆ ಆ ಮಾರುಕಟ್ಟೆಯ ಷೇರನ್ನು ಕೊಳ್ಳುತ್ತಾರೆ ಅಥವಾ ಮಾರುತ್ತಾರೆ. ಅದೇ ಫಿನಾನ್ಷಿಯಲ್‌ನ ಮೂಲ ಕಥೆ – ಕರೆನ್ಸಿಗಳೂ ಸರಕುಗಳಾಗುವ ಚಮತ್ಕಾರ – ಅವುಗಳ ಬೆಲೆ ಮತ್ತು ಮೌಲ್ಯ ಹಾಗೂ ಇವುಗಳ ನಡುವಿನ ಮಿಗುತಾಯ ಲಾಭ – ನಿವ್ವಳ ಲಾಭ – ಸರ್‌ಪ್ಲಸ್ ವ್ಯಾಲ್ಯೂ. ಟೋಬಿನ್ ಹೂಡಿಕೆದಾರರಿಗೆ ಒಂದಿಷ್ಟು ಮಾರ್ಗದರ್ಶನ ನೀಡಲು ಹೀಗೆ ಹೇಳಿದ್ದು. ಆದರೆ ಅಂತರರಾಷ್ಟ್ರೀಯ ಅರ್ಥ ಶಾಸ್ತ್ರಜ್ಞರು ಹಾಗೂ ಹಣಕಾಸು ತಜ್ಞರು ಅವನ ತಿಳುವಳಿಕೆಯನ್ನು ಬಳಸಿಕೊಂಡು ಟೋಬಿನ್ ಟ್ಯಾಕ್ಸ್ – ಎನ್ನುವ ಒಂದು ಬಗೆಯ ತೆರಿಗೆಯನ್ನು ಈ ವ್ಯವಹಾರದ ಮೇಲೆ ವಿಧಿಸಬೇಕು. ಅದು ತೀರ ಅಲ್ಪ ಪ್ರಮಾಣದ್ದು – ಶೇಕಡ ೦.೦೧ ಅನ್ನುವಷ್ಟು. ಪ್ರತಿದಿನ ಅರ್ಬುದ ಕೋಟಿ ವ್ಯವಹಾರ ವಾಗುವ ಷೇರುಪೇಟೆಯಲ್ಲಿ ಈ ಅಲ್ಪಪ್ರಮಾಣದ ತೆರಿಗೆಯೂ ವಿಪರೀತ ಹಣ ಸಂಗ್ರಹಣೆ ಮಾಡುತ್ತದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಈ ಸಂಗ್ರಹವಾದರೆ, ಷೇರುಪೇಟೆಯ ಅನಾಹುತದಲ್ಲಿ ಕಂಗಾಲಾಗುವ ಹಿಂದುಳಿದ ರಾಷ್ಟ್ರಗಳಿಗೆ, ಈ ತೆರಿಗೆಯ ಸಂಗ್ರಹದಿಂದ ಒಂದಿಷ್ಟು ತಾತ್ಕಾಲಿಕ ನೆರವು ನೀಡಬಹುದು ಈ ಹಣ ಬಳಸಿ ಎಂಬುದು ಈ ತೆರಿಗೆಯಿಂದ ಸುಮಾರು ೩೫ ಮಿಲಿಯ ಡಾಲರ್ ಸಂಗ್ರಹವಾಗಬಹುದು ಎಂದು ಹೇಳುತ್ತಾರೆ. ಚಿದಂಬರಂ ಅವರು ಅರ್ಥಮಂತ್ರಿಯಾಗಿದ್ದಾಗ, ಇಂಥದೊಂದು ತೆರಿಗೆ ವಿಧಿಸಲು ಸಲಹೆ ಮಾಡಿದಾಗ ಇಡೀ ಷೇರುಪೇಟೆ ವಿರೋಧಿಸಿತು. ಆ ಸಲಹೆಯನ್ನು ಲೋಕಸಭೆಯಲ್ಲಿ ಮಂಡಿಸಿದಾಗ ಅದು ಸ್ವೀಕರಿಸುವ ಮೊದಲೆ ಷೇರುಪೇಟೆ ಒಂದೇ ದಿನದಲ್ಲಿ ಅಪಾರವಾಗಿ ಕುಸಿಯಿತು. ನಂತರ ಆ ಸಲಹೆಯನ್ನು ಹಿಂತೆಗೆದುಕೊಳ್ಳಲಾಯ್ತು. ಅದೇಕೆ ? ಅದೇನೂ ದೊಡ್ಡ ತೆರಿಗೆಯಲ್ಲ. ಅವರೇ ಹೇಳಿದಂತೆ ತೆರಿಗೆ ಸಂಗ್ರಹವೇ ಅವರ ಮೂಲ ಉದ್ದೇಶವಾಗಿರಲಿಲ್ಲ. ಆದರೆ ಅದು ಕಳ್ಳಹಣದ ಜಾಡನ್ನು ಬಯಲುಮಾಡಬಹುದಿತ್ತು ಎಂಬುದೆ ಚಿದಂಬರಂ ಅವರ ಉದ್ದೇಶವಾಗಿತ್ತು, ಅದೇ ಅದರ ವಿರೋಧಕ್ಕೆ ಕಾರಣವಾಗಿತ್ತು. ನಮ್ಮ ಹೋಟೆಲಿನ ಬಡ ಇಡ್ಲಿಯ ಬೆಲೆಗೂ ಈ ಎಲ್ಲ ವ್ಯವಹಾರಕ್ಕೂ ಎಷ್ಟೊಂದು ಗಹನ ಸಂಬಂಧವಿದೆ ಎಂದು ಈಗ ಅಚ್ಚರಿಪಡಬಹುದಲ್ಲವೆ ?

ಕಳೆದ ಮೂರು ವರ್ಷಗಳಲ್ಲಿ ವಿದೇಶೀ ಹೂಡಿಕೆ, ಷೇರುಪೇಟೆಯ ಸೂಚ್ಯಂಕದಲ್ಲಿ ಏರುಪೇರು ಮುಂತಾದುವುಗಳನ್ನು ತೋರಿಸುವ ಅಂಕಿಸಂಖ್ಯೆಯನ್ನು ಇಲ್ಲಿ ನೀಡಲಾಗಿದೆ. ಈಗ ಮೂಲವರಿಯಲಾಗದ, ಲೆಕ್ಕಕ್ಕೆ ಸಿಕ್ಕದ ಕಳ್ಳಹಣದ ವ್ಯವಹಾರದಲ್ಲಿ ಪ್ರವೇಶಿಸುತ್ತಿರಬಹುದು ಎನ್ನುವ ಅನುಭವವಾಗುತ್ತಿದೆ. 'ಇಕನಾಮಿಕ್ ಮತ್ತು ಪೊಲಿಟಿಕಲ್ ವೀಕ್ಲಿ' ಸಂಪಾದಕೀಯ ಈಗ ಒಂದಿಷ್ಟು ಟೋಬಿನ್ ತೆರಿಗೆ ವಿಧಿಸಲು ಸರಿಯಾದ ಸಮಯ ಎಂದು ಹೇಳಿದೆ. ೨೦೧೦ ಮೇ, ೧೫-೨೧ರ ಆ ಪತ್ರಿಕೆಯ ಸಂಪಾದಕೀಯವನ್ನು ಗ್ರಹಿಸಲು, ಈ ವಿಷಯದ ಬಗ್ಗೆ ತಿಳಿದು ಕೊಳ್ಳಲು ಕುತೂಹಲವಿರುವವರಿಗೆ, ಈ ಟಿಪ್ಪಣಿ ಸಹಾಯಕವಾಗಬಹುದು. ಷೇರುಮಾರುಕಟ್ಟೆ ವಿಪರೀತ ಏರಿದರೆ ಸಂದೇಹಿಸಬೇಕು. ಅದು ಕುಸಿದರೆ ನಮಗೇನು, ಅನ್ನುವಂತಿಲ್ಲ. ಎರಡೂ ಸಮತೋಲನ ತಪ್ಪಿದರೆ ನಮಗೆ ಕಷ್ಟವೆ.

**ಎಫ್‌ಪಿಐ ಮತ್ತು ಷೇರು ಸೂಚ್ಯಂಕ ಹಾಗೂ ರೂಪಾಯಿ ಬೆಲೆ ತೋರಿಸುವ ಪಟ್ಟಿ**

| ಕಾಲ | ಎಫ್‌ಪಿಐ (ಬಿಲಿಯನ್ ಡಾಲರ್) ಒಳಗೆ | ಹೊರಗೆ | ನಿವ್ವಳ | ನಿಫ್ಟಿ ಷೇರು ಸೂಚ್ಯಂಕ | ಒಂದು ಅಮೇರಿಕನ್ ಡಾಲರಿಗೆ ರೂಪಾಯಿ ಬೆಲೆಯಲ್ಲಿ ಆದ ವ್ಯತ್ಯಾಸ |
|---|---|---|---|---|---|
| ಏಪ್ರಿಲ್-ಡಿಸೆಂಬರ್ ೨೦೦೭ | ೧೫೯.೬ | ೧೨೮.೪ | + ೩೧.೨೬ | ೩೯೪೭ರಿಂದ ೫೯೬೪ಕ್ಕೆ | ೪೨.೧೫ರಿಂದ ೩೯.೧೪ |
| ಏಪ್ರಿಲ್-ಡಿಸೆಂಬರ್ ೨೦೦೮ | ೧೧೦.೦ | ೧೨೧.೩ | - ೧೧.೩೬ | ೪೯೦೨ರಿಂದ ೨೯೫೯ಕ್ಕೆ | ೪೦.೦೨ರಿಂದ ೪೮.೬೩ |
| ಏಪ್ರಿಲ್-ಡಿಸೆಂಬರ್ ೨೦೦೯ | ೧೧೮.೭ | ೯೫.೧ | +೨೩.೬ | ೩೪೭೪ರಿಂದ ೫೨೦೧ಕ್ಕೆ | ೪೯.೯ರಿಂದ ೪೬.೫ |

**ಸೂಚನೆ :** ಎಫ್‌ಪಿಐ ನಿವ್ವಳ + ಅಥವಾ – ಎನ್ನುವುದನ್ನು ಅವಲಂಬಿಸಿ ನಿಫ್ಟಿ ಏರುತ್ತದೆ ಅಥವಾ ಇಳಿಯುತ್ತದೆ ಹಾಗೂ ರೂಪಾಯಿ ಬೆಲೆ ಏರುತ್ತದೆ ಅಥವಾ ಇಳಿಯುತ್ತದೆ ಎಂದು ಗಮನಿಸಿ. ರೂಪಾಯಿ ಬೆಲೆ ಏರಿದರೆ ನಮ್ಮ ರಫ್ತು ಕಡಿಮೆಯಾಗುತ್ತದೆ. ಆಮದಿನ ಬೆಲೆ ಹೆಚ್ಚುತ್ತದೆ. ಅದು ಕಡಿಮೆ ಆದರೆ ಇದಕ್ಕೆ ವಿರುದ್ಧವಾದ ಪರಿಣಾಮ ಆಗುತ್ತದೆ. ಒಂದು ಡಾಲರಿಗೆ ೫೦ ರೂಪಾಯಿ ಸಿಗುತ್ತಿದ್ದಾಗ ನಮ್ಮ ರಫ್ತಿನ ಸರಕುಗಳ ಬೆಲೆ ಒಂದಿಷ್ಟು ಕಾಲ ಏರುಪೇರಿಲ್ಲದ ತಟಸ್ಥವಾಗಿದ್ದರೆ, ಒಂದಿಷ್ಟು ಪ್ರಮಾಣದ ಸರಕನ್ನು ವಿದೇಶೀ ವರ್ತಕ ಆಮದು ಮಾಡಿಕೊಳ್ಳುತ್ತಾನೆ. ಅದೇನಾದರೂ ೫೫ ರೂ. ಆದರೆ ಆಗ ಇನ್ನಷ್ಟು ಹೆಚ್ಚುತ್ತದೆ. ಈ ಆಮದು ಶೇಕಡ ೧೦ರಷ್ಟು ಅಂದರೆ ೪೫ಕ್ಕೆ ಇಳಿದರೆ ಆಗ ಕೊಳ್ಳುವುದನ್ನು ಕಡಿಮೆ ಮಾಡುತ್ತಾನೆ – ಶೇಕಡ ೧೦ರಷ್ಟು. ಆಗ ಏನಾಗುತ್ತದೆ ? ಇನ್ನಷ್ಟು ಹೆಚ್ಚು ಉತ್ಪಾದಿಸಿ, ಇನ್ನಷ್ಟು ರಫ್ತು ಮಾಡಬಹುದು. ಹೆಚ್ಚು ಡಾಲರ್ ಸಂಪಾದಿಸುತ್ತೇವಾದ್ದರಿಂದ ನಮ್ಮ ಆಂತರಿಕ ಉತ್ಪಾದನೆಯನ್ನು ತಾಂತ್ರಿಕವಾಗಿ ಹಾಗೂ ಗುಣಮಟ್ಟ ಹೆಚ್ಚಿಸಿ ಕೊಳ್ಳುವಂತೆ ಹೊಸ ಯಂತ್ರಗಳನ್ನು ಕೊಂಡು, ಅಭಿವೃದ್ಧಿ ಪಡಿಸಿಕೊಂಡು – ಹೀಗೆಲ್ಲಾ ಸರಪಣಿ ಮುಂದುವರಿಯುತ್ತದೆ. ಅದೇ ಡಾಲರ್ ಬೆಲೆ ಹೆಚ್ಚಿದರೆ ಇದರ ವಿರುದ್ಧ ಗತಿ. ಇದು ಥಿಯರಿ, ಸಿದ್ಧಾಂತ. ವಾಸ್ತವದಲ್ಲೂ ಭಾಗಶಃ ನಿಜ. ನಮ್ಮಂತೆಯೆ ಆಮದು ಮಾಡಿ ಕೊಳ್ಳುವವರೂ ಇದಕ್ಕೆ ತಕ್ಕ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾರಾಗಿ ಸ್ಥಿರವಾದ ಹೆಚ್ಚಿನ ರಫ್ತು ಮಾಡಬೇಕಾದರೆ ನಾವು ಉತ್ಪಾದನೆಯ ಗುಣಮಟ್ಟವನ್ನು ಹೆಚ್ಚಿಸಿ, ಉತ್ಪಾದನಾ ವೆಚ್ಚ ಕಡಿಮೆ ಮಾಡಿ ಅಂತರರಾಷ್ಟ್ರೀಯ ಮಾರುಕಟ್ಟೆಯ ಪೈಪೋಟಿಯಲ್ಲಿ ಜಯಿಸಬೇಕು. ಬರೇ ವಿದೇಶೀ ವಿನಿಮಯದ ದರ ಸಾಲದು.

ಮೇಲೆ ಹೇಳಿದ ರಾಜಕೀಯದ ಬಗ್ಗೆ ಒಂದೆರಡು ಮಾತು. ಚೀನಾ ಕೃತಕವಾಗಿ ತನ್ನ ನಾಣ್ಯದ - ಕರೆನ್ಸಿಯ ಬೆಲೆಯನ್ನು ಕಡಿಮೆ ಇಟ್ಟುಕೊಂಡಿದೆ. ಇದರಿಂದ ಅದರ ಸರಕು ಸುಲಭ ಬೆಲೆಯದು ಎಂದೆನಿಸುತ್ತದೆ. ಅದು ವಿದೇಶೀ ಬಂಡವಾಳಕ್ಕೆ ಯಾವುದೇ ಕಠಿಣ ನಿಯಮಗಳನ್ನು ಒಡ್ಡದೆ ಬಾಗಿಲು ತೆರೆದಿದೆ. ಅವರು ನಡೆಸುವ ಉದ್ಯಮಗಳಲ್ಲಿ ಕಾರ್ಮಿಕ ಹಕ್ಕುಗಳನ್ನು ಕಾಯ್ದುಕೊಂಡಿಲ್ಲ, ತನ್ನದೆ ಉದ್ಯಮಗಳಲ್ಲಿ ತನ್ನದೆ ಕಾರ್ಮಿಕರಿಗೆ ಕಡಿಮೆ ಕೂಲಿ ನೀಡುತ್ತದೆ. ಅಮೇರಿಕಕ್ಕೆ ಒಂದು ಗುಣಮಟ್ಟ, ಅಭಿವೃದ್ಧಿಶೀಲ, ಹಿಂದುಳಿದ ರಾಷ್ಟ್ರಗಳಿಗೆ ಬೇರೊಂದು ಗುಣಮಟ್ಟದ ಸರಕುಗಳನ್ನು ತಯಾರಿಸುತ್ತದೆ. ನಮ್ಮ ಹಾಗೂ ಕೆಲವು ದೇಶಗಳಿಗೆ ತನ್ನ ಉತ್ಪಾದನಾ ವೆಚ್ಚಕ್ಕಿಂತ ಕಡಿಮೆ ಬೆಲೆಯಲ್ಲಿ ರಫ್ತು ಮಾಡುತ್ತದೆ. ಇದಾವುದನ್ನೂ ವಿಶ್ವವ್ಯಾಪಾರ ಸಂಸ್ಥೆ ಒಪ್ಪುವುದಿಲ್ಲ, ಆದರೂ ಅದರ ವಿರುದ್ಧ ಏನೂ ಮಾಡದಿರುವುದು ಅಸಹಾಯಕತೆ ಮಾತ್ರವಲ್ಲ, ಅದರದೆ ರಾಜಕೀಯವಿದೆ. ಪಶ್ಚಿಮದ ಹಲವಾರು ರಾಷ್ಟ್ರಗಳೂ ಹೀಗೆ ಉತ್ಪಾದನಾ ಬೆಲೆಗಿಂತ ಕಡಿಮೆ ಬೆಲೆಗೆ ಮಾರುತ್ತವೆ. ಇದನ್ನು 'ಡಂಪಿಂಗ್' ಎನ್ನುತ್ತಾರೆ. ೨೦೦೦ ದಶಕದ ಮೊದಲ ಭಾಗದಲ್ಲಿ ನಮ್ಮ ರೇಷನ್ ಅಕ್ಕಿಯ ಬೆಲೆಗಿಂತ ಕಡಿಮೆ ಬೆಲೆಯಲ್ಲಿ ನಮ್ಮ ಸರ್ಕಾರ ಅಕ್ಕಿಯನ್ನು ರಫ್ತು ಮಾಡಿದ್ದು ಇಂಥದೆ. ಹೀಗೆ ಅಂತರರಾಷ್ಟ್ರೀಯ ವಾಣಿಜ್ಯಕ್ಕೆ ಸಂಬಂಧಪಟ್ಟ ಅರ್ಥಶಾಸ್ತ್ರವಲ್ಲದೆ ರಾಜಕೀಯ, ರಾಯಭಾರ ನೀತಿಗಳನ್ನು ಚರ್ಚಿಸಬೇಕಾಗುತ್ತದೆ. ರಾಜಕೀಯವಲ್ಲದ ಅರ್ಥಶಾಸ್ತ್ರವಿಲ್ಲ. ಅದಕ್ಕೆ ಪೊಲಿಟಿಕಲ್ ಎಕಾನಮಿ ಎನ್ನುವುದು. ಛೇಂಬರ್ ಆಫ್ ಕಾಮರ್ಸ್‌ನವರು ಸರ್ಕಾರಕ್ಕೇಕೆ ಅರ್ಥಚಿಂತೆ, ಅದನ್ನು ನಮಗೆ ಬಿಡಿ ಎಂದರೆ ಅರ್ಥ ರಾಜಕೀಯ ಪ್ರಕ್ರಿಯೆಯಿಂದ ನಮ್ಮ ವಾಣಿಜ್ಯಲೋಕದ ಮೇಲೆ ಸಾಮಾಜಿಕ ಒತ್ತಡ, ಹಿಡಿತ ತರಬೇಡಿ, ಸೂರೆ ಹೊಡೆಯಲು ನಮಗೆ ಮುಕ್ತ ಅವಕಾಶ ಬೇಕು ಅಂತ. ಆದರೆ ಅವರ ಹೆಸರೇ ಹೇಳುವಂತೆ ಅವರದು ವಾಣಿಜ್ಯಲೋಕ, ಅರ್ಥಶಾಸ್ತ್ರವಲ್ಲ.

ಕೆ. ಎಸ್. ಪಾರ್ಥಸಾರಥಿ
೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂ. - ೫೬೨ ೧೫೭



ನಭಾವಲೋಕನ

# ಚಿಕ್ಕ ಚಂದ್ರ ?

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

**ಹು**ಣ್ಣಿಮೆ ಎಂದರೆ ದೊಡ್ಡದಾಗಿ ಕಾಣುವ ಪೂರ್ಣ ಚಂದ್ರ ಎಂಬುದು ಹೊಸ ವಿಷಯವೇನಲ್ಲ. ಆದರೂ ಆಗೊಮ್ಮೆ ಈಗೊಮ್ಮೆ ಅತಿ ದೊಡ್ಡ ಚಂದ್ರ ಎಂಬ ಸುದ್ದಿಗಳು ಪ್ರಕಟವಾಗುತ್ತಿರುತ್ತವೆ. (ಸುದ್ದಿ ಅಮೆರಿಕಾದಿಂದ ಬಂದಿದ್ದಾದರೆ ಮುಖಪುಟದಲ್ಲಿಯೇ ಬರಬಹುದು.) ಇದಕ್ಕೆ ಮುಖ್ಯ ಕಾರಣ ಚಂದ್ರ ಭೂಮಿ ನಡುವಿನ ಅಂತರ. ಇದು ದಿನದಿನಕ್ಕೂ ವ್ಯತ್ಯಾಸವಾಗುತ್ತಿರುತ್ತದೆ. ಕೆಲವೊಮ್ಮೆ ಚಂದ್ರ ಅತಿ ಸಮೀಪದಲ್ಲಿರಬಹುದು; ಅಂದು ಹುಣ್ಣಿಮೆಯಾದರೆ ಸಹಜವಾಗಿ ದೊಡ್ಡ ಗಾತ್ರದ ಚಂದ್ರ ಕಾಣುವುದು. ಆದರೆ ಈ ಬಗೆಯ ವ್ಯತ್ಯಾಸವನ್ನು ಬರಿಗಣ್ಣು ಗುರುತಿಸಲಾರದು. ಈ ತಿಂಗಳು ಇದರ ಪರಿಶೀಲನೆಗೆ ಒಂದು ಅವಕಾಶವಿದೆ. ಹುಣ್ಣಿಮೆ ಎಂಬ ಘಟನೆ ೨೪ರ ರಾತ್ರಿ ೧೦:೩೫ಕ್ಕೆ ನಡೆಯುತ್ತದೆ. ಅದಾದ ಹನ್ನೆರಡು ಗಂಟೆಗಳಲ್ಲಿ ಭೂಮಿ - ಚಂದ್ರರ ದೂರ ಗರಿಷ್ಠವಾಗುತ್ತದೆ. ಅಂದರೆ ಅಂದು ನಾವು ಕಾಣಲಿರುವುದು ಅತಿ ಚಿಕ್ಕ ಚಂದ್ರ. ಇದೀಗ ಮುಂದಿನ ಪ್ರಶ್ನೆ. ೨೪ರ ಚಂದ್ರನನ್ನು ನೋಡಿ ಅದು ಅತಿ ಚಿಕ್ಕ ಚಂದ್ರ ಎಂದು ಗುರುತಿಸಬಲ್ಲಿರಾ ? ಕಳೆದ ತಿಂಗಳುಗಳ ಹುಣ್ಣಿಮೆಗೂ ಅಂದಿಗೂ ವ್ಯತ್ಯಾಸವಿರುವುದನ್ನು ಬರಿಗಣ್ಣಿನಿಂದಲೇ ಪತ್ತೆ ಮಾಡಬಲ್ಲಿರಾ ?

ಭೂಮಿ - ಚಂದ್ರರ ದೂರದ ವ್ಯತ್ಯಾಸ ಹುಣ್ಣಿಮೆಯಲ್ಲಿ ಗರಿಷ್ಠವಾಗಿರುವುದು ಎಂಬ ಕಾರಣದಿಂದಲೇ ಈ ತಿಂಗಳ ಅಮಾವಾಸ್ಯೆಯ ಆಸುಪಾಸಿನಲ್ಲಿ ಚಂದ್ರ - ಭೂಮಿ ದೂರ ಕನಿಷ್ಠವಾಗಿರುತ್ತದೆ. ಇದನ್ನು ಗುರುತಿಸಲು ಭರತ - ಇಳಿತಗಳೊಂದೇ ಸಾಧನ; ಆದರೆ ಮುಂಗಾರಿನ ಅಬ್ಬರದಲ್ಲಿ ಇದೂ ಅಡಗಿಹೋಗುತ್ತದೆ.




ಕಳೆದ ತಿಂಗಳಲ್ಲಿ ಕಾಣುತ್ತಿದ್ದ ಮೂರು ಗ್ರಹಗಳ ಜೊತೆಗೆ ಈಗ ಬುಧವೂ ಸೇರುತ್ತದೆ. ೭ರಂದು ಗರಿಷ್ಠ ಕೋನೋನ್ನತಿ; ಹುಡುಕಲು ಒಳ್ಳೆಯ ಅವಕಾಶ. ಗ್ರಹಗಳ ಚಲನೆಯ ಪರಸ್ಪರ ವೇಗ ಭಿನ್ನ ಎಂದು ತಿಳಿಯಲು ಈಗ ಒಳ್ಳೆಯ ಅವಕಾಶ. ನಾಲ್ಕೂ ಗ್ರಹಗಳು ದಿಗಂತದ ಅಂಚಿನಲ್ಲೇ ಇರುತ್ತವೆ. ಆದರೆ ಅವುಗಳ ನಡುವಿನ ಅಂತರಗಳು ದಿನದಿನಕ್ಕೂ ಬದಲಾಗುತ್ತಿರುತ್ತವೆ. ತಿಂಗಳ ಕೊನೆಗೆ ಶನಿ ಸಂಧ್ಯಾಪ್ರಕಾಶದಲ್ಲಿ ಕಳೆದೇ ಹೋಗುತ್ತದೆ. ಇದೇ ಅನುಭವ ಬುಧ ಗ್ರಹದ ವೀಕ್ಷಣೆಗೆ ಆಗುವುದು ತಿಂಗಳ ಮೊದಲ ವಾರದಲ್ಲಿ. ಒಟ್ಟಿನಲ್ಲಿ ಹೇಳುವುದಾದರೆ ಖಚಿತವಾಗಿ ನೋಡಲು ಸಿಗುವ ಗ್ರಹ ಶುಕ್ರ ಮಾತ್ರ ಎನ್ನಬಹುದು. ೨೦ರಂದು ಇದು ಗರಿಷ್ಠ ಎತ್ತರದಲ್ಲಿ ಕಾಣುವುದು ವಿಶೇಷ. ಸಿಂಹದಿಂದ ಕನ್ಯಾರಾಶಿಗೆ ಸಾಗುವ ಶುಕ್ರದ ಚಲನೆಯನ್ನು ಗುರುತಿಸಬಹುದು. ೧೩ರಂದು ಚಂದ್ರ ಈ ಗುಂಪಿಗೆ ಸೇರಿದಾಗ ಐದು ಸೌರಮಂಡಲದ ಕಾಯಗಳನ್ನು ಒಟ್ಟಿಗೇ ನೋಡುವ ಅವಕಾಶವಿದೆ.



೧೩ರ ಸಂಜೆ ಬುಧ, ಶುಕ್ರ ಮಂಗಳ ಮತ್ತು ಶನಿ

ಗುರು ಗ್ರಹ ನಡುರಾತ್ರಿಗೆ ಮುನ್ನ ಉದಯಿಸುತ್ತದೆ. ಬೆಳಗಿನ ಜಾವ ನೋಡಬಹುದು.

ಆಗಸ್ಟ್ ಎಂದರೆ ಪರ್ಸಿಯೈಡ್ಸ್ ಉಲ್ಕಾ ವೃಷ್ಟಿ. ೧೨ರಂದು ಗರಿಷ್ಠ ಚಟುವಟಿಕೆ. ಸ್ವಿಫ್ಟ್-ಟಟಲ್ ಎಂಬ ಧೂಮಕೇತುವಿನ ತುಣುಕುಗಳು ಇವು. ಪ್ರತಿವರ್ಷ ತಪ್ಪದೇ ವೃಷ್ಟಿ ಉಂಟಾಗುತ್ತಿದೆ. ಗಂಟೆಗೆ ಸುಮಾರು ೬೦ ಉಲ್ಕೆಗಳು ಕಾಣುವುವು. ಚಂದ್ರನ ಬೆಳಕೂ ಕಡಿಮೆ ಇರುವುದರಿಂದ ನೋಡಲು ಒಳ್ಳೆಯ ಅವಕಾಶ. ಆದರೆ ಮೋಡಗಳು ಬಿಡುವು ಕೊಡಬೇಕಷ್ಟೆ.

ಮೋಡಗಳು ಬಿಡುವು ಕೊಟ್ಟಾಗ ನೋಡಲೇ ಬೇಕಾದದ್ದು ಆಕಾಶಗಂಗೆಯನ್ನು. ವೃಶ್ಚಿಕ - ಧನುರಾಶಿಗಳ ಭಾಗದಲ್ಲಿ ತೆಳ್ಳನೆಯ ಬಿಳಿಯ ಮೋಡದ ಹಾಗೆ ಕಾಣುವುದು. ಇದು ಮಳೆ ಸುರಿಸುವ ಅಥವಾ ಸೂರ್ಯನ ಸುತ್ತ ಗೂಡು ಕಟ್ಟುವ ಭೂಮಿಯ ಮೋಡವಲ್ಲ ಎಂದು ತಿಳಿಯಲು ಒಂದೆರಡು ಗಂಟೆ ಕಾಯಬೇಕು. ಉತ್ತರದ ಸಪ್ತರ್ಷಿ ಮಂಡಲ, ದಕ್ಷಿಣದ ತ್ರಿಶಂಕು, ನೆತ್ತಿಯಲ್ಲಿ ಸಿಂಹ ರಾಶಿ ಇವನ್ನು ಸ್ಫುಟವಾಗಿ ಗುರುತಿಸಬಹುದು. ನೆತ್ತಿಯಿಂದ ಪಶ್ಚಿಮಕ್ಕೆ ಕಾಣುವ ಎರಡು ಪ್ರಖರ ನಕ್ಷತ್ರಗಳು ಸ್ವಾತಿ (ಕೆಂಪು ಬಣ್ಣದ್ದು) ಮತ್ತು ಚಿತ್ತಾ (ನೀಲಿ ಬಣ್ಣದ್ದು). ವಾಯವ್ಯ ದಿಕ್ಕಿನಲ್ಲಿ ಮೂರು ನಕ್ಷತ್ರಗಳು ಸಮತಲ ತ್ರಿಕೋಣಾಕಾರದಲ್ಲಿವೆ. ತೆಳ್ಳನೆಯ ಮೋಡವಿದ್ದರೂ ಇವನ್ನು ಗುರುತಿಸಬಹುದು. ಶ್ರವಣ (ಆಲ್ಟೇರ್, ಗರುಡ ಪುಂಜದ್ದು), ಅಭಿಜಿತ್ (ವೇಗಾ, ವೀಣಾ ಪುಂಜದ್ದು) ಮತ್ತು ಹಂಸಾಕ್ಷಿ (ದೆನೆಬ್, ರಾಜಹಂಸ ಪುಂಜದ್ದು) – ಇವೇ ಆ ಮೂರು ನಕ್ಷತ್ರಗಳು. ಅಭಿಜಿತ್ ಮತ್ತು ಶ್ರವಣ ಮೂಲಕ ಆಕಾಶಗಂಗೆಯ ಒಂದು ಕ್ಷೀಣ ಶಾಖೆ ಹರಿಯುತ್ತದೆ ಎಂದು ಗಮನಿಸಬಹುದು.

**ಖಗೋಳ ದಿನಚರಿ**

೧ ಮಂಗಳ - ಶನಿ ನಡುವೆ ಕನಿಷ್ಠ ಕೋನ *
೩ ಚಾಂದ್ರಮಾಸದ ಕೊನೆಯ ಪಾದ
೭ ಬುಧ ಗ್ರಹದ ಗರಿಷ್ಠ ಕೋನೋನ್ನತಿ *
೧೦ ಶುಕ್ರ - ಶನಿ ನಡುವೆ ಕನಿಷ್ಠ ಕೋನ *
ಅಮಾವಾಸ್ಯೆ ೦೮:೩೮ಕ್ಕೆ; ಚಂದ್ರ - ಭೂಮಿ ನಡುವೆ ಕನಿಷ್ಠ ದೂರ ೨೩:೨೭ಕ್ಕೆ
೧೨ ಬುಧ - ಚಂದ್ರ ಜೋಡಿ *; ಪರ್ಸಿಯೈಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೧೩ ಶನಿ - ಚಂದ್ರ - ಮಂಗಳ ಪುಟ್ಟ ಗುಂಪು *
೧೬ ಚಾಂದ್ರಮಾಸದ ಮೊದಲ ಪಾದ
೨೦ ಶುಕ್ರ ಗ್ರಹದ ಗರಿಷ್ಠ ಕೋನೋನ್ನತಿ *
೨೩ ಶುಕ್ರ - ಮಂಗಳ ನಡುವೆ ಕನಿಷ್ಠ ಕೋನ *
೨೪ ಹುಣ್ಣಿಮೆ ೨೨:೩೫ಕ್ಕೆ
೨೫ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ ೦೬:೦೩ಕ್ಕೆ
೨೭ ಗುರು - ಚಂದ್ರ ಜೋಡಿ *
(* ಛಾಯಾಗ್ರಹಣಕ್ಕೆ ಸದವಕಾಶ)

# ಜೀವ ಭಂಜಕ ಜೀತ



ಎಸ್. ಆರ್. ಗುರುನಾಥ್

'ಸರ್ವರಿಗೂ ಸಮಪಾಲು; ಸರ್ವರಿಗೂ ಸಮಬಾಳು', 'ಸರ್ವೇ ಜನಾಃ ಸುಖಿನೊ ಭವಂತು', 'ನೀನೂ ಬದುಕು; ಇತರರನ್ನೂ ಬದುಕಿಸು', 'ಲೋಕಾಃ ಸಮಸ್ತಾಃ ಸುಖಿನೋ ಭವಂತು' ಎಂಬಂಥ ಸುಂದರ ಆಶಯಗಳ ಸಾಮಾಜಿಕ ವ್ಯವಸ್ಥೆಯು ವರದಕ್ಷಿಣೆ, ದೇವದಾಸಿ, ಬೆತ್ತಲೆ ಸೇವೆ, ಜೀತ ಮುಂತಾದ ಧೂರ್ತಪದ್ಧತಿಗಳನ್ನು ಒಡಲಲ್ಲಿ ಬೆಚ್ಚಗೆ ಹುದುಗಿಸಿಕೊಂಡಿರುವುದು ನಿಜಕ್ಕೂ ಅಸಹ್ಯಕರ ಸಂಗತಿ! ಜೀತಪದ್ಧತಿ ಎಂಬುದು ಯಾವಾಗ, ಎಲ್ಲಿ ಯಾರಿಂದ ಹುಟ್ಟಿಕೊಂಡಿತು ಎಂಬುದಕ್ಕೆ ನಿಖರವಾದ ಪುರಾವೆಗಳಿಲ್ಲವಾದರೂ ಪುರಾಣ, ಚರಿತ್ರೆ, ಇತಿಹಾಸ, ಜನಪದ, ಸ್ಮೃತಿ ಮುಂತಾದುವುಗಳಲ್ಲಿ ಸಾಕಷ್ಟು ಕುರುಹುಗಳು ಕಂಡುಬರುತ್ತವೆ. ಹಾಗೆಯೇ ಚೀನಾ, ಈಜಿಪ್ಟ್, ರಷ್ಯಾ, ಆಫ್ರಿಕಾ ಮುಂತಾದ ಭೂಭಾಗಗಳಲ್ಲಿ ಇತ್ತು ಎಂಬುದಕ್ಕೆ ಹಲವಾರು ನಿದರ್ಶನಗಳು ದೊರಕುತ್ತವೆ. ಒಟ್ಟಿನಲ್ಲಿ ಜೀತಪದ್ಧತಿ ಎಂಬುದು ಈ ನಾಡಿನಲ್ಲಿ ಅತಿ ಸಾಮಾನ್ಯವಾದ ಸಂಗತಿ.

**ಜೀತ ಎಂದರೆ...**

ಜೀತದ ಸ್ವರೂಪ ತುಂಬಾ ಸಂಕೀರ್ಣವಾದುದು. ಇದನ್ನು ಹಲವು ಸಮಾಜಶಾಸ್ತ್ರಜ್ಞರು ಹಲವಾರು ರೀತಿಯಲ್ಲಿ ವ್ಯಾಖ್ಯಾನಿಸಿರುವುದುಂಟು. ಇಲ್ಲಿಯ ಅನಿಷ್ಟ ಪದ್ಧತಿಗಳ ಬಗ್ಗೆ ಅರ್ಥ ವಿವರಣೆ ನೀಡುವುದು ಹೇಗೋ ಜೀತಪದ್ಧತಿಯ ವಿಷಯವೂ ಹಾಗೆಯೇ ಎಂಬುದು ಕೆಲವರ ಅಭಿಪ್ರಾಯ. ಒಟ್ಟಿನಲ್ಲಿ ಇದನ್ನು ಈ ಅಂಶಗಳಿಂದ ಗುರುತಿಸಬಹುದು :

* ಆರ್ಥಿಕ ದುರ್ಬಲ ಅಥವಾ ಹೀನಜಾತಿಯವನು ಎಂಬ ಕಾರಣದಿಂದ ಒಡೆಯನ ಹಿಡಿತದಲ್ಲಿ ದುಡಿಯುವುದು.

* ತಾನು ಅಥವಾ ತನ್ನ ಪೂರ್ವಿಕರು ಪಡೆದ ಸಾಲದ ಮೇಲಿನ ಬಡ್ಡಿಯ ನಿಮಿತ್ತ ಕಾಲದ ಮಿತಿಯಿಲ್ಲದೆ ಸೇವೆ ಸಲ್ಲಿಸುವುದು.

* ವರ್ಣವ್ಯವಸ್ಥೆಯನ್ನು ಪೋಷಿಸುವ ಧಾರ್ಮಿಕ ಅಥವಾ ಜಾನಪದ ಸಂಸ್ಕೃತಿಯ ಪ್ರೇರಣೆಯಿಂದ ಗುಲಾಮನಂತೆ ಜನ್ಮ ಸವೆಸುವುದು.

* ಒಡೆಯನ ಅಕ್ರಮ ದಾಖಲೆಗಳ ಅಥವಾ ಬಾಯಿಮಾತಿನ ನಿಮಿತ್ತ ಸಂಭವಿಸಬಹುದಾದ ಹಲ್ಲೆ, ದೌರ್ಜನ್ಯಗಳ ಭಯದಿಂದ ಕನಿಷ್ಠ ಪ್ರತಿಫಲವಿಲ್ಲದೆ ಚಾಕರಿ ಮಾಡುವುದು.

* ಹಿಂದಿನ ಅಥವಾ ಮುಂದಿನ ಯಾವುದೋ ಸಹಾಯ ಸಹಕಾರದ ನಿಮಿತ್ತ ದಾಕ್ಷಿಣ್ಯಕ್ಕೆ ಒಳಗಾಗಿ ಒಡೆಯನ ಹಿಡಿತಕ್ಕೆ ಈಡಾಗುವುದು.

* ಚಾಲ್ತಿ ದರದ ಕೂಲಿಗಿಂತ ಕಡಿಮೆ ಪಡೆಯುತ್ತಲೋ ಒಡೆಯನು ತನಗೆ ತೋಚಿದಷ್ಟು ನೀಡುವ ಸಂಬಳಕ್ಕೋ ಬಲವಂತದ ದುಡಿಮೆಗೆ ಸಿಲುಕುವುದು.

* ಒಪ್ಪಂದದಂತೆ ಸಂಬಳ ಕೊಡುವ ಭರವಸೆಯಿಂದ ಯಾವುದೇ ವ್ಯಕ್ತಿಸ್ವಾತಂತ್ರ್ಯ ನೀಡದೆ ಹಗಲು ರಾತ್ರಿ ದುಡಿಸಿಕೊಳ್ಳುವುದು.

* ಆಹಾರ, ವಸ್ತ್ರ, ಮದ್ಯಪಾನ, ವಿವಾಹ ಮುಂತಾದವುಗಳಿಗೆ ಒಡೆಯನನ್ನೇ ಅವಲಂಬಿಸಿ – ಆ ಹಂಗಿಗೆ ಒಳಗಾಗಿ ಗುಲಾಮಗಿರಿಗೆ ಸಿಲುಕುವುದು.

* ಸೀಮಿತ-ಕನಿಷ್ಠ ವೇತನಕ್ಕಾಗಿ ಕಾಲಮಾನದ ಪರಿಮಿತಿಯಿಲ್ಲದೆ ತನ್ನ ಪೂರ್ವಿಕರಂತೆ ಮುಂದಿನ ಪೀಳಿಗೆಯನ್ನೂ ಸೇವೆಗೆ ಸಿಕ್ಕಿಸುವುದು.

* ತನ್ನ ಇಚ್ಛೆಗಳನ್ನು ಹತ್ತಿಕ್ಕಿ, ಒಡೆಯನ ಇಚ್ಛೆಗೆ ಬದ್ಧನಾಗಿ, ಯಾವುದೇ ಬಹಿರಂಗ ಪ್ರತಿರೋಧವನ್ನು ವ್ಯಕ್ತಪಡಿಸದೆ ಅನಿವಾರ್ಯವೆಂಬಂತೆ ಸೇವಾನಿರತನಾಗುವುದು – ಇತ್ಯಾದಿ.

ಇಂತಹ ಹಲವಾರು ಅಂಶಗಳನ್ನು ಜೀತಪದ್ಧತಿಯ ಸ್ವರೂಪಗಳೆಂದು 'ರಾಷ್ಟ್ರೀಯ ಶ್ರಮ ಆಯೋಗ', 'ಭಾರತೀಯ ಸಮಾಜವಿಜ್ಞಾನ ಸಂಸ್ಥೆ', 'ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಆಯೋಗ' ಮೊದಲಾದವುಗಳು ಗುರುತಿಸಿವೆ.

ಜೀತಗಾರನಿಗೆ ಕೆಲಸದಲ್ಲಿ ಕೆಲಸ, ಕೆಲಸದ ಮೇಲೆ ಕೆಲಸ, ಕೆಲಸದೊಂದಿಗೆ ಕೆಲಸ, ಕೆಲಸಕ್ಕಾಗಿ ಕೆಲಸ, ಕೆಲಸವೋ ಕೆಲಸ! ಬಿಡುವೆಂಬುದೇ ಇರುವುದಿಲ್ಲ! ಹೊತ್ತಿಗೆ ಮುಂಚೆ ಏಳಬೇಕು. ತನಗೇ ಮೀಸಲಾದ ಕೆಲಸಗಳನ್ನು ಮಾಡಬೇಕು. ಹಾಕಿದಾಗ – ಹಾಕಿದ್ದನ್ನು - ಹಾಕಿದಷ್ಟು ತಿನ್ನಬೇಕು. ರಾತ್ರಿ ಹೊತ್ತು ಮೀರುವತನಕ ಕೆಲಸ ಮಾಡುತ್ತಲೇ ಇರಬೇಕು. ಯಾವುದೇ ಮಿತಿ ಎಂಬುದಿರುವುದಿಲ್ಲ, ಹಬ್ಬ, ಜಾತ್ರೆ, ಪರಿಷೆ, ವಿವಾಹ ಮುಂತಾದ ಸಂಭ್ರಮದ ಸಂದರ್ಭಗಳಲ್ಲೂ ಬಿಡುವು, ವಿಶ್ರಾಂತಿ ದೊರಕುವುದಿಲ್ಲ, ಬದಲಾಗಿ ಅಂತಹ ಸಂದರ್ಭಗಳಲ್ಲೇ ಇನ್ನೂ ಹೆಚ್ಚು ಕೆಲಸ! ಒಡೆಯನ ದೃಷ್ಟಿಯಲ್ಲಿ ಜೀತಗಾರ ಎಂಬುವವನು ಮನುಷ್ಯನೇ ಅಲ್ಲ!

ಪ್ರಚಲಿತ ವ್ಯಾಖ್ಯೆಯ ಪ್ರಕಾರ ಜೀತಪದ್ಧತಿಯನ್ನು ಸಮಗ್ರವಾಗಿ 'ಯಾವುದೇ ಒಂದು ಒಪ್ಪಂದ ಅಥವಾ ಒತ್ತಾಯದಿಂದ ಒಬ್ಬ ವ್ಯಕ್ತಿಯನ್ನು ತನ್ನ ಹಿಡಿತದಲ್ಲಿ ಹಿಡಿದಿರಿಸಿಕೊಂಡು ತನ್ನಿಚ್ಛೆಯಂತೆ ಸೇವೆ ಮಾಡಿಸಿಕೊಳ್ಳುವುದು' ಎಂದು ಅರ್ಥೈಸಬಹುದು.

**ಜೀತಕ್ಕೆ ಕಾರಣಗಳು**

ಜೀತಕ್ಕೆ ಹಲವಾರು ಕಾರಣಗಳು! ಕಾರ್ಲ್ ಮಾರ್ಕ್ಸ್ ಪ್ರಕಾರ ಆರ್ಥಿಕ ಅಸಮಾನತೆಯೇ ಕಾರಣವಾದರೆ ಈ ದೇಶದಮಟ್ಟಿಗೆ ಸಾಮಾಜಿಕ ಅಸಮಾನತೆಯೂ ಒಂದು ಮುಖ್ಯಕಾರಣ. ಮೇಲುವರ್ಣದವನು ಕೆಳವರ್ಣದವನ ಜೀತದ ಆಳಾದಂತಹ ಒಂದೇ ಒಂದು ಉದಾಹರಣೆಯೂ ದೊರಕುವುದಿಲ್ಲ! ಅಂದಹಾಗೆ ಇಲ್ಲಿಯ ವರ್ಣ-ವರ್ಗಗಳೇ ಜೀತದ ಹುಟ್ಟು ಬೆಳವಣಿಗೆಗೆ ಮೂಲ ಕಾರಣ ಎಂಬುದು ನಿಸ್ಸಂದೇಹ!

ಮನುಸ್ಮೃತಿಯ ಪ್ರಕಾರ 'ಕೆಳಜಾತಿಯವನು ಮೇಲು ಜಾತಿಯವನ ಸೇವೆ ಮಾಡಬೇಕು. ಮೇಲುಜಾತಿಯವನು ತನಗಿಂತ ಕೆಳಜಾತಿಯವನ ಸೇವೆ ಮಾಡಬಾರದು' ಎಂಬಂತಹ ಘೋಷಿತ, ಧಾರ್ಮಿಕ, ಸಾಮಾಜಿಕ ನಿಯಮಗಳೇ ಜೀತಪದ್ಧತಿಗೆ ಪ್ರಬಲ ಕಾರಣಗಳು. ಇಂತಹ ಮೌಢ್ಯ, ಕಂದಾಚಾರ, ಅವಿವೇಕ, ಕ್ರೌರ್ಯ ಮೊದಲಾದವುಗಳ ಬಗ್ಗೆ ವಿಚಾರವಂತ ಸಮಾಜ ಸುಧಾರಕರು ದನಿ ಎತ್ತಿರಬಹುದಾದರೂ ಜೀತಪದ್ಧತಿಯ ಬಗ್ಗೆ ವಿಶೇಷ ಆಸಕ್ತಿ ವಹಿಸಿದ್ದು, ಎಲ್ಲೂ ಕಂಡುಬರುವುದಿಲ್ಲ, ಯಾವುದೇ ಆಡಳಿತಶಾಹಿಯು ತನಗೆ ಬೆಂಬಲವಾದ ಮೇಲು ವರ್ಗ-ವರ್ಣಗಳ ಪಕ್ಷಪಾತಿಯೇ ವಿನಾ ಶ್ರಮಿಕ ಸಮುದಾಯದತ್ತ ಕಿಂಚಿತ್ತೂ ಗಮನ ಹರಿಸಲಿಲ್ಲ; ಹರಿಸುತ್ತಿಲ್ಲ. ಇಂತಹ ಕಾರಣಗಳಿಂದ ಅಮಾಯಕ ಸಮುದಾಯವು ಕೇವಲ ಹೊಟ್ಟೆ-ಬಟ್ಟೆಯ ಸೀಮಿತ ಬದುಕಿಗಾಗಿ ಜೀತವೆಂಬ ಕೂಪಕ್ಕೆ ಬೀಳುವುದು ಅನಿವಾರ್ಯವಾಗುತ್ತದೆ. ಅಂದಹಾಗೆ ಹಬ್ಬ, ಜಾತ್ರೆ, ಪರಿಷೆ, ಕುಡಿತ, ವಿವಾಹ ಮುಂತಾದವುಗಳಿಗಾಗಿ ಶ್ರೀಮಂತ ಜಮೀನ್ದಾರರಿಂದ ಕೈಗಡ ಪಡೆದು, ಅವಧಿಯ ಒಳಗೆ ಅಸಲು ಬಡ್ಡಿಯನ್ನು ತೀರಿಸಲಾಗದೆ ಅತ್ಯಂತ ಸರಳವೂ ಸುಗಮವೂ ಆದಂಥ ಜೀತದ ಬಲೆಗೆ ಸಿಲುಕುವುದು ಸುಲಭವಾಗಿಬಿಡುತ್ತದೆ! ಇದರ ದುರ್ಲಾಭಕ್ಕಾಗಿ ಶ್ರೀಮಂತ ಜಮೀನ್ದಾರರು ಸದಾ ಹೊಂಚು ಹಾಕುತ್ತಲೇ ಇರುತ್ತಾರೆ. ಕೆಲವು ಬಾರಿ ಬೇಟೆಯ ಪ್ರಾಣಿಗಳನ್ನು ಆಕರ್ಷಿಸುವಂತೆ ತಾವೇ ಕರೆದು ಸಾಲ ನೀಡುವುದೂ ಉಂಟು! ಈ ರೀತಿ ಕೊಟ್ಟ ಸಾಲ ಎಲ್ಲೂ ಹೋಗುವುದಿಲ್ಲ; ಅಸಲಿನೊಂದಿಗೆ ಬಡ್ಡಿಯ ಹತ್ತುಪಾಲು ದಕ್ಕುತ್ತದೆಂಬುದರಲ್ಲಿ ಅವರಿಗೆ ಅನುಮಾನವೇ ಇರುವುದಿಲ್ಲ!

ತಾನು ಪಡೆದ ಸಾಲದ ಲೆಕ್ಕ ಎಷ್ಟು, ಅದಕ್ಕೆ ಬಡ್ಡಿ ಎಷ್ಟು, ಜೀತದ ಆರಂಭ ಹಾಗೂ ಅಂತ್ಯದ ದಿನಾಂಕಗಳು ಯಾವುವು ಎಂಬುದನ್ನೇ ಸರಿಯಾಗಿ ತಿಳಿಯದ ಜೀತಗಾರನ ಪರವಾಗಿ ನ್ಯಾಯ ಹೇಳುವ ಮನುಷ್ಯರು ಯಾರು!? ಅಕಸ್ಮಾತ್ ಹೇಳಿದರೂ ಅವನು ಮೇಲುವರ್ಣದ ಶ್ರೀಮಂತನೇ ಆಗಿರುತ್ತಾನೆ! ಇಂತಹ ಹಲವಾರು ಕಾರಣಗಳಿಂದ ಜೀತವು ವಂಶಪಾರಂಪರ್ಯವಾಗಿ ಮುಂದುವರಿದುಬಿಡುತ್ತದೆ!

ಸಿಂಹವು ಕುರಿಮರಿಯನ್ನು ಬೇಟೆಯಾಡಿದ ಹಾಗೆ ಶ್ರೀಮಂತ ಜಮೀನ್ದಾರರಿಗೆ ಕೆಳವರ್ಗ, ವರ್ಣದ ಜನರನ್ನು ಬಲೆಗೆ ಬೀಳಿಸಿಕೊಳ್ಳುವುದು ಅತ್ಯಂತ ಸುಲಭ! ರಾಜಶಾಹಿಯ ಕಾಲದಲ್ಲಿ ಶೇಕಡ ೮೦ರಷ್ಟು ಕೆಳವರ್ಣದ ಜನರು ಜೀತಗಾರಿಕೆಯಲ್ಲಿ ನರಳುತ್ತಿದ್ದರು! ಅವರು ಆ ಜೀತದಿಂದ ಪಾರಾಗಲೆತ್ನಿಸಿದಷ್ಟೂ ಒಡೆಯರ ಬಿಗಿ ಹಿಡಿತ ಹೆಚ್ಚುತ್ತಿದ್ದಿತು. ಆ ಒಡೆಯರಂತೂ ಯಾವುದೇ ಲಂಗು-ಲಗಾಮಿಲ್ಲದೆ ಸರ್ವಾಧಿಕಾರಿಗಳಂತೆ ವರ್ತಿಸುತ್ತಿದ್ದರು. ಇದಕ್ಕೆಲ್ಲಾ ಕಾರಣವಾದ ಜೀತಗಾರಿಕೆಯು ಇತ್ತೀಚಿನವರೆಗೂ ಶೋಷಣೆಯ ಒಂದು ಅಂಗ ಎಂದು ಎನಿಸಿರಲೇ ಇಲ್ಲ! ಇದೇ ಅದರ ಉಳಿವಿಗೂ ಬೆಳವಣಿಗೆಗೂ ಪರೋಕ್ಷ ಪ್ರೇರಣೆ!

**ಜೀತಗಾರರು ಯಾರು ?**

ವರ್ಗ ಹಾಗೂ ವರ್ಣಶ್ರೇಣಿಗಳಲ್ಲಿಯ ಕೆಳಹಂತದ ಜನರೇ ಜೀತದ ಆಳುಗಳೆಂಬುದು ನಿರ್ವಿವಾದ. ಶೇಕಡಾವಾರು ಲೆಕ್ಕದ ಪ್ರಕಾರ ಶೂದ್ರರಲ್ಲಿ ೧೮, ಪಂಚಮರಲ್ಲಿ ೮೨, ಅಂದಹಾಗೆ ತೀರಾ ಕೆಳಜಾತಿಯ ಸಮುದಾಯದಲ್ಲೇ ಜೀತಗಾರಿಕೆ ಹೆಚ್ಚು! ಅವರಲ್ಲಿ ಇಳಿಯ ವಯಸ್ಸಿನವರು ೩೦, ಯುವಕರು ೫೦, ಬಾಲಕರು ೨೦, ಹಾಗೆಯೇ ಒಟ್ಟು ಪುರುಷರ ಸಂಖ್ಯೆ ೯೦, ಮಹಿಳೆಯರ ಸಂಖ್ಯೆ ೧೦, ಎಂಬುದೊಂದು ಅಂದಾಜು.

## ಉಚಿತ

**ಸಂ**ಸದರಿಗೆ
ಟೆಲಿಫೋನ್
ವಿದ್ಯುತ್ ಬಿಲ್
ಉಚಿತ !

ಸಾರಿಗೆ
ಪ್ರಯಾಣ ಭತ್ಯೆ
ಜೊತೆಗೆ ಈಗ
ಸಹಚರರಿಗೆ
ವಿಮಾನ ಪ್ರಯಾಣವೂ
ಉಚಿತ !

ಜನರ ಬೆವರಿನ
ಹಣ ಪೋಲಾಗುವುದು
ಖಚಿತ !!

**ಸುರೇಶ ಅಂಗಡಿ**
ಮುಖ್ಯ ಗುರುಗಳು
ತುಂಗಭದ್ರಾ ಪ್ರೌಢಶಾಲೆ, ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ



ಕೆಲವರು ಸ್ವಇಚ್ಛೆಯಿಂದ, ಮತ್ತೆ ಕೆಲವರು ಅನಿವಾರ್ಯ ಪರಿಸ್ಥಿತಿಗಳಿಂದ, ಇನ್ನೂ ಕೆಲವರು ಯಾವುದೋ ಒತ್ತಾಯದಿಂದ ಜೀತಕ್ಕೆ ಈಡಾಗುವುದುಂಟು. ಆದುದರಿಂದ ಸವರ್ಣೀಯರಲ್ಲಿ ಅವರ್ಣೀಯರೆಂದರೆ 'ಸೇವಕರು', 'ಗುಲಾಮರು', 'ದಡ್ಡರು' 'ಅಯೋಗ್ಯರು', 'ಮೂರ್ಖರು', 'ಮೃಗಗಳು' ಎಂಬಂಥ ಭಾವನೆ ಬೆಳೆದು ನಿಂತುಬಿಟ್ಟಿದೆ! ಜೀತಗಾರರಲ್ಲಿ ಸ್ವಾಭಾವಿಕವಾಗಿಯೇ ಅನಕ್ಷರಸ್ಥರು ಹೆಚ್ಚು. ಕೆಲವು ವರ್ಷಗಳ ಹಿಂದಿನ ಸಮೀಕ್ಷೆಯೊಂದರ ಪ್ರಕಾರ ಅಕ್ಷರಸ್ಥರು ಶೇ. ೭ಕ್ಕಿಂತ ಕಡಿಮೆ! ವಿವಾಹಿತರು ಶೇ. ೭೦, ಅವಿವಾಹಿತರು ಶೇ. ೩೦, ವಾಸದ ಮನೆ/ಗುಡಿಸಲು/ಜೋಪಡಿ ಉಳ್ಳವರು ಶೇ. ೮೦, ಅಂಗೈ ಅಗಲ ಜಮೀನು ಇಲ್ಲದವರು ಶೇ. ೯೫, ಒಡೆಯನ ಹಿಡಿತವನ್ನು ಸಹಿಸಿಕೊಂಡು ವಿಧೇಯರಾಗಿ ಕೆಲಸ ಮಾಡುವವರು ಶೇ. ೯೩, ಪಡೆದ ಸಾಲದ ಮೊತ್ತ, ಬಡ್ಡಿಯ ಲೆಕ್ಕ, ಜೀತದ ಆರಂಭ ಹಾಗೂ ಮುಕ್ತಾಯದ ದಿನಾಂಕಗಳನ್ನು ತಿಳಿದವರು ಶೇ. ೭, ಒಡೆಯನ ಲೆಕ್ಕ ಚುಕ್ತಾ ಮಾಡಿ ಜೀತದಿಂದ ಮುಕ್ತರಾದವರು ಶೇ. ೭೦, ಜೀವಾವಧಿ ಅಂದರೆ – ನಡೆದಾಡಲೂ ಆಗದಂಥ ಮುಪ್ಪಿನತನಕ ಜೀತದಲ್ಲಿರುವವರು ಶೇ. ೩೦, ಮಹಿಳೆಯರಲ್ಲಿ ವಿಧವೆಯರು ಅಥವಾ ವಿಚ್ಛೇದಿತರು ಶೇ. ೯೭, ವಿವಾಹಿತೆಯರು ಶೇ. ೩, ಬೇರೆಬೇರೆ ರೂಪದ ಜೀತದಲ್ಲಿರುವ ಅವಿವಾಹಿತೆಯರ ಲೆಕ್ಕ ಅಂದಾಜಿಗೆ ಸಿಲುಕುವುದಿಲ್ಲ! ಒಟ್ಟಾರೆ ದಲಿತರು ಸ್ವಾತಂತ್ರ್ಯಪೂರ್ವದಲ್ಲಿ ಶೇ. ೩೦, ರಾಜಶಾಹಿಯ ಕಾಲದಲ್ಲಿ ಶೇ. ೪೦, ಇದ್ದರು. ಅಂದಹಾಗೆ ಆಗ 'ಸಾವಿಲ್ಲದ ಮನೆಯೇ ಇಲ್ಲವೆಂಬಂತೆ ಜೀತಗಾರನಿಲ್ಲದ ದಲಿತರ ಮನೆಯೂ ಇಲ್ಲ' ಎಂಬಂಥ ಸ್ಥಿತಿ!

**ಹೊರ ಒಳ ಆಳುಗಳು**

ಜೀತದ ಆಳುಗಳಲ್ಲಿ ಮುಖ್ಯವಾಗಿ ಎರಡು ವಿಧ: ಒಂದನೆಯದು 'ಒಳ ಆಳು', ಎರಡನೆಯದು 'ಹೊರ ಆಳು'.

'ಒಳ ಆಳು' ಎಂದರೆ ಜಾತಿಯಲ್ಲಿ ಸವರ್ಣೀಯ! ಅಥವಾ ಶೂದ್ರ. ಅವನು ಸಹಜವಾಗಿಯೇ ಮನೆಯ ಒಳಗಿನ ಕೆಲಸಗಳನ್ನು ನಿರ್ವಹಿಸುತ್ತಾನೆ. ಅವನು ಅಡುಗೆ ಕೋಣೆಯವರೆಗೂ ಪ್ರವೇಶಿಸಬಹುದು. ಮನೆಯವರೊಂದಿಗೆ ಮನೆಯವರಂತೆಯೇ ನಡೆದುಕೊಳ್ಳಬಹುದು. ಇನ್ನೂ ಮುಂದುವರಿದಂತೆ ಅವಿವಾಹಿತನಾಗಿದ್ದರೆ ಒಡೆಯರು ಸಜಾತಿಯ ಹೆಣ್ಣನ್ನು ನೋಡಿ ತಕ್ಕಮಟ್ಟಿಗೆ ಮದುವೆ ಮಾಡುವುದೂ ಉಂಟು.

'ಹೊರ ಆಳು' ಎಂದರೆ ಜಾತಿಯಲ್ಲಿ ಕೀಳು. ಅವನು ಸಹಜವಾಗಿಯೇ ಮನೆಯ ಹೊರಗಿನ ಕೊಳಕು ಕೆಲಸ ಹಾಗೂ ಶ್ರಮದಾಯಕ ಕೆಲಸಗಳನ್ನು ಮಾತ್ರ ನಿರ್ವಹಿಸಬೇಕು. ಯಾವುದೇ ಕಾರಣಕ್ಕೂ ಮನೆಯ ಒಳಕ್ಕೆ ಕಾಲಿಡಬಾರದು, ಪಾತ್ರೆ ಪಗಡಿಗಳನ್ನು ಮುಟ್ಟಬಾರದು. ಊಟಕ್ಕೆ ಎಲ್ಲರೊಂದಿಗೆ ಕೂರಬಾರದು. ಅಂದಹಾಗೆ ಎಲ್ಲಾ ಸಂದರ್ಭಗಳಲ್ಲೂ ಅಪ್ಪಟ ಅಸ್ಪೃಶ್ಯನಂತೆಯೇ ನಡೆದುಕೊಳ್ಳಬೇಕು. ಈ ವಿಷಯದಲ್ಲಿ ಯಾವುದೇ ರಿಯಾಯಿತಿ ಇರುವುದಿಲ್ಲ. ಮನೆಯ ಹೆಂಗಸರೊಂದಿಗೆ ಸಲುಗೆಯಿಂದ ಮಾತನಾಡಿದ್ದಕ್ಕೇ ತಲೆ ಒಡೆದ ಉದಾಹರಣೆಗಳೂ ಉಂಟು!

ಒಡೆಯರು ಹೊರ ಆಳುಗಳಿಗೂ ತನಗೆ ಒಪ್ಪಿಗೆಯಾದ ಹೆಣ್ಣು ನೋಡಿ ಮದುವೆ ಮಾಡುವ ಸಾಧ್ಯತೆಯೂ ಇರುತ್ತದೆ! ಏಕೆಂದರೆ ಮದುವೆಯ ಖರ್ಚು ವೆಚ್ಚದಿಂದ ಅವನನ್ನು ಶಾಶ್ವತವಾಗಿ ಹಿಡಿದಿಟ್ಟುಕೊಳ್ಳಬಹುದು ಎಂಬುದೊಂದು ಕಾರಣವಾದರೆ ಬಿಟ್ಟಿ ಹೆಣ್ಣೂ ಸಿಗುತ್ತದೆ ಎಂಬ ಲೆಕ್ಕಾಚಾರ ಇನ್ನೊಂದು! ಈ ಲೆಕ್ಕಾಚಾರಗಳಲ್ಲಿ ಮೂರನೆಯದೂ ಒಂದು! ಅದೇನೆಂದರೆ, ಬೇಗನೆ ಮಕ್ಕಳಾದರೆ ಅವೂ ಕೂಡ ತನ್ನ ತೊತ್ತುಗಳೇ ಎಂಬಂಥ ಮುಂದಾಲೋಚನೆ! ಈ ಬಗೆಯ ಸ್ವಾರ್ಥದಿಂದ ಹೊರ ಆಳಿಗೆ ತನ್ನದೇ ಆದ ಬದುಕೂ ಇರುವುದಿಲ್ಲ; ಕನಸುಗಳೂ ಬೆಳೆಯುವುದಿಲ್ಲ!

**ಜೀತದ ಸ್ವರೂಪ**

ಜೀತಗಾರನಿಗೆ ಕೆಲಸದಲ್ಲಿ ಕೆಲಸ, ಕೆಲಸದ ಮೇಲೆ ಕೆಲಸ, ಕೆಲಸದೊಂದಿಗೆ ಕೆಲಸ, ಕೆಲಸಕ್ಕಾಗಿ ಕೆಲಸ, ಕೆಲಸವೋ ಕೆಲಸ! ಬಿಡುವೆಂಬುದೇ ಇರುವುದಿಲ್ಲ! ಹೊತ್ತಿಗೆ ಮುಂಚೆ ಏಳಬೇಕು. ತನಗೇ ಮೀಸಲಾದ ಕೆಲಸಗಳನ್ನು ಮಾಡಬೇಕು. ಹಾಕಿದಾಗ – ಹಾಕಿದ್ದನ್ನು - ಹಾಕಿದಷ್ಟು ತಿನ್ನಬೇಕು. ರಾತ್ರಿ ಹೊತ್ತು ಮೀರುವತನಕ ಕೆಲಸ ಮಾಡುತ್ತಲೇ ಇರಬೇಕು. ಯಾವುದೇ ಮಿತಿ ಎಂಬುದಿರುವುದಿಲ್ಲ. ಹಬ್ಬ, ಜಾತ್ರೆ, ಪರಿಷೆ, ವಿವಾಹ ಮುಂತಾದ ಸಂಭ್ರಮದ ಸಂದರ್ಭಗಳಲ್ಲೂ ಬಿಡುವು, ವಿಶ್ರಾಂತಿ ದೊರಕುವುದಿಲ್ಲ. ಬದಲಾಗಿ ಅಂತಹ ಸಂದರ್ಭಗಳಲ್ಲೇ ಇನ್ನೂ ಹೆಚ್ಚು ಕೆಲಸ! ಒಡೆಯನ ದೃಷ್ಟಿಯಲ್ಲಿ ಜೀತಗಾರ ಎಂಬುವವನು ಮನುಷ್ಯನೇ ಅಲ್ಲ! ಅವನೇನೂ ಬಿಟ್ಟಿಗೋ ದಾಕ್ಷಿಣ್ಯಕ್ಕೋ ದುಡಿಯುವವನಲ್ಲ ಎಂಬಂಥ ಧೋರಣೆ. ಹಳ್ಳಿ ನಗರಗಳಿಗೆ ಸಂಬಂಧಿಸಿದ ಮನೆ, ಹೊಲ, ಗದ್ದೆ, ತೋಟ, ಕಾರ್ಖಾನೆ, ಅಂಗಡಿ, ಮಳಿಗೆ ಮುಂತಾದುವುಗಳಲ್ಲೆಲ್ಲಾ ಕೆಲಸ. ಸ್ವರೂಪ ಬೇರೆ ಬೇರೆಯಾದರೂ ಶ್ರಮ ಅದೇ!

ಅಂದಹಾಗೆ ಸಾಮಾನ್ಯವಾಗಿ ಜೀತಗಾರರೆಲ್ಲಾ ತಮ್ಮ ತಮ್ಮ ಕೆಲಸಗಳಲ್ಲಿ ಪರಿಣತರೂ ಅನುಭವಿಗಳೂ ಆಗಿರುತ್ತಾರೆ. ''ತನಗೆ ಯಾವುದೇ ಒಂದು ಕೆಲಸ ತಿಳಿಯದು, ಅದು ನನ್ನ ಕೈಲಾಗುವುದಿಲ್ಲ...'' ಎನ್ನುವಂತಿಲ್ಲ! ಕೈ ಚೆಲ್ಲುವಂತೆಯೂ ಇಲ್ಲ!

ಒಡೆಯರೆಂದರೆ ಎಲ್ಲರೂ ಮೃಗಗಳಂತೆಯೇ ನಡೆದುಕೊಳ್ಳುವುದಿಲ್ಲ. ಜೀತಗಾರರನ್ನು ಆಳುಮಗ – ಮನೆಮಗ ಎನ್ನುವವರೂ ತಂದೆ ಅಥವಾ ಪೋಷಕರಂತೆಯೇ ನೋಡಿಕೊಳ್ಳುವವರೂ ಇರುತ್ತಾರೆ! ಅಂಥವರು ತುಂಬ ತುಂಬ ವಿರಳ. ಹಾಗೆಯೇ ಜೀತದ ಆಳುಗಳಲ್ಲಿ ಎಲ್ಲರೂ ಪ್ರಾಮಾಣಿಕ, ನಿಷ್ಠಾವಂತರೇ ಆಗಿರುವುದಿಲ್ಲ. ಒಡೆಯನ ಕಣ್ತಪ್ಪಿಸಿ ಕಾಲಹರಣ ಮಾಡುವವರೂ ಕೆಲಸಗಳಲ್ಲಿ ನಿಧಾನ ಧೋರಣೆಯನ್ನು ಅನುಸರಿಸುವವರೂ ಇರುತ್ತಾರೆ!

**ಒಡೆಯನ ಒಡೆತನ**

ಜೀತಗಾರನ ಒಡೆಯನಾಗಲು ಸ್ವಾಭಾವಿಕವಾಗಿಯೇ ಕೆಲವು ಅರ್ಹತೆಗಳಿರುತ್ತವೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ: ಕನಿಷ್ಠ ಒಬ್ಬ ಆಳು ದಿನವಿಡೀ-ವರ್ಷವಿಡೀ ಕೆಲಸ ಮಾಡುವಷ್ಟು ಆಸ್ತಿಪಾಸ್ತಿ, ದನಕರುಗಳನ್ನು ಹೊಂದಿರುತ್ತಾನೆ. ಹಾಗೆಯೇ ಆ ಆಳನ್ನು ನಿಯಂತ್ರಿಸುವ ಶಕ್ತಿ ಸಾಮರ್ಥ್ಯ ಧಾರ್ಷ್ಟ್ಯಗಳನ್ನೂ ಕೂಡಾ! ಸಂಸ್ಕೃತಿ ಹಾಗೂ ಸಾಮಾಜಿಕ ರೂಪರೇಷೆಗಳ ಹರಿಕಾರರಾದ ಮೇಲುವರ್ಗದ ಜಮೀನುದಾರರಿಗೆ ತಮ್ಮದೇ ಕಾನೂನು, ತಮ್ಮದೇ ಆದರ್ಶ, ತಮ್ಮದೇ ಧರ್ಮ! ಆದ್ದರಿಂದ ಜೀತಪದ್ಧತಿಯೂ ಕೂಡ ಇನ್ನಿತರ ಅನಿಷ್ಟ ಪದ್ಧತಿಗಳಂತೆ ಸಾಮಾಜಿಕ ವ್ಯವಸ್ಥೆಯ ಒಂದು ಹೆಮ್ಮೆ ಎಂಬಂತಾಗಿರುವುದು ಸಂಸ್ಕೃತಿಯ ಒಂದು ಕ್ರೌರ್ಯವೇ ಸರಿ.

ಒಂದು ಸಮೀಕ್ಷೆಯ ಪ್ರಕಾರ ಜೀತದ ಒಡೆಯರು ಎನಿಸಿಕೊಂಡಿದ್ದವರಲ್ಲಿ ಶೇ. ೮೫ರಷ್ಟು ಉಚ್ಚವರ್ಗದವರಾಗಿದ್ದರು. ಶೇ. ೧೮ರಷ್ಟು ಹಿಂದುಳಿದ ವರ್ಗಗಳಿಗೆ ಸೇರಿದವರಾಗಿದ್ದರು. ಶೇ. ೧.೨ರಷ್ಟು ಪರಿಶಿಷ್ಟ ಪಂಗಡ ಹಾಗೂ ಪರಿಶಿಷ್ಟ ಜಾತಿಗಳಿಗೆ ಸೇರಿದವರಾಗಿದ್ದರು. ಸರಾಸರಿ ೪ರಿಂದ ೧೪ರಷ್ಟು ಸಂಖ್ಯೆಯ ಜೀತಗಾರರನ್ನೂ ೧೦ಕ್ಕಿಂತ ಹೆಚ್ಚು ಸಾಕುಪ್ರಾಣಿಗಳನ್ನೂ ೧೦ರಷ್ಟು ಜನರು ಕನಿಷ್ಠ ಒಂದು ಟ್ರ್ಯಾಕ್ಟರನ್ನಾದರೂ ಹೊಂದಿದ್ದರು.

ಶ್ರೀಮಂತಿಕೆ ಹಾಗೂ ಜಾತೀಯ ಮೇಲ್ಮೆಯಿಂದ ಸಂರಕ್ಷಿಸಲ್ಪಟ್ಟ ಒಡೆಯನು ಜೀತಗಾರನ ಯಾವುದೇ ಸಮಸ್ಯೆಯನ್ನೂ ಸಂಕಷ್ಟವನ್ನೂ ಗಮನಿಸುವುದಿಲ್ಲ; ಕಿಂಚಿತ್ತು ಸೌಜನ್ಯವನ್ನೂ ತೋರುವುದಿಲ್ಲ. ಹಾಗೆಯೇ ಅವನ ಶ್ರಮ-ಸಾಧನೆಯ ಬಗ್ಗೆಯೂ ಕನಿಷ್ಠ ಗೌರವಾದರಗಳನ್ನೂ ವ್ಯಕ್ತಪಡಿಸುವುದಿಲ್ಲ. ತನ್ನ ಜಮೀನಿನಲ್ಲಿ ಹಸಿರು ಉಕ್ಕುವುದೂ ಕಣಜ ಭರ್ತಿಯಾಗುವುದೂ ಜೇಬು, ಖಜಾನೆಗಳು ತುಂಬುವುದೂ ಮನೆ-ಮಹಲುಗಳು ವೈಭವದಲ್ಲಿ ಮೆರೆಯುವುದೂ ಯಾರಿಂದ ಎಂಬ ಪ್ರಾಥಮಿಕ ಪ್ರಜ್ಞೆಯೂ ಇರುವುದಿಲ್ಲ. ದೊಡ್ಡ ಮೀನು ಚಿಕ್ಕ ಮೀನನ್ನು ನುಂಗುವ ಹಾಗೆ ಮೇಲಿನ ವ್ಯಕ್ತಿಯು ಕೆಳಗಿನ ವ್ಯಕ್ತಿಯನ್ನು ಸುಲಭವಾಗಿ ವಶಪಡಿಸಿಕೊಳ್ಳಬಹುದು; ಶೋಷಿಸಬಹುದು. ಆದರೂ ಬಹಳಷ್ಟು ಜೀತಗಾರರು ಒಡೆಯರನ್ನು 'ಅನ್ನ, ಬಟ್ಟೆ ನೀಡಿದ ಧಣಿ! ತಂದೆಯ ಸಮಾನ! ತನ್ನ ಪಾಲಿನ ದೇವರು! ಈತನಿಗೆ ವಂಚನೆ ಮಾಡಿದರೆ ಸಾಕ್ಷಾತ್ ದೇವರಿಗೇ ದ್ರೋಹ ಬಗೆದಂತೆ!' ಎಂಬಂಥ ಭಾವನಾತ್ಮಕ ಗೌರವಾದರಗಳನ್ನು ಹೊಂದಿರುತ್ತಾರೆ. ಇದನ್ನು ಮುಗ್ಧತೆಯ, ಅಮಾಯಕತೆಯ, ಅಸಹಾಯಕತೆಯ, ಭಯದ ಪರಮಾವಧಿ ಎನ್ನಲೇಬೇಕು.

**ಜೀತಗಾರರ ಸ್ಥಿತಿ - ಗತಿ**

ರಾಜನ ಮಗ ರಾಜ, ಮಂತ್ರಿಯ ಮಗ ಮಂತ್ರಿ, ಪೂಜಾರಿಯ ಮಗ ಪೂಜಾರಿಯೇ ಆಗುವಂಥ ವಂಶಾವಳಿ ವ್ಯವಸ್ಥೆಯಲ್ಲಿ ಜೀತಗಾರನ ಮಗ ಜೀತಗಾರನೇ ಆಗಬೇಕು! ಮುಪ್ಪಿನ ತನಕ ಜೀತದಲ್ಲಿ ಬೇಯುವವನು ತನ್ನ ಮಗ, ಮೊಮ್ಮಗನಿಗೆ ಪಟ್ಟ ಕಟ್ಟಿ ಅಂತಿಮ ದಿನಗಳನ್ನು ದುಃಸ್ಥಿತಿಯಲ್ಲಿ ಕಳೆಯುವುದರ ವಿನಾ ಅನ್ಯಮಾರ್ಗವೇ ಇರುವುದಿಲ್ಲ!

ಜೀತಗಾರಿಕೆಗೆ ಮುಖ್ಯವಾಗಿ ಅನಕ್ಷರತೆ, ದಾರಿದ್ರ್ಯ, ವರ್ಣವ್ಯವಸ್ಥೆ ಹಾಗೂ ಸಾಮಾಜಿಕ ಪೂರ್ವಗ್ರಹಗಳೇ ಕಾರಣ ಎಂಬುದು ಅಧ್ಯಯನದಿಂದ ವೇದ್ಯವಾಗುವ ಸಂಗತಿ. ಒಡೆಯನ ಕೈಗೆ ಸಿಲುಕಿದ ಆಳಿನ ಸ್ಥಿತಿ-ಗತಿ ಸಾಕುಪ್ರಾಣಿಗಳಿಗಿಂತಲೂ ಹೀನಾಯ! ಅವನಿಗೆ ತಾನೂ ಒಬ್ಬ ಮನುಷ್ಯ; ಮನುಷ್ಯನಿಗಿರಬೇಕಾದ ಹಕ್ಕುಬಾಧ್ಯತೆಗಳು ತನಗೂ ಉಂಟು ಎಂಬಂಥ ಪ್ರಜ್ಞೆಯೂ ಇರುವುದಿಲ್ಲ. ಹಗಲು ರಾತ್ರಿ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯುವುದರಿಂದ ಸಮಾಜ-ಸಮುದಾಯಗಳಲ್ಲಿ ಅವನಿಗೆ ಯಾವುದೇ ಗೌರವದ ಸ್ಥಾನಮಾನಗಳಿರುವುದಿಲ್ಲ. ತನ್ನ ಕುಟುಂಬದ ಸದಸ್ಯರ ನಡುವಿನ ಬಾಂಧವ್ಯವೂ ಜಾಳು ಜಾಳು! ಹೆಂಡತಿ ಮಕ್ಕಳ ವಿಷಯದಲ್ಲೂ ಹಾಗೆಯೇ!




ಜೀತಗಾರನ ಮಡದಿ ಮಕ್ಕಳೂ ಕೂಡ ಒಡೆಯನ ನಿಯಂತ್ರಣ ಅಥವಾ ದಾಕ್ಷಿಣ್ಯದಲ್ಲೇ ಉಸಿರಾಡಬೇಕು! ದುರಂತವೆಂದರೆ ಗಂಡುಮಕ್ಕಳು ಎಳೆಯ ವಯಸ್ಸಿನಿಂದಲೇ ತರಬೇತಿಯ ಹಾಗೆ ಸಣ್ಣಪುಟ್ಟ ಕೆಲಸಗಳನ್ನು ಮಾಡುತ್ತಾ ಮುಂದಿನ ಜೀತಗಾರಿಕೆಗೆ ಸಿದ್ಧರಾಗಬೇಕು. ಹಾಗೆಯೇ ಮಡದಿ ಹಾಗೂ ಹೆಣ್ಣುಮಕ್ಕಳು ತೊತ್ತುಗಳಂತೆ ಲೈಂಗಿಕ ಶೋಷಣೆಗೆ ಈಡಾಗುವುದೂ ಕೂಡ ಅಚ್ಚರಿಯ ಸಂಗತಿಯಲ್ಲ.

ಚುನಾವಣೆಯ ಸಂದರ್ಭದಲ್ಲಿ ತನ್ನ 'ಮತ' ಎಂದರೇನು, ಅದರ ಮಹತ್ವವೇನು, ಎಂಬುದರ ಬಗ್ಗೆ ಯೋಚಿಸದೆ ಒಡೆಯರ ಆಜ್ಞೆಯಂತೆ ಅದನ್ನು ಚಲಾಯಿಸಿ ಖುಷಿಪಡುತ್ತಾರೆ! ಹೀಗೆ ತಮ್ಮದೇ ಆದಂತಹ ದೈನಂದಿನ ಬದುಕು ಹಾಗೂ ವ್ಯಕ್ತಿ ಸ್ವಾತಂತ್ರ್ಯವೇ ಇಲ್ಲದ ಅವರ ಸ್ಥಿತಿಯಂತೂ ಅತ್ಯಂತ ಹೀನಾಯ!

ಜೀತಗಾರನ ಸ್ಥಿತಿ-ಗತಿಯ ಸ್ವರೂಪ ಉತ್ಪ್ರೇಕ್ಷೆಯಂತೆ ತೋರುವುದು ಸಹಜವೇ. ಮಂಡ್ಯ ಜಿಲ್ಲೆಯ ಹಂಗರಹಳ್ಳಿ ಘಟನೆ ಒಂದು ಸಾಮಾನ್ಯ ಉದಾಹರಣೆ. ಅಲ್ಲಿಯ ಜಲ್ಲಿಕಲ್ಲಿನ ಕಾರ್ಖಾನೆಯ ಒಡೆಯ ತನ್ನ ಜೀತದ ಆಳುಗಳ ಕಾಲುಗಳಿಗೆ ಕಬ್ಬಿಣದ ಸರಪಳಿ ಹಾಕಿ ದುಡಿಸಿಕೊಳ್ಳುತ್ತಿದ್ದ! ಸಣ್ಣಪುಟ್ಟ ಕಾರಣಗಳಿಗೂ ಮರಕ್ಕೆ ಕಟ್ಟಿ ಹೊಡೆಯುತ್ತಿದ್ದ! ಸರಪಳಿಯಿಂದಾದ ವ್ರಣಗಳಿಗೆ ಸಿಹಿನೀರು ಚಿಮುಕಿಸಿ, ಇರುವೆ ಇನ್ನಿತರ ಕೀಟಗಳಿಂದ ಕಚ್ಚಿಸುತ್ತಿದ್ದ! ಹಾಗೆಯೇ ಅವರ ಹೆಂಡತಿ ಮಕ್ಕಳ ಮೇಲೂ ದೌರ್ಜನ್ಯ ಎಸಗುತ್ತಿದ್ದ. ಇಂತಹ ಎಷ್ಟೋ ಪ್ರಕರಣಗಳು ಬೆಳಕಿಗೆ ಬಾರದೆ ವ್ಯವಸ್ಥೆ ಎಂಬ ಕವಚದೊಳಗೇ ಉಡುಗಿಹೋಗುತ್ತವೆ.

ಇಂತಹ ಅನಿಷ್ಟ ಪದ್ಧತಿಗಳ ವಿರುದ್ಧ ದನಿ ಎತ್ತುವವರು ಯಾರು? ಅಕಸ್ಮಾತ್ ಎತ್ತಲ್ಪಟ್ಟ ದನಿಗಳು ಜೀತಪದ್ಧತಿಯನ್ನು ಸಮರ್ಥಿಸುವ ಸಾಮಾಜಿಕ-ಸಾಂಸ್ಕೃತಿಕ ವ್ಯವಸ್ಥೆಯ ನಡುವೆ ಯಾವುದೇ ಪರಿಣಾಮವನ್ನೂ ಉಂಟುಮಾಡುವುದಿಲ್ಲ. 'ಜೀತ, ಜಾತಿ, ಮೌಢ್ಯ, ಕಂದಾಚಾರ ಇತ್ಯಾದಿಗಳು ನಾಶವಾಗಿಬಿಟ್ಟರೆ ಇನ್ನೇನಿದೆ ಈ ಸಂಸ್ಕೃತಿಯಲ್ಲಿ!' ಎಂಬಂಥ ಭಯ ಕೆಲವು ಪಟ್ಟಭದ್ರ ಹಿತಾಸಕ್ತರಲ್ಲಿ ಇದ್ದೇ ಇದೆ.

'ಜೀತಕ್ಕೆ ಆರಂಭ ಉಂಟು; ಅಂತ್ಯವಿಲ್ಲ' ಎಂಬ ಮಾತು ಸತ್ಯ. ಕೆಲವು ಒಡೆಯರ ಲೆಕ್ಕದಲ್ಲಿ ಎಂದಿಗೂ ಅಸಲು ಬಡ್ಡಿ ಮುಗಿಯುವುದಿಲ್ಲ! ಜೀತದ ಅವಧಿ ಕೊನೆಗೊಳ್ಳುವುದಿಲ್ಲ! ಆಶ್ಚರ್ಯಕರ ರೀತಿಯಲ್ಲಿ ಅಸಲು ಬಡ್ಡಿ ಚುಕ್ತಾ ಆದರೂ 'ಎದುರು ಸಾಲ'ಕ್ಕೆ ಕೊನೆ ಎಂಬುದಿರದು! ಹಬ್ಬ, ಜಾತ್ರೆ, ಪರಿಷೆ, ಅನಾರೋಗ್ಯ ಮುಂತಾದ ಕೌಟುಂಬಿಕ ಅಗತ್ಯತೆಗಳಿಗೆ ಹಣ ಹಾಗೂ ದವಸಗಳಿಗಾಗಿ ಆಗಾಗ ಒಡೆಯನ ಎದುರು ಕೈಚಾಚಲೇಬೇಕಾಗುತ್ತದೆ. ಇದನ್ನು ನಿರೀಕ್ಷಿಸುವ ಅವನು ಯಥಾರೀತಿ ಕೊಡುವುದೂ ಬರೆದುಕೊಳ್ಳುವುದೂ ಇದ್ದೇ ಇರುತ್ತದೆ. ಅವನದೇ ಲೆಕ್ಕ! ಅವನದೇ ಬರಹ! ಈ ಬಗ್ಗೆ ಹೇಳುವವರು ಯಾರು ?! ಕೇಳುವವರು ಯಾರು ?!

ಜೀತಗಾರನಿಗೆ ವರ್ಷದ ಯಾವುದೇ ಒಂದು ದಿನವೂ ರಜೆ ಎಂಬುದಿರುವುದಿಲ್ಲ. ತನ್ನ ಅಥವಾ ಬಂಧುಗಳ ಅನಾರೋಗ್ಯ, ಯಾವುದಾದರೂ ಮರಣ ಸಂಭವಿಸಿದಂತಹ ಅನಿವಾರ್ಯ ಸಂದರ್ಭಗಳಲ್ಲಿ ಆದ ಗೈರುಹಾಜರಿ ದಿನಗಳನ್ನು 'ಉಳಿಕೆ ದಿನಗಳು' ಎಂಬ ಲೆಕ್ಕದಲ್ಲಿ ಜೀತ ಮುಕ್ತಾಯದ ನಂತರ ತಾನಾಗಲೀ ತನ್ನ ಹೆಂಡತಿ ಮಕ್ಕಳಾಗಲೀ ಅಷ್ಟು ದಿನಗಳ ಹೆಚ್ಚುವರಿ ಸೇವೆ ಸಲ್ಲಿಸಲೇಬೇಕು!

**ಜೀತಪದ್ಧತಿಯ ಪರಿಣಾಮಗಳು**

ಜೀತಪದ್ಧತಿಯಿಂದ ಒಡೆಯನಿಗೆ ಮಾತ್ರ ಪೂರ್ಣ ಪ್ರಯೋಜನ. ಅದರಿಂದಲೇ ಅವನ ಉದ್ಧಾರ, ಪ್ರತಿಷ್ಠೆ, ಶ್ರೀಮಂತಿಕೆಯ ವೈಭವ! ಆದರೆ ಜೀತಗಾರನ ಬಗ್ಗೆ ಚಿಂತಿಸಿದಾಗ 'ಜೀತ' ಎಂಬುದು 'ಮಾನವೀಯತೆಗೇ ಒಂದು ದೊಡ್ಡ ಕಳಂಕ' ಎನಿಸದಿರದು. ಅದು ಮೇಲು ಕೀಳು, ಬಡವ, ಬಲ್ಲಿದ ಎಂಬ ಭಾವನೆಗಳನ್ನು ಬೆಳೆಸುವುದಲ್ಲದೆ ಸಾಮಾಜಿಕ ಸ್ವಾಸ್ಥ್ಯತೆಯನ್ನು ಹದಗೆಡಿಸುತ್ತದೆ. ಸಮುದಾಯ ಸಮುದಾಯಗಳ ನಡುವಿನ ಕಂದಕಗಳನ್ನು ಹಿಗ್ಗಿಸುತ್ತದೆ. ಜೀತದಾಳಿನ ಅಭಿರುಚಿ-ಅಭಿಪ್ರಾಯ-ಆಶೋತ್ತರಗಳು ಕಮರಿ ಹೋಗುತ್ತವೆ. ಹಾಗೆಯೇ ವ್ಯಕ್ತಿ ಸ್ವಾತಂತ್ರ್ಯವೂ ಅರ್ಥಹೀನವಾಗಿ ಶ್ರಮ ಪರಿಶ್ರಮಗಳಿಗೆ ಬೆಲೆಯೇ ಇಲ್ಲ ಎಂಬಂತಾಗುತ್ತದೆ. ಕಡೆಗೆ ಊಳಿಗಮಾನ್ಯ ವ್ಯವಸ್ಥೆಯದೇ ಮೇಲುಗೈ! ಮುಖ್ಯವಾಗಿ ಪ್ರಜಾಪ್ರಭುತ್ವದ ಆಶಯಕ್ಕೇ ಭಂಗ ಉಂಟಾಗುತ್ತದೆ! ಸರಕಾರಗಳ ನೆಪಮಾತ್ರದ ಅಭಿವೃದ್ಧಿ ಕಾರ್ಯಗಳೂ ಮೂಲೆಗುಂಪಾಗುತ್ತವೆ. ಜನಜೀವನ ಸುಧಾರಣೆಯಾಗಬೇಕು; ಪ್ರಜಾಪ್ರಭುತ್ವದ ತಳಹದಿ ಸುಭದ್ರವಾಗಿರಬೇಕು ಎಂಬುದಾದರೆ ಮೊದಲು ಅತ್ಯಂತ ಕೆಳಹಂತದಿಂದ ಸುಧಾರಣೆಯಾಗಬೇಕು. ಪ್ರಜಾಪ್ರಭುತ್ವದ ತಳಹದಿ ಸುಭದ್ರವಾಗಿದ್ದರೆ ರಾಷ್ಟ್ರ ಸುರಕ್ಷಿತವಾಗಿರುತ್ತದೆ.

**ಜೀತ ಸಂಹಾರ**

ಅನಿಷ್ಟ ಪದ್ಧತಿಗಳ ನಿರ್ಮೂಲನೆಗಾಗಿ ಹಿಂದಿನಿಂದಲೂ ಸಮಾಜಸುಧಾರಕರ ಹಾಗೂ ಬುದ್ಧಿಜೀವಿಗಳ ಪ್ರಯತ್ನ ನಡೆದೇ ಇದೆ. ಕೆಲವು ಬ್ರಿಟಿಷ್ ಅಧಿಕಾರಿಗಳೂ ಜೀತಪದ್ಧತಿಯ ವಿರುದ್ಧ ಕಾಯದೆ-ಕಾನೂನುಗಳನ್ನು ಜಾರಿಗೊಳಿಸಿದರು. ೧೯೩೦ರ ಅಂತರರಾಷ್ಟ್ರೀಯ ಶ್ರಮಿಕರ ಸಮ್ಮೇಳನದಲ್ಲಿ ಜೀತಪದ್ಧತಿ ಮತ್ತು ಬಲವಂತದ ದುಡಿಮೆಯನ್ನು ನಿರ್ಮೂಲಗೊಳಿಸುವ ನಿರ್ಣಯವನ್ನು ಕೈಗೊಳ್ಳಲಾಯಿತು. ಆದರೂ ಜಡ್ಡುಗಟ್ಟಿದ ಸಾಮಾಜಿಕ ವ್ಯವಸ್ಥೆಯಲ್ಲಿ ನಿರೀಕ್ಷಿತ ಫಲ ದೊರಕಲಿಲ್ಲ. ಎಷ್ಟೋ ರಾಜ್ಯಗಳು ಇತ್ತ ಆಸಕ್ತಿ ವಹಿಸಲಿಲ್ಲ. ೧೯೪೭ರಲ್ಲಿ ನಡೆದ ಶ್ರಮ ಇಲಾಖೆಗಳ ಸಚಿವರ ಸಮ್ಮೇಳನದಲ್ಲಿ ಜನಾಂದೋಲನ ಕಾರ್ಯವನ್ನು ರೂಪಿಸಲಾಯಿತು. ಹಾಗೆಯೇ ಬಲವಂತದ ದುಡಿಮೆ ಹಾಗೂ ಜೀತಪದ್ಧತಿಯನ್ನು ಪ್ರತಿಬಂಧಿಸುವ ಸಂವಿಧಾನದ ೨೩ನೇ ವಿಧಿಯನ್ನು ಎತ್ತಿ ಹಿಡಿಯಲಾಯಿತು. ಆದ್ದರಿಂದ ಸೆಕ್ಷನ್ ೩೭೪ರ ಪ್ರಕಾರ ಒಡೆಯರ ವಿರುದ್ಧ ಕ್ರಮ ಕೈಗೊಳ್ಳಲು ಅವಕಾಶವಾಯಿತು. ಸ್ವಾತಂತ್ರ್ಯೋತ್ತರ ಸರಕಾರವು ರಚಿಸಿದ ಸಮಿತಿಗಳಲ್ಲಿ ಒಂದಾದ ೧೯೬೧ರ ದೇಬರ್ ಕಮೀಷನ್ನಿನಂತಹ ಕಾನೂನುಗಳನ್ನು ೧೯೭೬ರ ಕೇಂದ್ರ ಸರಕಾರವೂ ಜೀತಪದ್ಧತಿಯನ್ನು ಅಳಿಸಿಹಾಕಲು ಬಳಸಿಕೊಂಡಿತು. ಆಗ ಗುರುತಿಸಲ್ಪಟ್ಟ ಕೆಲವು ಜೀತದಾಳುಗಳೇನೋ ಬಿಡುಗಡೆಯಾದರು. ಆದರೆ ಅವರಿಗೆ ಯೋಜಿತ ಪುನರ್ವಸತಿ ಎಷ್ಟರಮಟ್ಟಿಗೆ ದೊರಕಿತೋ ತಿಳಿಯದು. ಅಂತೂ ಜೀತದಾಳುಗಳನ್ನು ಗುರುತಿಸುವ ಕಾರ್ಯ ನಿರಂತರ ನಡೆಯಬೇಕು; ಜೀತಮುಕ್ತರು ಸ್ವಾವಲಂಬಿಗಳಾಗಿ ಬದುಕಲು ಸೂಕ್ತವಾದ ಪುನರ್ವಸತಿ ಲಭ್ಯವಾಗಬೇಕು.

ಸಾರಿಸಲ್ಪಟ್ಟ ತಿಪ್ಪೆಯಂಥ ಸಮಾಜದ ಮೇಲುಸ್ವರೂಪದಿಂದ 'ಜೀತಪದ್ಧತಿ ಇನ್ನೂ ಇದೆಯೇ', ಎಂಬಂಥ ಪ್ರಶ್ನೆ ಉದ್ಭವವಾಗಬಹುದು! ಇದಕ್ಕೆ ಸರಿಯಾದ ಉತ್ತರ ದೊರಕುವುದು ಸಮಾಜವನ್ನು ಬಗೆದು ನೋಡಿದಾಗ ಮಾತ್ರ! ಸರಕಾರಗಳ, ಸಂಬಂಧಿಸಿದ ಅಧಿಕಾರಿಗಳ ಇಚ್ಛಾಶಕ್ತಿಯ ಕೊರತೆ ಹಾಗೂ ಸ್ವಯಂಸೇವಾ ಸಂಸ್ಥೆಗಳ, ಸಾಮಾಜಿಕ ಕಾರ್ಯಕರ್ತರ ನಿರ್ಲಕ್ಷ್ಯದಿಂದ ವರದಕ್ಷಿಣೆ, ಬೆತ್ತಲೆ ಸೇವೆ, ಬಾಲ್ಯವಿವಾಹ, ಅಸ್ಪೃಶ್ಯತೆ, ಭ್ರಷ್ಟಾಚಾರ, ದೇವದಾಸಿ ಪದ್ಧತಿ ಮುಂತಾದುವುಗಳು ಒಳಒಳಗೇ ಉಸಿರಾಡುತ್ತಿರುವಾಗ ಜೀತದ ಅಸ್ತಿತ್ವದ ಬಗ್ಗೆ ಅನುಮಾನ ಏಕೆ ?

**ಎಸ್. ಆರ್. ಗುರುನಾಥ್**
೧೧ನೇ ತಿರುವು, ಐಯುಡಿಪಿ ಬಡಾವಣೆ, ಚಿತ್ರದುರ್ಗ - ೫೭೭ ೫೦೧

# ನವನೀತ←ಫಲ→ಶ್ರುತಿ

**ಅವೊಕಾಡೋದ ಮೂಲಸ್ಥಾನ ಅಮೆರಿಕಾ. ಬಿ. ಜಿ. ಎಲ್. ಸ್ವಾಮಿಯವರ 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾ'ದಲ್ಲಿ ಇದರ ಪ್ರಸ್ತಾಪವಾಗಿದೆಯೇ ಎಂದು ಪರೀಕ್ಷಿಸಿದೆ. ಯಾವ ಪ್ರಸ್ತಾಪವೂ ಆಗಿರಲಿಲ್ಲ. ಅಂದರೆ ಅದು ದಕ್ಷಿಣ ಅಮೆರಿಕಾದ ಮೂಲವಲ್ಲ. ವಿಶೇಷವಾಗಿ ಮಧ್ಯ ಅಮೆರಿಕಾ ಮತ್ತು ದಕ್ಷಿಣ ಮೆಕ್ಸಿಕೊ ಇದರ ತೌರು. ಮೆಕ್ಸಿಕೊ ಪುರಾತತ್ವ ದಾಖಲೆಗಳು ಕ್ರಿ.ಪೂ. ೬೦೦೦ದಷ್ಟು ಹಿಂದೆಯೇ ಈ ಹಣ್ಣಿನ ಬಳಕೆಯ ಸಾಕ್ಷಿ ಒದಗಿಸಿವೆ. ಇದನ್ನು ಮಧ್ಯ ಅಮೆರಿಕಾದ ಮೂಲ ಜನಾಂಗ ಅಜ್ಟೆಕ್‌ರು 'ಅಹುಅಕಟಲ್' (Ahuacatl) ಎಂದು ಹೆಸರಿಸಿದ್ದರು.**

**ಡಾ|| ಎನ್. ಎಸ್. ಲೀಲಾ**

**ಈ** ಲೇಖನದ ಶೀರ್ಷಿಕೆ ಗಮನಿಸಿ. 'ಫಲ' ಎಂಬ ಪದ ಪೂರ್ವಪದವಾದ 'ನವನೀತ'ದ ಕಡೆಗೂ, ಪರಪದವಾದ 'ಶ್ರುತಿ'ಯ ಕಡೆಗೂ ಬಾಣದ ಗುರುತಿನಿಂದ ಹೊಂದಿಕೊಂಡಿದೆ. ಹಾಗಾಗಿ ಈ ಪುರಾಣ ನವನೀತ ಫಲದ ಫಲಶ್ರುತಿ. ನವನೀತ ಫಲ (ಬೆಣ್ಣೆ ಹಣ್ಣು - ಬಟರ್ ಫ್ರೂಟ್)ವನ್ನು ಸಾಮಾನ್ಯವಾಗಿ 'ಅವೊಕಾಡೋ' ಎಂದು ಕರೆಯುತ್ತೇವೆ. ಇದು ಭಾರತೀಯರಿಗೆ ಅಷ್ಟಾಗಿ ಪರಿಚಿತವಲ್ಲದ ಹಣ್ಣೇ ಎನ್ನಬಹುದು. ಅಪರೂಪಕ್ಕೆ 'ರಿಲೈಯನ್ಸ್ ಫ್ರೆಷ್' ಮಳಿಗೆಯಲ್ಲಿ ಇಲ್ಲವೇ ಎಂ.ಜಿ. ರೋಡ್ ಬಳಿ ಇರುವ ನೀಲ್‌ಗಿರೀಸ್ ಹಣ್ಣಿನ ಮಳಿಗೆಯಲ್ಲಿ ಕಾಣಬಹುದು. ಇದರ ಬೆಲೆ ಸೇಬಿಗಿಂತಲೂ ಅಧಿಕ. ಹಾಗಾಗಿ ಅನೇಕರಿಗೆ ಇದು ಎಟುಕದ ಫಲ. ನನ್ನ ಮಟ್ಟಿಗೆ ಹೇಳಬಹುದಾದಲ್ಲಿ ಈ ಫಲದ ಹೆಸರನ್ನು ನಾನು ಕೇಳಿದ್ದೇ ಕಾಲೇಜಿಗೆ ಸೇರಿದಾಗ, ಅದೂ ನಮ್ಮ ಸಸ್ಯಶಾಸ್ತ್ರ ಪಾಠದಲ್ಲಿ. ಪಠ್ಯದಲ್ಲಿ ಹಣ್ಣುಗಳ ವರ್ಗೀಕರಣ ಕುರಿತ ಬೋಧನೆ ನಡೆಯಬೇಕಿತ್ತು. ನಮ್ಮ ಸಸ್ಯಶಾಸ್ತ್ರದ ಅಧ್ಯಾಪಕಿ ಅದೇ ತಾನೆ ಅಮೆರಿಕಾದಿಂದ ಹಿಂದಿರುಗಿದ್ದರು. ಆ ಅಮೆರಿಕಾತನವನ್ನು ಪ್ರಾಯೋಗಿಕವಾಗಿ ಅನುಸರಿಸಲು ತರಗತಿಗೆ ಹಲವಾರು ಹಣ್ಣುಗಳ ನಮೂನೆಗಳನ್ನು ತಂದು ರಸಭರಿತವಾಗಿ ಬೋಧಿಸಿದ್ದು ಅಂದಿನ ಕಾಲಕ್ಕೆ ವಿಶೇಷವೇ ಎನ್ನಬಹುದು. ಓಟೆಯಿರುವ ಮಾವು, ಆಲಿವ್, ತೆಂಗು, ಪೀಚ್‌ಗಳನ್ನು ಓಟೆ ಹಣ್ಣು (ಡ್ರೂಪ್)ಗಳೆಂದೂ, ಓಟೆಯಿಲ್ಲದ ರಸಭರಿತ ದ್ರಾಕ್ಷಿ, ಟೊಮ್ಯಾಟೋ, ಕಾಫಿ ಮುಂತಾದ ಹಣ್ಣುಗಳನ್ನು ರಸಭರಿತ (ಬೆರ್ರಿ) ಹಣ್ಣುಗಳೆಂದು ವರ್ಗೀಕರಿಸುವುದು ಸಾಮಾನ್ಯ. ಈ ಎರಡು ವಿಧಗಳನ್ನು ವಿವರಿಸಿ ಅವೊಕಾಡೋ ಹಣ್ಣನ್ನು ಚಾಕುವಿನಿಂದ ಉದ್ದ ಸೀಳಿ ಒಂದು ಭಾಗವನ್ನು ಅಂಗೈಯಲ್ಲಿ ಹಿಡಿದು ಮತ್ತೊಂದು ಮೇಲ್ಭಾಗವನ್ನು ಡಬ್ಬಿಯ ತಿರುಪಿನ ಮುಚ್ಚಳ ತೆಗೆಯುವಂತೆ ತಿರುಗಿಸಿ ಹಣ್ಣನ್ನು ಇಬ್ಭಾಗಿಸಿ ಅದರಲ್ಲಿದ್ದ ದಪ್ಪ ಬೀಜವನ್ನು ತೋರಿಸುತ್ತಾ ಇದು ಯಾವ ಬಗೆಯ ಹಣ್ಣು, ಎಂದು ಪ್ರಶ್ನಿಸಿದ್ದರು. ಎಲ್ಲರೂ ಒಕ್ಕೊರಲಿನಿಂದ 'ಡ್ರೂಪ್' ಎಂದದ್ದು ಇಂದೂ ಹಸಿಯಾಗಿದೆ.



ಆಗ ನಮ್ಮ ಮೇಡಮ್ ''ಸಾಮಾನ್ಯವಾಗಿ ಇದನ್ನು 'ಡ್ರೂಪ್' ಎಂದೇ ಗುರುತಿಸುತ್ತಾರೆ. ಆದರೆ ವೈಜ್ಞಾನಿಕವಾಗಿ ಇದು ಬೆರ್ರಿ'' ಎಂದರು. ಡ್ರೂಪ್‌ನಲ್ಲಿ ಬೀಜದ ಸುತ್ತ ನಾರಿನ ಹೊರಕವಚವಿರುತ್ತದೆ. ಅಂತಹ ಕವಚ ಅವೊಕಾಡೋ ಬೀಜಕ್ಕೆ ಇಲ್ಲದ ಕಾರಣ ಇದು ಬೆರ್ರಿ ಎಂದಾಗ, ಆ ಹಣ್ಣಿನ ಬಗೆಗೆ ಹೆಚ್ಚು ತಲೆಕೆಡಿಸಿಕೊಂಡಿರಲಿಲ್ಲ.

ಯೂರೋಪಿನ ಪ್ರವಾಸದಲ್ಲಿ ಅಲ್ಲಿನ ಮಳಿಗೆಗಳಲ್ಲಿ ಅವೊಕಾಡೋ ನೋಡಿದ್ದೆ. ಎಂದೂ ಅದನ್ನು ಖರೀದಿಸುವ ಪ್ರಯತ್ನ ಮಾಡಿರಲಿಲ್ಲ. ಅಮೆರಿಕಾ ಪ್ರವಾಸದಲ್ಲಿ ಒಮ್ಮೆ ಕುತೂಹಲಕ್ಕಾಗಿ ಭಾರಿ ಬೆಲೆಯನ್ನು ತೆತ್ತು ಅವೊಕಾಡೋ ಖರೀದಿಸಿದ್ದೆ. ಅದನ್ನು ಕತ್ತರಿಸಿ ತಿಂದಾಗ ಯಾವ ರುಚಿಯೂ ಇಲ್ಲದ ಅದು ವಾಕರಿಕೆ ಬರಿಸುವಂತಾಗಿತ್ತು. ಸುಲಭ ಬೆಲೆಗೆ ಸಿಗುತ್ತಿದ್ದ, ಪರಿಚಿತವಾಗಿದ್ದ ಸೇಬಿನ ಮುಂದೆ ಅವೊಕಾಡೋನಿಂದ ನಾನು ಆಕರ್ಷಿತಳಾಗಲಿಲ್ಲ.

ಆಸ್ಟ್ರೇಲಿಯಾದ ನನ್ನ ತಮ್ಮನ ಮನೆಗೆ ಭೇಟಿ ಇತ್ತಾಗ ಅವರ ಮನೆಯಲ್ಲಿ ಅವೊಕಾಡೋ ಧಾರಾಳವಾಗಿ ಬಳಕೆಯಲ್ಲಿದ್ದದ್ದು ಕಂಡುಬಂತು. ಮೃದುವಾದ ಅದರ ತಿರುಳನ್ನು ಬ್ರೆಡ್‌ಗೆ ಹರವಿ ಉಪ್ಪು ಮತ್ತು ಮೆಣಸು ಹಾಕಿ ತಿನ್ನುವುದು, ಹಣ್ಣಿನ ಸಲಾಡ್ ಜೊತೆ ಬೆರೆಸುವುದು, ತರಕಾರಿ ಸಲಾಡ್‌ನೊಂದಿಗೆ ನಿಂಬೆ, ಉಪ್ಪು ಹಾಕಿ ಚಪ್ಪರಿಸುವುದು ನೋಡಿ ಇದರಲ್ಲೇನು ರುಚಿ ಕಂಡಿದ್ದೀರಿ, ಎಂದು ನನ್ನ ಅತ್ತಿಗೆಯನ್ನು ಕೇಳಿದ್ದೆ. ಅಲ್ಲಿ ಇದನ್ನು 'ಶ್ರೀಮಂತ ಹಣ್ಣು' ಎಂದೇ ಪರಿಗಣಿಸುವುದಿದೆ. ಅದನ್ನು ಭುಂಜಿಸಲು ವಿಶೇಷವಾಗಿ ನಾಲಿಗೆಗೆ ರುಚಿ ಹತ್ತಬೇಕು, ಎಲ್ಲರಿಗೂ ಅದು ಹಿಡಿಸುವುದಿಲ್ಲ ಎಂದಿದ್ದಳು. ಇದನ್ನು ಹಣ್ಣು ಮತ್ತು ತರಕಾರಿಗಳೆರಡರೊಂದಿಗೂ ಬೆರೆಸಿ ತಿನ್ನುತ್ತಿದ್ದರಿಂದ ಇದು ತರಕಾರಿಯೋ ಹಣ್ಣೋ ಎಂಬ ಜಿಜ್ಞಾಸೆ ಕಾಡಿತು. ಟೊಮ್ಯಾಟೋ, ಬಾಳೆಗಳಂತೆ ಹಣ್ಣಿನ ಗುಂಪಿಗೆ ಸೇರಿಸಬಹುದಾದರೂ ತರಕಾರಿಯಂತೆಯೂ ಬಳಸಬಹುದಾದ ಪೋಷಕಾಂಶಗಳ ಗಣಿ ಎನ್ನುವುದು ಅವೊಕಾಡೋದ ವಿವರಣೆಯಾಗಬಹುದು.

ಕೆಲವು ದಿವಸಗಳ ಹಿಂದೆ ನವಕರ್ನಾಟಕ ಪಬ್ಲಿಕೇಷನ್ಸ್ ಕಛೇರಿಗೆ ಹೋಗಿದ್ದಾಗ ಪ್ರಕಾಶಕರಾದ ಶ್ರೀ ಆರ್. ಎಸ್. ರಾಜಾರಾಮ್, ತಮ್ಮ ಪ್ರೆಸ್ಸಿನ ತೋಟದಲ್ಲಿ ಬೆಳೆದ ಅವೊಕಾಡೋವನ್ನು ಆಸ್ಥೆಯಿಂದ ಎಲ್ಲರಿಗೂ ಹಂಚುತ್ತಿದ್ದರು. ನನಗೂ ೩ ಹಣ್ಣು ನೀಡಿ, ''ಒಂದೆರಡು ದಿನಗಳಲ್ಲಿ ಸ್ವಲ್ಪ ಮೆತ್ತಗಾಗುತ್ತದೆ, ಆಗ ತಿನ್ನಬಹುದು. ಇದಕ್ಕೆ ಯಾವ ರುಚಿ, ವಾಸನೆಯೂ ಇಲ್ಲ. ಜೇನುತುಪ್ಪದೊಂದಿಗೆ ತಿಂದರೆ ಚೆನ್ನಾಗಿರುತ್ತದೆ. ಇಲ್ಲದಿದ್ದರೆ ಸಕ್ಕರೆ, ಚಟ್ನಿಪುಡಿ, ಮೆಣಸುಪುಡಿ, ಉಪ್ಪು ಬೆರೆಸಿ ತಿನ್ನಬಹುದು'' ಎಂದು ವಿವರಿಸಿದ್ದರು. ಬೆಂಗಳೂರಿನಲ್ಲೇ ಬೆಳೆದ ಅವೊಕಾಡೋ ನೋಡಿ ಇದರ ಪೂರ್ವೇತಿಹಾಸ ಕೆದಕುವ ಇಚ್ಛೆಯೇ ಈ ಲೇಖನಕ್ಕೆ ಮೂಲ. ಕೂಡಲೇ ನವಕರ್ನಾಟಕದ ಫೋಟೊಗ್ರಫಿ ಪಟು ಎಂದೇ ಹೆಸರು ಮಾಡಿರುವ ಶ್ರೀ ಕೆ. ಪಿ. ಸ್ವಾಮಿಯವರಿಗೆ ಅವೊಕಾಡೋ ಸಸ್ಯದ ಚಿತ್ರಣ ಒದಗಿಸುವಂತೆ ಕೇಳಿಕೊಂಡೆ. ಅದೂ ಸಿದ್ಧವಾಯಿತು.

ಅವೊಕಾಡೋದ ಮೂಲಸ್ಥಾನ ಅಮೆರಿಕಾ. ಬಿ. ಜಿ. ಎಲ್. ಸ್ವಾಮಿಯವರ 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾ'ದಲ್ಲಿ ಇದರ ಪ್ರಸ್ತಾಪವಾಗಿದೆಯೇ ಎಂದು ಪರೀಕ್ಷಿಸಿದೆ. ಯಾವ ಪ್ರಸ್ತಾಪವೂ ಆಗಿರಲಿಲ್ಲ. ಅಂದರೆ ಅದು ದಕ್ಷಿಣ ಅಮೆರಿಕಾದ ಮೂಲವಲ್ಲ. ವಿಶೇಷವಾಗಿ ಮಧ್ಯ ಅಮೆರಿಕಾ ಮತ್ತು

ದಕ್ಷಿಣ ಮೆಕ್ಸಿಕೊ ಇದರ ತೌರು. ಮೆಕ್ಸಿಕೊ ಪುರಾತತ್ವ ದಾಖಲೆಗಳು ಕ್ರಿ.ಪೂ. ೬೦೦೦ದಷ್ಟು ಹಿಂದೆಯೇ ಈ ಹಣ್ಣಿನ ಬಳಕೆಯ ಸಾಕ್ಷಿ ಒದಗಿಸಿವೆ. ಇದನ್ನು ಮಧ್ಯ ಅಮೆರಿಕಾದ ಮೂಲ ಜನಾಂಗ ಅಜ಼್್‌ಟೆಕ್‌ರು 'ಅಹುಅಕಟಲ್' (Ahuacatl) ಎಂದು ಹೆಸರಿಸಿದ್ದರು. ಇದರರ್ಥ ಪುರುಷರ ಶಿಶ್ನ ಎಂದು. ಎರಡು ಜೋಡಿ ಹಣ್ಣುಗಳು ಮರದಲ್ಲಿ ನೇತುಬಿದ್ದಿದ್ದರೆ ಅದು ಶಿಶ್ನವನ್ನು ಹೋಲುತ್ತಿದ್ದಂತೆ ಕಂಡದ್ದರಿಂದ ಆ ಹೆಸರು ಇಟ್ಟಿರಬೇಕೆಂಬ ಊಹೆ ಇದೆ. ನಂತರ ಸ್ಪೇನ್ ದೇಶದವರು ತಮ್ಮ ಸಾರ್ವಭೌಮತ್ವದಲ್ಲಿ ಇಲ್ಲಿ ನೆಲೆಸತೊಡಗಿದಾಗ ಮೂಲನಾಮ ಅಪಭ್ರಂಶಗೊಂಡು ಅಹುಅಕೇಟ್ (Ahuacate), ಅಗ್ವಾಕೇಟ್ (Aguacate) ಎಂದಾಗಿ, ಬ್ರಿಟಿಷರ ನಾಲಿಗೆಯಲ್ಲಿ ಅವೊಕಾಡೋ ಆಗಿ ಜಗತ್ಪ್ರಸಿದ್ಧಿಯಾಯಿತು. ಈ ಪದ ಉಚ್ಚಾರಣೆಗೆ ಸೂಕ್ತವಲ್ಲವೆಂದು ತಮಗೆ ಪರಿಚಿತವಾದ ಪೇರು (Pear) ಹಣ್ಣನ್ನೇ ಹೋಲುತ್ತಿದ್ದರಿಂದಲೂ ಹಾಗೂ ಇದರ ಹೊರ ಸಿಪ್ಪೆ ಮೊಸಳೆ ಚರ್ಮದಂತೆ ಒರಟಾಗಿದ್ದರಿಂದಲೂ ಅದನ್ನು 'ಮೊಸಳೆ ಪೇರು' (Alligator Pear) ಎಂದು ನಾಮಕರಣ ಮಾಡಿದ್ದರು. ಈ ಹಣ್ಣು ಮೆಕ್ಸಿಕೋದಿಂದ ಉತ್ತರ ಮತ್ತು ದಕ್ಷಿಣ ಅಮೆರಿಕಾಕ್ಕೂ ಹರಡಿದಾಗ ಪೆರು ದೇಶದ ಮೂಲವಾಸಿಗಳಾಗಿದ್ದ ಇಂಕಾಗಳು ಇದಕ್ಕೆ 'ಪಲ್ಟಾ' (Palta) ಎಂದೇ ಕರೆದರು. ಹೀಗೆ ದಕ್ಷಿಣ ಮೆಕ್ಸಿಕೋದಿಂದ ಅಮೆರಿಕಾದ ಉದ್ದಗಲಕ್ಕೂ ಹರಡಿದ ಇದರ ಕೃಷಿ ೧೬೯೬ರ ಹೊತ್ತಿಗೆ ವೆಸ್ಟ್ ಇಂಡೀಸ್ ತಲುಪಿತು. ಆ ನಂತರ ೧೬ನೇ ಶತಮಾನದಲ್ಲಿ ಫಿಲಿಪ್ಪೀನ್ಸ್, ೧೭೫೦ರಲ್ಲಿ ಈಸ್ಟ್ ಇಂಡೀಸ್, ೧೭೮೦ರಲ್ಲಿ ಮಾರಿಷಿಯಸ್, ೧೮೩೦ರ ವೇಳೆಗೆ ಸಿಂಗಪುರದಲ್ಲೂ ಇದನ್ನು ಬೆಳೆಸಲಾರಂಭಿಸಿದರು.

ಇದು ಭಾರತ ತಲುಪಿದ್ದಾದರೂ ಎಂದು, ಎಂಬ ಕುತೂಹಲದಿಂದ ಪಶ್ಚಿಮ ಘಟ್ಟಗಳಲ್ಲಿ ಇದು ಬೆಳೆಯುತ್ತಿದೆ ಎಂಬ ಕಾರಣಕ್ಕಾಗಿ ಕೆಲವೊಂದು ಪುಸ್ತಕಗಳನ್ನು ತಿರುವಿಹಾಕಿದೆ. ಕರ್ನಾಟಕ ಬಯೋಡೈವರ್ಸಿಟಿ ರೆಜಿಸ್ಟರಿ ಪಟ್ಟಿಯಲ್ಲಿ ಇದನ್ನು ಸೇರಿಸಿಲ್ಲ. ಪಶ್ಚಿಮ ಘಟ್ಟದ ಔಷಧೀಯ ಪುಸ್ತಕಗಳಲ್ಲೂ ನಮೂದಿಸಿಲ್ಲ. ಹಾಗಾಗಿ ಭಾರತೀಯ ವಿಜ್ಞಾನ ಮಂದಿರದ ಸೆಂಟರ್ ಫಾರ್ ಇಕಲಾಜಿಕಲ್ ಸೈನ್ಸಸ್ (CES) ವಿಭಾಗಕ್ಕೆ ಫೋನಾಯಿಸಿ ಅಲ್ಲಿಯ ಸಂಶೋಧನಾ ವಿದ್ಯಾರ್ಥಿಯನ್ನು ಅವೊಕಾಡೋದ ಭಾರತದ ಜಾತಕ ಕೇಳಿದೆ. ಈ ವಿಭಾಗದಲ್ಲಿ ದಾಖಲಾಗಿರುವಂತೆ ೧೮೯೨ರಲ್ಲಿ ಮದ್ರಾಸ್ ಮತ್ತು ಬೆಂಗಳೂರಿನ ಸುತ್ತಮುತ್ತ ಇದನ್ನು ಬೆಳೆಯುತ್ತಿದ್ದ ಮಾಹಿತಿ ಇದೆ. ಬಹುಶಃ ಊಟಿ ಮತ್ತು ಕೊಡಗುಗಳಲ್ಲಿ ಎಸ್ಟೇಟ್‌ಗಳನ್ನು ಮಾಡಿಕೊಂಡಾಗ ಬ್ರಿಟಿಷರು ಇದನ್ನು ಪರಿಚಯಿಸಿರಬೇಕು. ರುಚಿಯಾದ ಮಾವಿನಹಣ್ಣಿನ ತೌರೂರಾದ ಭಾರತದಲ್ಲಿ ಹೆಚ್ಚು ಸವಿಯಿಲ್ಲದ ಅವೊಕಾಡೋ ತನ್ನ ಅಸ್ತಿತ್ವ ಕಂಡುಕೊಳ್ಳುವಲ್ಲಿ ವಿಫಲವಾಗಿದೆ.

ಇಂದು ಜಗತ್ತಿನಾದ್ಯಂತ ನೂರಾರು ವಿಧದ ಅವೊಕಾಡೋಗಳನ್ನು ಬೆಳೆಸಲಾಗುತ್ತಿದೆ. ಆದರೆ ಮುಖ್ಯವಾಗಿ ೩ ಪ್ರಭೇದಗಳನ್ನು ಗುರುತಿಸಬಹುದು. ಅವೆಂದರೆ :

೧. ಮೆಕ್ಸಿಕನ್ ಅವೊಕಾಡೋ (Persea drymifolia)
೨. ಗ್ವಾಟೆಮಾಲಾ ಅವೊಕಾಡೋ (Persea guatemalensis)
೩. ವೆಸ್ಟ್ ಇಂಡಿಯನ್ ಅವೊಕಾಡೋ (Persea americana)



ಮೊಳಕೆ ಪಡೆಯುವ ವಿಧಾನ

ಇವುಗಳಲ್ಲಿ ಮೆಕ್ಸಿಕನ್ ವಿಧ ಅತ್ಯಂತ ಸಣ್ಣ ಗಾತ್ರದ್ದು. ಹೊರ ಸಿಪ್ಪೆ ನುಣುಪಾಗಿ ಇದ್ದು ಬೀಜ ಬಿಡಿಯಾಗಿದೆ. ಗ್ವಾಟೆಮಾಲಾ ವಿಧದಲ್ಲಿ ಹೊರ ಸಿಪ್ಪೆ ಒರಟಾಗಿದ್ದು ಬೀಜ ಭದ್ರವಾಗಿ ಒಳ ಪದರಕ್ಕೆ ಅಂಟಿಕೊಂಡಿದೆ. ವೆಸ್ಟ್ ಇಂಡೀಸ್ ವಿಧ ಅತ್ಯಂತ ದೊಡ್ಡ ಗಾತ್ರದ್ದಾಗಿದ್ದು ಹೊರ ಸಿಪ್ಪೆ ನವಿರಾಗಿದೆ.

ಅವೊಕಾಡೋ, ದಾಲ್ಚಿನ್ನಿ ಮತ್ತು ಕರ್ಪೂರ ಗಿಡಗಳು ಸೇರಿರುವ ಲಾರೆಸಿಯೆ ಕುಟುಂಬಕ್ಕೆ ಸೇರಿದೆ. ಈ ಕುಟುಂಬಕ್ಕೆ ಸೇರಿದ ಸಸ್ಯಗಳು ವಿಶೇಷವಾಗಿ ಆಗ್ನೇಯ ಏಷಿಯಾ, ಮಧ್ಯ ಮತ್ತು ದಕ್ಷಿಣ ಅಮೆರಿಕಾ ಮೂಲದವು. ಈ ಕುಟುಂಬಕ್ಕೆ ಸೇರಿದ ವಿಶೇಷ ಸಸ್ಯವೆಂದರೆ ಲಾರಸ್ ನೊಬಿಲಿಸ್ (Laurus nobilis). ಇದು

ಮೆಡಿಟರೇನಿಯನ್ ಪ್ರದೇಶಗಳಲ್ಲಿ ಬೆಳೆಯುತ್ತಿದ್ದು, ಪುರಾತನ ಗ್ರೀಕರು ಪೈಥಿಯಾನ್ ಕ್ರೀಡಾ ಸ್ಪರ್ಧೆಗಳಲ್ಲಿ ಗೆದ್ದವರಿಗೆ ಈ ಸಸ್ಯದಿಂದ ತಯಾರಿಸಿದ ಟೊಪ್ಪಿಗೆಯನ್ನು ತಲೆಗೆ ಏರಿಸಿ ಗೌರವಿಸುತ್ತಿದ್ದರೆಂದು ತಿಳಿದುಬಂದಿದೆ. ಈ 'ಲಾರಸ್' ಪದವೇ ಇಂದಿಗೂ ಕವಿ ಶ್ರೇಷ್ಠರನ್ನು ಪೊಯೆಟ್ ಲಾರಿಯೆಟ್ ಎಂದೂ ವಿಶ್ವದ ಅತ್ಯುನ್ನತ ಪ್ರಶಸ್ತಿಗೆ ನೊಬೆಲ್ ಲಾರಿಯೆಟ್ ಎಂದೂ ಬಳಕೆಯಾಗಿರುವುದನ್ನು ಕಾಣಬಹುದು.

ಅವೊಕಾಡೋ ಹಣ್ಣುಗಳು ವಿವಿಧ ರೂಪ, ಗಾತ್ರ ಮತ್ತು ಬಣ್ಣಗಳಲ್ಲಿ ದೊರೆಯುವುದನ್ನು ಕಾಣಬಹುದು. ಮೆಕ್ಸಿಕನ್ ವಿಧ ಕೇವಲ ಕೋಳಿಮೊಟ್ಟೆಯ ಗಾತ್ರದ್ದಾಗಿದ್ದರೆ ಕೆಲವೊಂದು ವಿಧದಲ್ಲಿ ೧ರಿಂದ ೨ ಕಿಲೋಗ್ರಾಂ ತೂಕದ ಹಣ್ಣುಗಳೂ ಇವೆ.

ಇದರ ತಿರುಳು ಹಳದಿ ಮಿಶ್ರಿತ ಹಸಿರು ಬಣ್ಣದ್ದಾಗಿ ನಯವಾಗಿ ಬೆಣ್ಣೆಯನ್ನು ಹೋಲುವುದರಿಂದಲೇ ನವನೀತ ಫಲ (ಬಟರ್ ಫ್ರೂಟ್) ಎಂಬ ಹೆಸರನ್ನು ಪಡೆದಿದೆ. ಜಗತ್ತಿನ ಯಾವುದೇ ಹಣ್ಣಿಗೆ ಹೋಲಿಸಿದರೆ ಇದರಲ್ಲಿರುವಷ್ಟು ಕೊಬ್ಬಿನಂಶ ಮತ್ಯಾವ ಹಣ್ಣಿನಲ್ಲೂ ಇಲ್ಲ. ಇದನ್ನು ಪೋಷಕಾಂಶಗಳ ಗಣಿಯೆಂದೇ ಕರೆಯಬಹುದು. ಒಂದು ಕಿಲೋಗ್ರಾಂ ತೂಕದ ತಿರುಳಿನಲ್ಲಿ ಸುಮಾರು ೫೬೦೦ ಕ್ಯಾಲೋರಿಗಳಿರುವ ಅಂದಾಜು ಮಾಡಬಹುದು. ಇದರ ಕೊಬ್ಬಿನಲ್ಲಿರುವ ಟ್ರೈ ಗ್ಲಿಸರೈಡ್‌ಗಳು ಉಳಿದ ಕೊಬ್ಬಿನಂತೆ ಹಾನಿಕಾರಕವಲ್ಲ. ವಿಶೇಷವಾಗಿ ಇದರಲ್ಲಿರುವ ಒಲಿಕ್ ಆ್ಯಸಿಡ್ ದೇಹದಲ್ಲಿ ಕೊಲೆಸ್ಟರಾಲ್ ಸಂಗ್ರಹಣೆಯಾಗದಂತೆ ತಡೆಯಬಲ್ಲದು. ಹಾಗಾಗಿ ಹೃದಯ ಮತ್ತು ರಕ್ತದೊತ್ತಡ ಕಾಪಾಡುವಲ್ಲಿ ಸಹಾಯಕ. ಇದಲ್ಲದೇ ವಿಟಮಿನ್ 'ಬಿ', 'ಸಿ' ಮತ್ತು 'ಇ'ಗಳು ಹೇರಳವಾಗಿವೆ. ಬಾಳೆಹಣ್ಣಿಗಿಂತ ಶೇಕಡ ೬೦ರಷ್ಟು ಹೆಚ್ಚು ಪೊಟ್ಯಾಸಿಯಂ ಇದರಲ್ಲಿದೆ. ಹಾಗಾಗಿ ಅವೊಕಾಡೋ ಹೃದಯದ ಸುಸ್ಥಿತಿಗೆ ಹೇಳಿಮಾಡಿಸಿದಂತಹ ಮೂಲವಾಗಬಲ್ಲದು.

ಇತ್ತೀಚೆಗೆ ಈ ಹಣ್ಣಿನ ವಿವಿಧ ಖಾದ್ಯಗಳು ಜನಪ್ರಿಯವಾಗುತ್ತಿವೆ. ವಿಶೇಷವಾಗಿ ಇದರ ಮಿಲ್ಕ್‌ಶೇಕ್ ಹಾಗೂ ಅಮೆರಿಕಾದ ವೈಶಿಷ್ಟ್ಯವಾದ ಗ್ವಾಕಮೋಲ್ ಡಿಪ್ (Guacomole) (ತಿರುಳಿನಿಂದ ತಯಾರಿಸಿದ ರಸ/ಚಟ್ನಿ) ಉಪ್ಪೇರಿಯೊಂದಿಗೆ ತಿನ್ನುವ ಹವ್ಯಾಸ ಹೆಚ್ಚುತ್ತಿದೆ.

ಗ್ವಾಕಮೋಲ್‌ನ ಮೂಲ ವಸ್ತು ಅವೊಕಾಡೋ. ಇತ್ತೀಚೆಗೆ ಕಲಬೆರಕೆ ಆಹಾರದ ಗ್ವಾಕಮೋಲ್‌ಗಳೂ ತಯಾರಾಗುತ್ತಿವೆ. ವಿಶೇಷವಾಗಿ ಹೈಡ್ರೋಜನೀಕರಣಗೊಂಡಿರುವ ಅಪರ್ಯಾಪ್ತ ಕೊಬ್ಬು (Hydrogenated unsaturated fat) ಬಳಸಿ ತಯಾರಿಸಲಾಗುತ್ತಿದೆ. ಇದನ್ನು ಕೊಳ್ಳಬೇಕಾದಾಗ ಎಚ್ಚರಿಕೆ ವಹಿಸುವುದು ಅಗತ್ಯ.

ಗೇ ಲಾರ್ಡ್ ಹಾಯ್‌ಸರ್ ಎಂಬ ಆಹಾರತಜ್ಞ ಅವೊಕಾಡೋದ ಗುಣಗಾನ ಮಾಡುತ್ತ, ಇದರಲ್ಲಿ ಮಾಂಸದಲ್ಲಿ ದೊರಕುವ ಪ್ರೋಟೀನ್, ಬೆಣ್ಣೆಯಲ್ಲಿ ಸಿಗುವ ಕೊಬ್ಬಿನಂಶ, ಹಸಿರು ತರಕಾರಿಗಳಿಂದ ಪಡೆಯಬಹುದಾದ ವಿಟಮಿನ್ ಮತ್ತು ಖನಿಜಗಳು, ದೃಢಫಲ (Nut)ಗಳಲ್ಲಿ ಕಾಣಬಹುದಾದ ಸುವಾಸನೆ ಇದ್ದು ಇದರ ಸೇವನೆ ಪರಿಪೂರ್ಣ ಆಹಾರವೇ ಆಗಬಲ್ಲದು ಎನ್ನುತ್ತಾನೆ.

ಕೊಬ್ಬಿನಂಶ ಹೆಚ್ಚಾಗಿರುವುದರಿಂದ ಬಾದಾಮಿ, ಆಲಿವ್ ಮತ್ತು ಸೋಯಾಬೀನ್ ಎಣ್ಣೆಗಳಿಗಿಂತ ಉತ್ತಮವಾದ ರಕ್ಷಣೆಯನ್ನು ಚರ್ಮಕ್ಕೆ ನೀಡಬಲ್ಲದು. ಸದ್ಯದಲ್ಲೇ ಇದರ ಸೋಪು, ಕ್ರೀಂಗಳ ಜಾಹೀರಾತು ಬಂದಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಸನ್‌ಸ್ಕ್ರೀನ್ ಕ್ರೀಂಗಳಿಗಂತೂ ಅತ್ಯಂತ ಸೂಕ್ತ ಎಂದೂ ಇದನ್ನು ಬಳಸಲಾಗುತ್ತಿದೆ. ಇದರ ಎಣ್ಣೆಯನ್ನು ಕಾಯಿಸಿದಾಗ ಅದರಿಂದ ಹೊಗೆ ಏಳಲು ೨೫೫°C ಬೇಕಾಗುವುದರಿಂದ ಇದರ ಎಣ್ಣೆಯಲ್ಲಿ ಕರಿದ ಪದಾರ್ಥಗಳೂ ಹೆಚ್ಚು ಹಾನಿಕರವಲ್ಲ ಎನ್ನಲಾಗಿದೆ.

ಅಮೆರಿಕಾದ ಮೂಲ ನಿವಾಸಿಗಳು ಉಪ್ಪಿನೊಂದಿಗೆ ಅವೊಕಾಡೋ, ಟೋರ್‌ಟಿಲ್ಲಾ (ರೊಟ್ಟಿ) ಮತ್ತು ಕಾಫಿಯ ಸೇವನೆ ಒಂದು ಸಂಪೂರ್ಣ ಆಹಾರ ಎಂದೇ ಪರಿಗಣಿಸುತ್ತಾರೆ. ಇದರ ಹೊರಸಿಪ್ಪೆಯನ್ನು ಆಮಶಂಕೆ ಹಾಗೂ ದುಂಡುಹುಳ ಪರಿಹಾರಕ್ಕೆ ದಿವ್ಯೌಷಧವಾಗಿ ಬಳಸುತ್ತಾರೆ. ಎಲೆಯನ್ನು ಅರೆದು ಇಲ್ಲವೇ ಸುಟ್ಟು ಗಾಯಗಳಿಗೆ ಹಚ್ಚುವುದಿದೆ. ಎಲೆಯಿಂದ ತಯಾರಿಸಿದ ಕಷಾಯ ಅತಿಸಾರ, ಗಂಟಲು ಬೇನೆ ಹಾಗೂ ಋತುಚಕ್ರದ ತೊಂದರೆಗಳಿಗೆ ಬಳಸುತ್ತಾರೆ. ಈ ಹಣ್ಣಿನ ಬೀಜದ ಪುಡಿ ತಲೆಹೊಟ್ಟಿನ ನಿವಾರಣೆಗೆ ಸೂಕ್ತ ಎನ್ನಲಾಗಿದೆ.

ಇಷ್ಟೆಲ್ಲಾ ಔಷಧೀಯ ಗುಣವಿರುವ ಅವೊಕಾಡೋ ಭಾರತದಲ್ಲಿ ಕೃಷಿಗೆ ಇನ್ನೂ ಹೆಚ್ಚು ಬಳಕೆಯಾಗದಿರುವುದು ವಿಷಾದದ ಸಂಗತಿ. ಉಷ್ಣವಲಯದ ಸಸ್ಯವಾದ್ದರಿಂದ ಸುಲಭವಾಗಿ ಬೆಳೆಸಬಹುದಾದ ಈ ಸಸ್ಯ ಇನ್ನಾದರೂ ಮನೆಯಂಗಳ, ರೈತರ ಹೊಲ, ತೋಟಗಳಲ್ಲಿ ತಲೆ ಎತ್ತಬಹುದೇ ?

**ಅವೊಕಾಡೋ ವಿಶಿಷ್ಟ ಲಕ್ಷಣಗಳು**

* ಸಸ್ಯವನ್ನು ಕಸಿಮಾಡಿ ಇಲ್ಲವೇ ಬೀಜದಿಂದಲೂ ಪಡೆಯಬಹುದು. ಕಸಿಮಾಡಿದ



ಗಿಡದಿಂದ ೩-೪ ವರ್ಷಗಳಲ್ಲಿ ಫಲ ದೊರಕುತ್ತದೆ. ಬೀಜದ ಮೊಳಕೆಯಿಂದ ಬೆಳೆಸಿದ ಮರ ೬ರಿಂದ ೮ ವರ್ಷಗಳಲ್ಲಿ ಫಲ ನೀಡಬಲ್ಲದು. ಕೆಲವು ವಿಶೇಷ ಸಂದರ್ಭಗಳಲ್ಲಿ ೧೯ರಿಂದ ೨೦ ವರ್ಷಗಳ ನಂತರ ಫಲ ನೀಡಿದ ನಿದರ್ಶನಗಳೂ ಇವೆ. ಫಲಾನುಭವಕ್ಕಾಗಿ ತಾಳ್ಮೆಯಿಂದ ಕಾಯಬೇಕಷ್ಟೆ.

* ತೆಂಗು, ಸೀಮೆಬದನೆಗಳಂತೆ ಅವೊಕಾಡೋದ ಬಲಿತ ಕಾಯಿ/ಹಣ್ಣಿನಿಂದ ಮೊಳಕೆ ಬರಿಸಬೇಕು. ಬರೀ ಬೀಜವನ್ನು ಮಾತ್ರ ಹಾಕುವಂತಿಲ್ಲ. ಒಂದು ಪಾತ್ರೆಯಲ್ಲಿ ಚಿತ್ರದಲ್ಲಿ ತೋರಿಸಿರುವಂತೆ, ನೀರನ್ನು ತೆಗೆದುಕೊಂಡು ಅವೊಕಾಡೋ ೧/೩ ಭಾಗ ನೀರಿನಲ್ಲಿ ಮುಳುಗುವಂತೆ ಕೆಲವು ದಿನ ಸೂರ್ಯರಶ್ಮಿಗೆ ಒಡ್ಡಿ ಇಟ್ಟರೆ ಮೊಳಕೆ ಒಡೆಯುವುದು. ಪಾತ್ರೆಯ ಬಾಯಿಯ ಮೇಲೆ ಭದ್ರವಾಗಿ ಕೂಡುವಂತೆ ಅದಕ್ಕೆ ಮೂರು ಕಡ್ಡಿಗಳನ್ನು ಚುಚ್ಚಿ ಇಡುವುದು ರೂಢಿಯಲ್ಲಿದೆ.

* ಫಲ ನೀಡಲಾರಂಭಿಸಿದ ಮರ ಒಂದು ವರ್ಷ ಹೆಚ್ಚಿನ ಫಸಲು ನೀಡಿದರೆ ಅದರ ಮುಂದಿನ ವರ್ಷ ಕಡಿಮೆ ಫಲ ನೀಡುವುದು.

* ಬಾಳೆ, ಮಾವುಗಳಂತೆ ಬಲಿತ ಕಾಯನ್ನು ಕೊಯ್ದು ಸ್ವಲ್ಪ ಕಾವು ನೀಡಿದರೆ ೩-೪ ದಿನಗಳಲ್ಲಿ ಹಣ್ಣಾಗುವುದು.

ಕಾಯಿಯನ್ನು ಭಿನ್ನ ಪೋಷಕ (Heterotrophic) ಎಂದು ಗುರುತಿಸುವುದಿದೆ. ಅಂದರೆ ಸಸ್ಯದ ಎಲೆಗಳು ಉತ್ಪತ್ತಿ ಮಾಡಿದ ಆಹಾರವನ್ನು ಪಡೆಯುವುದಲ್ಲದೆ ಕಾಯಿ ತನ್ನ ಸ್ವಸಾಮರ್ಥ್ಯ ದ್ಯುತಿಸಂಶ್ಲೇಷಣೆಯ ಮೂಲಕ ಆಹಾರವನ್ನು ಹೆಚ್ಚು ಪ್ರಮಾಣದಲ್ಲಿ ತಯಾರಿಸಿಕೊಳ್ಳುವುದು. ೧೯೨ರಲ್ಲಿ ನಡೆದ ಎರಡನೇ ವಿಶ್ವ ಅವೊಕಾಡೋ ಸಮ್ಮೇಳನದಲ್ಲಿ ಜರ್ಮನಿಯ ಬಾನ್ ವಿಶ್ವವಿದ್ಯಾಲಯದ ವಿಜ್ಞಾನಿ ಮೈಕೇಲ್ ಎಂ. ಬ್ಲಾಂಕೇ 'Photosynthesis of Avocado Fruit' ಎಂಬ ಲೇಖನ ಮಂಡಿಸಿದ್ದರು. ಅದರಲ್ಲಿ ಅವೊಕಾಡೋ ೧೦೦ ಗ್ರಾಂ ಹಣ್ಣಿನ ಭಾಗವನ್ನು ತಯಾರಿಸಲು ೮೦೬ ಕೆ.ಜೆ. (ಕಿಲೋ ಜೂಲ್ ಎಂದರೆ ಶಕ್ತಿ ಮತ್ತು ಕಾರ್ಯದ ಮೂಲಮಾನ. ೪.೨ ಜೂಲ್‌ಗಳು = ೧ ಕ್ಯಾಲರಿ)ಗಳ ಅಗತ್ಯವಿದೆ ಎಂದು ತೋರಿಸಿದ್ದಾರೆ. ಈ ಶಕ್ತಿಯು ಸೇಬುಗಳು ಬಳಸುವ ಶಕ್ತಿಯ ೩ರಿಂದ ೪ ಪಟ್ಟು ಅಧಿಕ. ೧೦೦ ಗ್ರಾಂ ಸೇಬಿನ ಹಣ್ಣಾಗಲು ಅದು ಬಳಸುವ ಶಕ್ತಿಮಾನ ಸುಮಾರು ೨೬.೨ ಕೆ.ಜೆ.

ಈ ಹೆಚ್ಚಿನ ಶಕ್ತಿಯನ್ನು ಅವೊಕಾಡೋ ತಾನು ತಯಾರಿಸುವ ಕೊಬ್ಬಿಗಾಗಿ ಮತ್ತು ಬೀಜದುತ್ಪತ್ತಿಗಾಗಿಯೇ ಬಳಸುವುದು.

(ಎಚ್ಚರಿಕೆ : ಅವೊಕಾಡೋ ಬೇರಿಗೆ ದುರಾಸೆ. ತಾನು ಬೇರೂರಿದೆಲ್ಲೆಡೆ ಇದ್ದದ್ದನ್ನೆಲ್ಲಾ ತಾನೇ ಹೀರಿಕೊಳ್ಳುವ ಸ್ವಾರ್ಥ ತೋರುತ್ತದೆ. ಹಾಗಾಗಿ ತನ್ನ ಹತ್ತಿರದಲ್ಲಿ ಬೇರೆ ಸಸ್ಯಗಳು ಬೆಳೆಯದಂತೆ ನೋಡಿಕೊಳ್ಳುತ್ತದೆ. ಇದನ್ನು ಬೆಳೆಸಲಿಚ್ಛಿಸುವವರು ಅವೊಕಾಡೋದ ಸಮೀಪದಲ್ಲೇ ದೀರ್ಘಕಾಲಿಕ ಸಸ್ಯಗಳನ್ನು ನೆಡುವಾಗ ಅಂತರ ಗಮನಿಸುವುದು ಒಳಿತು.)

**ಡಾ|| ಎನ್. ಎಸ್. ಲೀಲಾ**
ನಂ. ೧೦೫, ವೆಸ್ಟ್‌ಪಾರ್ಕ್ ಅಪಾರ್ಟ್‌ಮೆಂಟ್ಸ್, ೧೪ 'ಎ' ಕ್ರಾಸ್ ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

# ಜ್ಯೋತಿ ಬಸು ಎಂಬ ವಿಸ್ಮಯ




ನಾವು ಮತ್ತೊಬ್ಬರೊಂದಿಗೆ ಹೊಂದಿಕೊಳ್ಳದಿದ್ದರೆ, ಅವರ ಅಭಿಪ್ರಾಯಗಳಿಗೂ ಅವಕಾಶ ಕಲ್ಪಿಸಿಕೊಟ್ಟು ವ್ಯಾಪಕ ನೆಲೆಗಟ್ಟಿನ ಮೇಲೆ ನಿಲ್ಲದಿದ್ದರೆ, ಕುಸಿದು ತಳ ಕಾಣುವುದು ಖಂಡಿತ. ಕ್ಷುಲ್ಲಕ ಮನಸ್ತಾಪಗಳನ್ನು, ವಿಷಮ ಭಾವನೆಗಳನ್ನು ಮೆಟ್ಟಿ ಮೀರಿ ನಿಲ್ಲಲು ಸಾಧ್ಯವಾಗದಿದ್ದರೆ, ಒಂದು ಸಮೂಹವನ್ನು, ಒಂದು ತಂಡವನ್ನು, ಸುಸೂತ್ರವಾಗಿ ಮುನ್ನಡೆಸಿಕೊಂಡು ಹೋಗಲಾಗುವುದಿಲ್ಲ.

– ಜ್ಯೋತಿ ಬಸು

ಸುರಭಿ ಬ್ಯಾನರ್ಜಿ ಇಂಗ್ಲಿಷ್‌ನಲ್ಲಿ ಬರೆದ ಜ್ಯೋತಿ ಬಸು ಅವರ ಜೀವನ ಚರಿತ್ರೆಯನ್ನು ರಾಹು ಕನ್ನಡಕ್ಕೆ ಅನುವಾದಿಸಿದ್ದು, ಚಿಂತನ ಪುಸ್ತಕ ಅದನ್ನು ಇದೇ ಜುಲೈನಲ್ಲಿ ಪ್ರಕಟಿಸಿದೆ. ಅನುವಾದಕರು ಹಾಗೂ ಪ್ರಕಾಶಕರು ಅಭಿನಂದನಾರ್ಹರಾಗಿದ್ದಾರೆ, ಕನ್ನಡಕ್ಕೆ ಒಳ್ಳೆಯ ಕೊಡುಗೆಯನ್ನಿತ್ತಿದ್ದಾರೆ. ಜ್ಯೋತಿಬಾಬು ಅವರ ಬಹುಮುಖೀ ಸಾಧನೆಗಳು ಚಿರಪರಿಚಿತ. ದೇಶದ ಉತ್ತಮ ರಾಜಕಾರಣಿ, ಹೋರಾಟಗಾರ, ಆಡಳಿತ ತಜ್ಞ, ಎಂದು ಅವರು ಪ್ರಖ್ಯಾತರು. ಕಾಲು ಶತಮಾನ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ, ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಆ ರಾಜ್ಯದ ರಾಜಕಾರಣದ ಕೇಂದ್ರಬಿಂದು, ಕಮ್ಯುನಿಸ್ಟ್ ಚಳುವಳಿಯ ನೇತಾರ, ಸಂಘಟಕ ಮತ್ತು ಸಿದ್ಧಾಂತಿ. ಪ್ರಧಾನಮಂತ್ರಿಯಾಗುವ ಅವಕಾಶವನ್ನು ಅವರ ಪಕ್ಷ ಸ್ವೀಕರಿಸಲಿಲ್ಲವಾಗಿ ರಾಜ್ಯದ ಮುಖ್ಯಮಂತ್ರಿಯಾಗಿಯೇ ಉಳಿದ ''ವಂಚಿತ'' ಜ್ಯೋತಿ ಬಸು ಅದಕ್ಕಾಗಿ ಪರಿತಪಿಸಲಿಲ್ಲ, ಯಾರನ್ನೂ ದೂಷಿಸಲಿಲ್ಲ. ಈ ಪ್ರಸಂಗದ ಬಗ್ಗೆ ಅವರ ಮನದಾಳದಲ್ಲಿ ಯಾವ ಭಾವನೆಗಳಿದ್ದವೋ ನಾವವನ್ನು ಊಹಿಸಲಾರೆವು.

ಗ್ರಂಥದ ಮುನ್ನುಡಿಯಲ್ಲಿ ಬರಗೂರು ರಾಮಚಂದ್ರಪ್ಪನವರ ಒಂದು ಮಾತು ಹೀಗಿದೆ :

''ಯಾರ ಜೀವನವನ್ನು ಕುರಿತು ಬರೆಯಲಾಗಿದೆಯೋ ಆ ವ್ಯಕ್ತಿಯ ಬಗ್ಗೆ ಪೂರ್ವಗ್ರಹ ಇರಬಾರದು. ಸೈದ್ಧಾಂತಿಕ ಭಿನ್ನತೆ ಇದ್ದರೆ ಅವುಗಳ ಜೊತೆಯಾಗಿಯೇ ಗಂಭೀರವಾಗಿ ಮುಖಾಮುಖಿಯಾಗುವುದು ಮತ್ತು ಸೈದ್ಧಾಂತಿಕ ಸಮೀಪ ಅಥವಾ ದೂರವನ್ನು ನಿರ್ವಹಿಸುವ ಪಕ್ವತೆ ಪಡೆಯುವುದು ಅಗತ್ಯ.''

ಇದು ಬಸು ಅವರ ಬಗ್ಗೆ ಸಾಧ್ಯ, ಸುಲಭ; ಬೇರೆ ಕೆಲವರ ಸಂದರ್ಭದಲ್ಲಿ ಅದು ಸಾಧ್ಯವೇ ಇಲ್ಲವೇ ಎಂಬುದನ್ನು ಪ್ರತ್ಯೇಕವಾಗಿ ಗ್ರಹಿಸಬೇಕು. ಹಾಗೆಂದು ಸೈದ್ಧಾಂತಿಕ ಭಿನ್ನತೆ ಇದ್ದಾಗ ಬಸು ಉಗ್ರವಾಗಿ ಪ್ರತಿಕ್ರಿಯಿಸಿಲ್ಲವೆಂದಲ್ಲ, ಇದ್ದುದರಲ್ಲಿಯೇ ಆತ್ಮೀಯವಾಗಿ ಟೀಕಿಸಿ ಆ ಟೀಕೆಯನ್ನು ವೈಯಕ್ತಿಕ ನೆಲೆಗೆ ತರದಿರುವುದು ಅವರ ಸ್ವಭಾವ. ಅವರು ಹೋರಾಟಗಾರರೆಂಬುದು ಎಷ್ಟು ಸ್ಪಷ್ಟವೋ ಅವರ ಕಾಲಮಾನವು ಹೋರಾಟಗಳ ಯುಗವೆಂಬುದೂ ಅಷ್ಟೇ ಸ್ಪಷ್ಟ. ಅವರು ಸಂಘಟಿಸಿದ ಹೋರಾಟಗಳ ಪ್ರತಿರೂಪ ಇಂದು ಸಾಧ್ಯವಿಲ್ಲ; ಸ್ವತಃ ಬಸು ಅವರೇ ಬಂದುನಿಂತರೂ ಅದು ಅದೇ ಸ್ವರೂಪದಲ್ಲಿ ಸಾಧ್ಯವಾಗಲಾರದು. ಕೆಲಸಗಾರರು ಅಂದು ಸ್ಪಂದಿಸುತ್ತಿದ್ದಂತೆ ಇಂದು ಸ್ಪಂದಿಸದಿರುವುದಕ್ಕೆ ಕೇವಲ ಅವರಾಗಲಿ, ನಾಯಕರಾಗಲಿ, ಕಾರಣವಲ್ಲ ಬದಲಾಗಿರುವ ಸನ್ನಿವೇಶದ ಒಂದು ಪರಿಣಾಮ ಅದು. ಎಲ್ಲವೂ ಯಥಾವತ್ತಾಗಿ ಬಸು ಕಾಲದಲ್ಲಿದ್ದಂತೆಯೇ ಇರಬೇಕೆಂದು ಅಪೇಕ್ಷಿಸುವುದು ಅನೈತಿಹಾಸಿಕ ಹಂಬಲ, ಅಷ್ಟೆ. ಉದಾಹರಣೆಗೆ, ೧೯೫೩ರಲ್ಲಿ ಕಲ್ಕತ್ತೆಯ ಟ್ರಾಂ ಕಂಪನಿ ಪ್ರಯಾಣದ ದರವನ್ನು ಒಂದು ಪೈಸಾದಷ್ಟು ಹೆಚ್ಚಿಸಿತ್ತು, ಅದು ಬ್ರಿಟಿಷರ ಕಂಪನಿ. ಬೆಲೆ ಏರಿಕೆಯ ವಿರುದ್ಧ ಲಕ್ಷಗಟ್ಟಲೆ ಜನ ಖುದ್ದಾಗಿ ಭಾಗವಹಿಸಿದರು. ಅಂತೆಯೇ ೧೯೫೪ರ ಶಿಕ್ಷಕರ ಹೋರಾಟದಲ್ಲಿ ಎಲ್ಲ ಶಿಕ್ಷಕರೂ ನೇರವಾಗಿ ಪಾಲ್ಗೊಂಡರು. ಎರಡಕ್ಕೂ ನಾಯಕತ್ವ ಬಸು ಅವರದು. ಈಗ ಬೆಲೆ ಏರಿಕೆ ಅಗಾಧವಾಗಿದ್ದರೂ ಅದರ ವಿರುದ್ಧದ ಹೋರಾಟ ಸಪ್ಪೆಯಾಗಿರಲು ಜನರ ನಿರಾಸಕ್ತಿಯೂ ಒಂದು ಕಾರಣ. ಮಧ್ಯಮ ವರ್ಗದವರಂತೂ ತಮ್ಮ ಬ್ಲಾಗ್ ಮತ್ತು ಟ್ವಿಟರ್‌ಗಳಲ್ಲಿ ಪ್ರತಿಭಟನೆಯ ಮಾತು ಬರೆದು ಜವಾಬ್ದಾರಿಯಿಂದ ಮುಕ್ತರಾಗುವುದು ವಿರಳವೇನಲ್ಲ. ಹೀಗೆ ಬರೆದು ನಿರಾಳರಾಗುವುದರಿಂದ ಆಳುವ ವರ್ಗಕ್ಕೆ ಏನಾದರೂ ಅಳುಕುಂಟಾಗುತ್ತದೆಯೇ ಎಂಬುದನ್ನು ಶೋಧಿಸಿ ತಿಳಿಯಬೇಕು. ೧೯೫೯ರಲ್ಲಿ ಕಲ್ಕತ್ತಾ ಮತ್ತು ಹೌರಾದ ಹೋರಾಟದಲ್ಲಿ ೩೩ ಮಂದಿ ಅಸುನೀಗಿದರು. ಅದೂ ಆಹಾರ ಬೆಲೆ ಏರಿಕೆಯ ವಿರುದ್ಧದ ಹೋರಾಟವೇ. ಇಂದಿನ ಪ್ರವೃತ್ತಿಗೆ ಜನರು ಕಾರಣರೋ, ಪಕ್ಷಗಳದ್ದೇ ತಪ್ಪೋ, ನಾಯಕರ ಅಸಡ್ಡೆ ಅಥವಾ ಸಾಮಾಜಿಕ ವಾತಾವರಣ ಕಾರಣವೋ ತಿಳಿಯುವಂತಿಲ್ಲ. ಹೋರಾಟಗಳೇ ಇಲ್ಲ, ಅಥವಾ ಅವು ನಿರರ್ಥಕವೆಂದು ಜನರು ತೀರ್ಮಾನಿಸಿದ್ದಾರೆಂದೇನೂ ಹೇಳಲಾಗದು.

ಜ್ಯೋತಿಬಾಬು ದೇಶದ ಪ್ರಧಾನಿಯಾಗಿ ಆಗದೇ ಹೋದುದನ್ನು ಲೇಖಕಿ ದೀರ್ಘವಾಗಿ ಪ್ರಸ್ತಾಪಿಸಿದ್ದಾರೆ ಮತ್ತು ಗ್ರಂಥಕ್ಕೆ ಬಸು ಅವರ ಅಧಿಕೃತ ಪರವಾನಗಿಯ ಮುದ್ರೆಯೂ ಬಿದ್ದಿದೆ. ಈ ಭಾಗವನ್ನು ಅನುವಾದಿಸುವಾಗ ರಾಹು ಅವರು ಬಸು ಅವರ ಪಕ್ಷದ ತೀರ್ಮಾನದ ಸಮರ್ಥನೆಯಾಗಿ ಒಂದೆರಡು ಅಡಿಟಿಪ್ಪಣಿ ಸೇರಿಸಿದ್ದಾರೆ. ಅಂದರೆ, ಬಸು ಹೇಳಿದಂತೆ ಪ್ರಧಾನಿಯ ಸ್ಥಾನವನ್ನು ನಿರಾಕರಿಸಿದ್ದು ಒಂದು 'ಚಾರಿತ್ರಿಕ ಪ್ರಮಾದ'ವೇನೂ ಅಲ್ಲವೆಂಬ ಅಭಿಮತ ವ್ಯಕ್ತವಾಗಿದೆ. ಪಕ್ಷಕ್ಕೆ ಜ್ಯೋತಿಬಾಬು ಬೇಕು, ಅವರ ಇಂಗಿತ ಬೇಡವೆಂದು ಇದರರ್ಥ. ಇಂಗಿತ ಏಕೆ ಬೇಡವೆಂದರೆ ಅದು ಪಕ್ಷದ ಪ್ರಕಟಿತ ಕಾರ್ಯಕ್ರಮಕ್ಕೆ ಅನುಗುಣವಾಗಿಲ್ಲವೆಂಬುದು ಉತ್ತರ. ಇದೊಂದು ದ್ವಂದ್ವಕ್ಕೆ ಎಡೆಮಾಡಿಕೊಟ್ಟಿದೆ: ಬಸು ಅವರಿಗೆ ಪಕ್ಷದ ಕಾರ್ಯಕ್ರಮ ತಿಳಿದಿರಲಿಲ್ಲವೆ ಅಥವಾ ತಿಳಿದಿದ್ದೂ ಅವರು ಅದನ್ನು ಅಲಕ್ಷಿಸಿ ಅಥವಾ ಗಂಭೀರವಾಗಿ ತೆಗೆದುಕೊಳ್ಳದೆ ಗಾಳಿಗೆ ತೂರಿದರೆ? ೨೫ ವರ್ಷ ಮುಖ್ಯಮಂತ್ರಿಯಾಗಿದ್ದುದು ಪಕ್ಷದ ಕಾರ್ಯಕ್ರಮದ ಪ್ರಕಾರವೇ ಹೌದು, ಆದರೆ ಬೇರೆ ಪಕ್ಷಗಳ ಆಸರೆಯಲ್ಲಿ ಬಸು ಪ್ರಧಾನಿಯಾಗುವುದು ಬೇಡವೆಂಬುದು ಪಕ್ಷದ ಆಶಯವಿದ್ದಿರಬಹುದು. ಪಕ್ಷವು ಬೇರೆ ಪಕ್ಷಗಳನ್ನು ಬೆಂಬಲಿಸಬಹುದು, ಆದರೆ ಅನ್ಯಪಕ್ಷಗಳ ಬೆಂಬಲ ಪಡೆಯಕೂಡದು

ಎಂಬುದು ಹೇಗೆ ಕ್ರಾಂತಿಕಾರಿ ತತ್ತ್ವವೋ ತಿಳಿಯದು. ಬಸು ಅವರು ಪ್ರಧಾನಿಯ ಸ್ಥಾನ ಅಂಗೀಕರಿಸಲು ಸಿದ್ಧರಾಗಿದ್ದುದು ಅದು ಸ್ವಾಗತಾರ್ಹ ತಂತ್ರವಾಗಿ ಕಂಡಿದ್ದುದರಿಂದ. ಅದು ಪಕ್ಷದ ಕಾರ್ಯಕ್ರಮಕ್ಕೆ ವಿರುದ್ಧವೆಂದಾದರೆ ಆ ಕಾರ್ಯಕ್ರಮಕ್ಕೆ ತಿದ್ದುಪಡಿ ಅಗತ್ಯವಿತ್ತೆಂದು ಬಸು ಭಾವಿಸಿದ್ದಾರು. ಮೂಲತಃ ಕಾರ್ಯಕ್ರಮ ಒಂದು, ಅದರ ಸಾಧನೆಗೆ ಮಾರ್ಗ ಇನ್ನೊಂದು. ಕಾರ್ಯಕ್ರಮದ ಸಾಧನೆಗೆ ಯಾವ ತಂತ್ರ ಕಾರ್ಯಸಾಧುವೆಂಬುದು ಪ್ರಶ್ನೆ; ಏಕೆಂದರೆ ಕಾರ್ಯಕ್ರಮದಲ್ಲಿ ತಂತ್ರದ ಅ ಆ ಇ ಈ ಎಲ್ಲಾ ಬರೆದಿರುವುದಿಲ್ಲ, ಕಾರ್ಯಗತಗೊಳಿಸುವವರು ಅದನ್ನು ಬರೆದುಕೊಳ್ಳಬೇಕು. ಜ್ಯೋತಿಬಾಬು ಅದನ್ನು ಬರೆದುಕೊಂಡಿದ್ದರು, ಪಕ್ಷ ಅದನ್ನು ಅಳಿಸಿಹಾಕಿತು. ಅದನ್ನೇ ಬಸು ಐತಿಹಾಸಿಕ ಪ್ರಮಾದ ಎಂದದ್ದು. ಕೇರಳದ ನಾಯಕರು ಮತ್ತು ಪಶ್ಚಿಮ ಬಂಗಾಳದ ಕೆಲವು ನಾಯಕರು ಅಳಿಸುವ ಕಲೆಯಲ್ಲಿ ನೈಪುಣ್ಯ ತೋರಿದರು, ಅದಕ್ಕೆ ನಿಷ್ಠಾವಂತ ಬಸು ತಲೆಬಾಗಿದರು. ಯಾರನ್ನೂ ದೂಷಿಸಲಿಲ್ಲ, ನಿರಾಸಕ್ತಿಯನ್ನೂ ತಳೆಯಲಿಲ್ಲ. ಅದು ಬಸು ಅವರ ವ್ಯಕ್ತಿತ್ವದ ಶ್ಲಾಘನೀಯ ಲಕ್ಷಣ.

೧೯೫೮ರಲ್ಲಿ ಕಮ್ಯುನಿಸ್ಟ್ ಪಕ್ಷವು ಅಮೃತಸರದಲ್ಲಿ ವಿಶೇಷ ಸಮ್ಮೇಳನವೊಂದನ್ನು ನಡೆಸಿತು. ದೀರ್ಘ ಚರ್ಚೆಗಳ ನಂತರ ಪ್ರತಿಗಾಮಿ ಶಕ್ತಿಗಳು ಮತ್ತು ಕಾಂಗ್ರೆಸ್ ಎರಡನ್ನೂ ಏಕಕಾಲಕ್ಕೆ ಎದುರಿಸಿ ಸೆಣಸುವ ಧೋರಣೆಯನ್ನು ಅಲ್ಲಿ ಮಾನ್ಯಮಾಡಲಾಯಿತು (ಪು. ೧೫೮). ಇದರಲ್ಲಿ 'ಪ್ರತಿಗಾಮಿ' ಯಾರೆಂದು ಹೆಸರಿಸದಿದ್ದರೂ ಕಾಂಗ್ರೆಸ್ ಪೂರ್ಣ ಪ್ರತಿಗಾಮಿಯಲ್ಲವೆಂಬ ನಿಲುವು ವ್ಯಕ್ತವಾಗಿದೆ. ಹದಿನೇಳು ವರ್ಷಗಳ ನಂತರ ತುರ್ತು ಪರಿಸ್ಥಿತಿ ಘೋಷಿಸಲಾಯಿತು. ಆಗ್ಗೆ ಪಕ್ಷ ಒಡೆದಿತ್ತು, ಆದರೆ ಪ್ರತಿಗಾಮಿಗಳೂ ಮತ್ತು ಕಾಂಗ್ರೆಸ್ ಪ್ರತ್ಯೇಕವಾಗಿಯೇ ಇದ್ದವು. ಕಾಂಗ್ರೆಸ್ ವಿರುದ್ಧ ಹೋರಾಡಲು ಕಮ್ಯುನಿಸ್ಟ್ ಚಳುವಳಿಯ ಒಂದು ಬಣ, ಸಿಪಿಐ(ಎಂ), ಪ್ರತಿಗಾಮಿಗಳ ಜೊತೆ ಸೇರಿದ್ದು ಇತಿಹಾಸ. ಅಮೃತಸರದ ಸಿದ್ಧಾಂತ ಆ ವೇಳೆಗೆ ಹಳಸಿಹೋಗಿದ್ದಿತೇನೋ! ಪ್ರತಿಗಾಮಿಗಳನ್ನು ಹೊರತುಪಡಿಸಿಯೂ ಕಾಂಗ್ರೆಸ್ ವಿರುದ್ಧ ಹೋರಾಟ ಸಂಘಟಿಸಲು ಅಡಚಣೆಗಳಿದ್ದಿರಬೇಕು. ೧೯೬೪ರ ಏಪ್ರಿಲ್‌ನಲ್ಲಿ ಕಮ್ಯುನಿಸ್ಟ್ ಪಕ್ಷವು ಛಿದ್ರಗೊಂಡದ್ದು ಅದಕ್ಕೆ ನಾಂದಿಯನ್ನು ಹಾಡಿದ್ದಿತೆಂದು ತೋರುತ್ತದೆ. ಪಕ್ಷವು ಒಡೆದ ಘಟನೆಯನ್ನು ಸುರಭಿ ಬ್ಯಾನರ್ಜಿ ಅಸಮರ್ಪಕವಾಗಿ ದಾಖಲಿಸಿದ್ದಾರೆ (ಪು. ೧೮೧). ಪಕ್ಷದ ಕೇಂದ್ರ ಕಾರ್ಯಕಾರಿ ಸಮಿತಿಯ ಸಭೆಯ ಮುಂದೆ ಎರಡು ವಿಷಯಗಳಿದ್ದುವಂತೆ: (ಅ) ಪಕ್ಷ ವಿರೋಧಿ ಚಟುವಟಿಕೆಗಳು, ಮತ್ತು (ಆ) ಡಾಂಗೆ ಬ್ರಿಟಿಷರಿಗೆ ಹಿಂದೊಮ್ಮೆ ಬರೆದಿದ್ದರೆನ್ನಲಾದ ಪತ್ರಗಳು. ರೇಣು ಚಕ್ರವರ್ತಿ ಮತ್ತು ಹೋಮಿ ದಾಜಿ ನ್ಯಾಷನಲ್ ಆರ್ಕೈವ್ಸ್‌ನಲ್ಲಿರುವ ಆ ಪತ್ರಗಳನ್ನು ನೋಡಿ ಅವು ಖೋಟಾ ಎಂದಿದ್ದರಂತೆ. ಎರಡು ವಿಷಯಗಳಲ್ಲಿ ಯಾವುದನ್ನು ಮೊದಲು ಚರ್ಚಿಸಬೇಕೆಂಬುದರ ಬಗ್ಗೆ ಭಿನ್ನಾಭಿಪ್ರಾಯ ಮೂಡಿ ಅದು ಬಗೆಹರಿಯದಿದ್ದಾಗ ಸಭೆಯಿಂದ ಕೆಲವರು ಹೊರಹೋದರು. ಅದು ಪಕ್ಷ ಒಡೆಯಲು ಒಂದು ಸಬೂಬು, ಅಷ್ಟೆ. ನಂತರ ರಾಷ್ಟ್ರೀಯ ಮಂಡಳಿಯಿಂದಲೂ ಹೊರಹೋಗಿ ಜುಲೈ ೧೯೬೪ರಲ್ಲಿ ತೆನಾಲಿಯಲ್ಲಿ ಸಭೆ ಸೇರಿದಾಗ ಪಕ್ಷದ ಇಬ್ಭಾಗವು ಸೂತ್ರಬದ್ಧವಾಗಿ ಪರಿಣಮಿಸಿತು. ಅದೆಲ್ಲಾ ನಿಜ, ಆದರೆ ಪ್ರಮುಖ ಪ್ರಶ್ನೆಗಳನ್ನು ಕುರಿತಂತೆ ಪಕ್ಷದಲ್ಲಿ ಸೈದ್ಧಾಂತಿಕ ಭಿನ್ನತೆ ಇದ್ದದ್ದು ಪಕ್ಷ ಒಡೆಯಲು ಮೂಲಕಾರಣ. ಮುಖ್ಯವಾಗಿ ಎರಡು ಪ್ರಶ್ನೆಗಳು: (ಅ) ದೇಶದಲ್ಲಿ 'ರಾಷ್ಟ್ರೀಯ ಬಂಡವಾಳಶಾಹಿ' ಎಂಬುದೊಂದು ಇದೆಯೆ? ಅಥವಾ ಸುಮ್ಮನೆ ಆ ಹೆಸರನ್ನು ಹೊಂದಿರುವ ಅದು ಸಾಮ್ರಾಜ್ಯಶಾಹಿಯ ಕೂಸೊ? ಅಂದರೆ, ದೇಶದ ಪ್ರಭುತ್ವ ಮತ್ತು ಆಳುವ ವರ್ಗದ ಲಕ್ಷಣವೇನು ಎಂಬುದರ ಮೀಮಾಂಸೆ. (ಆ) ಅಂತೂ ಆಳುವ ವರ್ಗ ಇದೆ. ಅದರೊಡನೆ ಕಮ್ಯುನಿಸ್ಟ್ ಪಕ್ಷದ ಸಂಬಂಧ ಹೇಗಿರಬೇಕು? ವಿದೇಶಾಂಗ ನೀತಿ, ಮುಂತಾದ ಕೆಲವು ವಿಷಯಗಳಲ್ಲಿ ಬೆಂಬಲ, ಐಕ್ಯತೆ, ಮತ್ತು ಇನ್ನಿತರ ಸಾಮಾಜಿಕ-ಆರ್ಥಿಕ ವಿಷಯಗಳಲ್ಲಿ ವಿರೋಧ, ಹೋರಾಟ. ಇದು ಒಂದು ಸಾಧ್ಯತೆ. ಇನ್ನೊಂದು ಸಾಧ್ಯತೆ, ಎಲ್ಲವನ್ನೂ ಸಾರಾಸಗಟಾಗಿ ವಿರೋಧಿಸಿ ಹೋರಾಟಕ್ಕೆ ಇಳಿಯುವುದು ಮತ್ತು ಯಾವುದರಲ್ಲೂ ಸಹಕಾರವೆಂಬ ಸೊಲ್ಲೆತ್ತದಿರುವುದು. (ಪ್ರಾಯೋಗಿಕವಾಗಿ ಕೇವಲ ಹೋರಾಟ ಎಂಬ ಸೂತ್ರ ಆಗ ಇರಲಿಲ್ಲ; ವಿಶೇಷವಾಗಿ, ವಿದೇಶಾಂಗ ನೀತಿಯಲ್ಲಿ ಮತ್ತು ಸಾರ್ವಜನಿಕ ಕ್ಷೇತ್ರದ ಉದ್ಯಮಗಳಲ್ಲಿ ಸೋವಿಯೆತ್ ಒಕ್ಕೂಟದ ಪಾತ್ರವನ್ನು ಸಮರ್ಥಿಸುವುದರಲ್ಲಿ.)

ಇವೆರಡರ ಜೊತೆ ಇನ್ನೊಂದು ಪ್ರಶ್ನೆ ಇತ್ತು, ಅದು ಚೀಣಾಕ್ಕೆ ಸಂಬಂಧಿಸಿದ್ದು. ೧೯೫೯ರ ವೇಳೆಗೆ ಭಾರತ-ಚೀಣಾ ಬಾಂಧವ್ಯಕ್ಕೆ ಹುಳಿ ಹಿಂಡಲಾಗಿತ್ತು. ಯಾರು ಹಿಂಡಿದ್ದರೆಂಬುದು ಭಾರಿ ಭಾವೋದ್ರೇಕದ ಚರ್ಚೆಗೆ ಗ್ರಾಸವಾಗಿತ್ತು. ೧೯೫೯ರಲ್ಲಿ ಕಮ್ಯುನಿಸ್ಟ್ ಪಕ್ಷದ ರಾಷ್ಟ್ರೀಯ ಮಂಡಲಿಯ ಸಭೆ ಮೀರತ್‌ನಲ್ಲಿ ನಡೆಯಿತು. ಅಲ್ಲಿಯ ಒಂದು ನಿರ್ಣಯ "ಸಮಾಜವಾದಿ ಚೀಣಾ ಎಂದೆಂದಿಗೂ ಯುದ್ಧದ ಪಿತೂರಿ ಅಥವಾ ಒಳಸಂಚು ನಡೆಸುವುದಿಲ್ಲ" ಎಂಬುದಾಗಿತ್ತು. ಅದು ವಾಸ್ತವವೋ ಕಲ್ಪನೆಯೋ ಎಂಬ ಪ್ರಶ್ನೆ ಅಪಥ್ಯವೆಂದೋ ಏನೋ ಅದನ್ನು ಸಮಗ್ರವಾಗಿ ಚರ್ಚಿಸಲಿಲ್ಲ. (ಮುಂದೆ ವಿಯೆಟ್ನಾಂ ಮೇಲೆ ಚೀಣಾ ಆಕ್ರಮಣ ನಡೆಸಿದಾಗಲೂ ಬೆಂಗಳೂರಿನ ಒಂದು ಸಾರ್ವಜನಿಕ ಸಭೆಯಲ್ಲಿ ಪ್ರಸ್ತುತ ಲೇಖಕನ ಅಭಿಪ್ರಾಯವನ್ನು ಆತ್ಮೀಯರೂ ಹಿರಿಯರೂ ಆಗಿದ್ದ ಮಾನ್ಯ ಶ್ರೀ. ಎನ್. ಎಲ್. ಉಪಾಧ್ಯಾಯ ಅವರು ಕಟುವಾಗಿ ಟೀಕಿಸಿದ್ದರು.) ೧೯೬೨ರ ಜುಲೈನಲ್ಲಿ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ಒಂದು ಗೋಷ್ಠಿಯಲ್ಲಿ ೧೯೫೯ರ ನಿರ್ಣಯ ಚರ್ಚೆಗೆ ಬಂದಿತ್ತು. ಪಾರ್ಲಿಮೆಂಟ್ ಸದಸ್ಯರಾಗಿದ್ದ ಪ್ರೊ|| ಹಿರೇನ್ ಮುಖರ್ಜಿ ಮತ್ತು ಮುಂದೆ ರಾಜ್ಯಸಭಾ ಸದಸ್ಯರಾದ ಪ್ರೊ|| ರಷೀದುದ್ದೀನ್ ಖಾನ್ ಚರ್ಚೆಯಲ್ಲಿ ಭಾಗವಹಿಸಿದವರು. ಮುಖರ್ಜಿ ಹೇಳಿದರು, ತಾವು (ಅಂದರೆ ಕಮ್ಯುನಿಸ್ಟ್ ಪಕ್ಷ) ಚೀಣಾ ಜೊತೆ ಮಾತುಕತೆ ಅಗತ್ಯ, ಘರ್ಷಣೆ ಬೇಡ, ಎನ್ನುವವರು; ಪಾಕಿಸ್ತಾನದ ಬಗೆಗೆ ಕೂಡ ಅದನ್ನೇ ಹೇಳುವ ಪಕ್ಷ ಚೀಣಾ ಜೊತೆ ಮಾತುಕತೆಗೆ ಪರ್ಯಾಯವಾಗಿ ಸಂಘರ್ಷದ ಹಾದಿ ಹುಡುಕಿಕೊಳ್ಳುವುದನ್ನು ಹೇಗೆ ತಾನೆ ಸಮರ್ಥಿಸಲು ಸಾಧ್ಯ, ಎಂದು. ಅದಕ್ಕೆ ಖಾನ್ ಹೇಳಿದರು, ಒಂದು ತಪ್ಪಿಗೆ ಇನ್ನೊಂದು ತಪ್ಪು ಸಮರ್ಥನೆ ನೀಡಲಾರದು, ಎಂದು. ಅಂದರೆ, ಎರಡು ದೇಶಗಳೊಡನೆಯೂ ಅವಶ್ಯಕವಾದರೆ ಘರ್ಷಣೆಗೆ ಅಂಜಬಾರದು ಎನ್ನುವುದು ಅವರ ನಿಲುವು. ಎಲ್ಲಿ ಘರ್ಷಣೆ, ಎಲ್ಲಿ ಮಾತುಕತೆ, ಎಂಬುದು ಆಯಾಯ ಸನ್ನಿವೇಶಗಳಲ್ಲಿ ತೀರ್ಮಾನವಾಗುವಂಥದು; ಅದೊಂದು ಸಾರ್ವಕಾಲಿಕ ಮಂತ್ರವಲ್ಲ. ಏಕಪಕ್ಷೀಯವಾಗಿ ಅದನ್ನು ಅನುಷ್ಠಾನಕ್ಕೆ ತರಲಾಗುವುದಿಲ್ಲ ಕೂಡ. ಆದರೆ ಕಮ್ಯುನಿಸ್ಟ್ ಪಕ್ಷದ ಒಂದು ವಿಭಾಗವು ಸರ್ವಥಾ ಚೀಣಾದ ಪರವಾಗಿತ್ತು. (ಅದೇ ಚೀಣಾ ಈಚೆಗೆ ಅಮೆರಿಕಾಕ್ಕೆ ಇರಾಕ್-ಅಫ್ಘಾನಿಸ್ತಾನಗಳಲ್ಲಿ ಸಂಪೂರ್ಣ ಬೆಂಬಲ ನೀಡಿದೆ, ವಿಶ್ವಸಂಸ್ಥೆಯಲ್ಲಿ ಒಮ್ಮೆಯೂ ಅದನ್ನು ಕುರಿತು ಸಮಾಜವಾದಿ ನಿಲುವನ್ನು ತಾಳಿಲ್ಲ.)




೧೯೫೯ರ ನಂತರ ಮತ್ತು ೧೯೬೪ಕ್ಕೆ ಮುಂಚೆ ೧೯೬೧ರಲ್ಲಿ ವಿಜಯವಾಡದಲ್ಲಿ ಪಕ್ಷದ ಆರನೆಯ (ಮತ್ತು ಅವಿಭಜಿತ ಪಕ್ಷದ ಕೊನೆಯ) ಅಧಿವೇಶನ ಜರುಗಿತು. ಅಲ್ಲಿ ವಿದೇಶಿ ಬಂಡವಾಳದ ಹೂಡಿಕೆಯ ಪೂರ್ವಾಪರಗಳನ್ನು ಚರ್ಚಿಸಲಾಯಿತು. ಒಂದು ವಿಭಾಗದ ಅಭಿಪ್ರಾಯ "ಭಾರತದ ಆಳುವ ವರ್ಗವು ಸಾಮ್ರಾಜ್ಯಶಾಹಿ ಮತ್ತು ಪಾಳೇಗಾರಿ ವ್ಯವಸ್ಥೆಯೊಂದಿಗೆ ರಾಜೀ ಸಂಧಾನದ ಧೋರಣೆಯನ್ನು ತೊರೆದು ಆ ಶಕ್ತಿಗಳ ವಿರುದ್ಧ ಸಾಕಷ್ಟು ಗಟ್ಟಿಯಾಗಿ ನಿಂತಿದೆಯಾದ್ದರಿಂದ ಅದರೊಡನೆ ಪಕ್ಷವು ಐಕ್ಯತೆ ಮತ್ತು ಹೋರಾಟದ ತಂತ್ರವನ್ನು ಅನುಸರಿಸಬೇಕು" ಎಂಬುದಾಗಿತ್ತು. ಇದಕ್ಕೆ ಪ್ರತಿಯಾಗಿ ಇನ್ನೊಂದು ವಿಭಾಗದ ಅಭಿಪ್ರಾಯ "ಭಾರತದ ಆಳುವ ವರ್ಗ ಸಾಮ್ರಾಜ್ಯಶಾಹಿ ಮತ್ತು ಪಾಳೇಗಾರಿ ವ್ಯವಸ್ಥೆಯ ಬಾಲಂಗೋಚಿ" ಎಂಬುದಾಗಿತ್ತು. ಅದು ಭಿಲೈ-ರೂರ್ಕೆಲಾ-ದುರ್ಗಾಪುರ ಉಕ್ಕು ಸ್ಥಾವರಗಳ ಸ್ಥಾಪನೆಯ ಕಾಲ. ಒಂದು ವಿಭಾಗ ವಿದೇಶಿ ಬಂಡವಾಳದ ಹೂಡಿಕೆ ಉಚಿತವೋ ಅನುಚಿತವೋ ಎಂಬುದನ್ನು ತೀರ್ಮಾನಿಸುವಾಗ ಡಾಲರ್ ಮತ್ತು ರೂಬೆಲ್ ಎರಡೂ ವಿದೇಶದವೇ ಎಂಬುದನ್ನು ಮರೆಯಬಾರದೆಂದು ಹೇಳಿತು; ಒಂದನ್ನು ಮಾತ್ರ ಪರಿಗಣನೆಗೆ ತೆಗೆದುಕೊಳ್ಳಬಹುದೆ, ಎಂದು

ಪ್ರಶ್ನಿಸಿತು. ಅದಕ್ಕೆ ಇನ್ನೊಂದು ವಿಭಾಗದ ಉತ್ತರ, "ನೀವು ಆಳುವ ವರ್ಗದ ಗೋಸುಂಬೆತನ, ಅವಕಾಶವಾದಿ ತಂತ್ರ, ನಿರ್ಲಕ್ಷಿಸುತ್ತಿದ್ದೀರಿ" ಎಂಬುದಾಗಿತ್ತು. ೧೯೪೭ರ ರಾಜಕೀಯ ಸ್ವಾತಂತ್ರ್ಯವನ್ನು ಅಧಿಕಾರದ ಹಸ್ತಾಂತರವಷ್ಟೆ ಎಂದು ಕಮ್ಯುನಿಸ್ಟ್ ಪಕ್ಷವು ಹಿಂದೆ ಭಾವಿಸುತ್ತಿದ್ದಿತಲ್ಲ, ಅದರ ಪುನರಾವರ್ತನೆ ಇದು. ಒಟ್ಟಿನಲ್ಲಿ, ಪಕ್ಷವು ಒಡೆದು ಎರಡು ಮುಖ್ಯ ಕೇಂದ್ರಗಳು ಅಸ್ತಿತ್ವಕ್ಕೆ ಬಂದುವು; ಪರಸ್ಪರ ದೂಷಣೆ, ಘರ್ಷಣೆ, ಪ್ರತ್ಯೇಕ ವಿರೋಧಿ ಹೊಂದಾಣಿಕೆಗಳು ಮತ್ತು ಅದಕ್ಕೆಲ್ಲಾ ಒಂದು ತಥಾಕಥಿತ ಸೈದ್ಧಾಂತಿಕ ತಳಹದಿಯ ನಿರ್ವಚನೆ, ಎಲ್ಲಾ ದಿನನಿತ್ಯದ ಪ್ರಸಂಗವಾಯಿತು. ಸುಧಾರಣಾವಾದಿ, ಪರಿಷ್ಕರಣವಾದಿ, ಅಪ್ಪಟ ಕ್ರಾಂತಿಕಾರಿ, ಎಡ ಸಾಹಸಿಗತನ, ಮುಂತಾದ ಪದಗುಚ್ಛಗಳು ನಿರಂತರವಾಗಿ ಹಾರಾಡ ತೊಡಗಿದ್ದು ಆಗ. ಅದು ಎಷ್ಟರಮಟ್ಟಿಗಿತ್ತೆಂದರೆ ವಿಯೆಟ್ನಾಂನ ವೀರಮಹಿಳೆ ಮೇಡಮ್ ಬಿನ್ ಬೆಂಗಳೂರಿಗೆ ಬಂದಾಗ ಒಂದು ಸ್ವಾಗತ ಸಮಿತಿ ರಚಿಸುವಾಗ ಎರಡು ಕಮ್ಯುನಿಸ್ಟ್ ಪಕ್ಷಗಳ ಬಿಗಿತನ ಮತ್ತು ದ್ವಂದ್ವ ಸಾರ್ವಜನಿಕವಾಗಿ ಪ್ರಕಟವಾಯಿತು. ಅಷ್ಟೇ ಏಕೆ, ಪ್ರಸ್ತುತ ಲೇಖಕ ೧೯೭೧ರ ಏಪ್ರಿಲ್ ೨೨ರಂದು ಕಲ್ಕತ್ತಾದಲ್ಲಿ ಲೆನಿನ್ ಪ್ರತಿಮೆಗೆ ಮಾಲಾರ್ಪಣೆ ಮಾಡಲು ಬಂದಿದ್ದ ಎರಡೂ ಪಕ್ಷಗಳ ಪ್ರಮುಖರು ಒಟ್ಟಿಗೆ ಲೆನಿನ್ ಪ್ರತಿಮೆಯ ಬಳಿ ಹೋಗಲು ನಿರಾಕರಿಸಿದ್ದನ್ನು ಪ್ರತ್ಯಕ್ಷವಾಗಿ ಕಂಡಿದ್ದ. ಒಂದು ಕಡೆ ವಿಶ್ವನಾಥ ಮುಖರ್ಜಿ, ಗೀತಾ ಮುಖರ್ಜಿ, ತರುಣ್ ಸನ್ಯಾಲ್, ಇಳಾ ಮಿತ್ರ, ಭವಾನಿ ಸೇನ್ ಮುಂತಾದವರು; ಇನ್ನೊಂದು ಕಡೆ ಜ್ಯೋತಿ ಬಸು, ಸರೋಜ್ ಮುಖರ್ಜಿ, ಹರೇಕೃಷ್ಣ ಕೋನಾರ್, ಇತ್ಯಾದಿಗಳು. "ಪರಿಷ್ಕರಣವಾದಿಗಳು ಮೊದಲು ಹೊರಗೆ ಬರಲಿ, ಆಮೇಲೆ ನಾವು ಮಾಲಾರ್ಪಣೆ ಮಾಡುತ್ತೇವೆ" ಎಂದರು ಜ್ಯೋತಿ ಬಸು. ಪಕ್ಷಗಳಿಗೆ ಸೇರಿರದ ಸಾರ್ವಜನಿಕರಿಗೆ ಇದೊಂದು ಕುತೂಹಲ, ಮೋಜು. ಕಮ್ಯುನಿಸ್ಟ್ ಚಳುವಳಿಯಲ್ಲಿ ಇಂತಹ ಭೇದ ಬಗೆಹರಿಸಿಕೊಳ್ಳಲು ಯಾವುದೇ ಪರಿಣಾಮಕಾರಿ ಸೈದ್ಧಾಂತಿಕ ಮೈತ್ರಿ ಸೂತ್ರ ಇಲ್ಲವೆಂದು ತೋರುತ್ತದೆ. ಮಾರ್ಕ್ಸ್ ಕಾಲದಿಂದಲೂ ಬೆಳೆದುಬಂದಿರುವ ಸಂಪ್ರದಾಯವೋ ಏನೋ! ಆದರೆ ಮಾರ್ಕ್ಸ್ ಮತ್ತು ಲೆನಿನ್ ಇಂತಹ ಸೈದ್ಧಾಂತಿಕ ಸಂಘರ್ಷಗಳಿಂದ ಜನಪರ ಹೋರಾಟಗಳನ್ನು ಗಟ್ಟಿಗೊಳಿಸಿದರು, ವಿಕಾಸಗೊಳಿಸಿದರು. ನಾವು ಅದನ್ನು ಸಾಧಿಸಿದ್ದೇವೆಯೇ ಎಂಬುದು ಯಕ್ಷಪ್ರಶ್ನೆಯೇನಲ್ಲ.

ಇಷ್ಟೆಲ್ಲ ಸೈದ್ಧಾಂತಿಕ ತುಮುಲಗಳ ನಡುವೆಯೂ ಜ್ಯೋತಿ ಬಸು ಅವರ ವ್ಯಕ್ತಿತ್ವ ಅಪ್ರತಿಮವಾದ್ದು. ಅವರಲ್ಲಿ ಭಾವನೆಗಳ ಮಿಶ್ರಣ ಅಸಾಮಾನ್ಯವಾಗಿತ್ತು: ಮೊಂಡುತನವೆಂಬುವಷ್ಟು ನಿರ್ಭಾವುಕತೆ ಕೆಲವೇಳೆ, ಮೃದುತ್ವದ ಪರಾಕಾಷ್ಠೆ ಎಂಬುವಷ್ಟು ಅಕಲುಷಿತ ಭಾವನೆ ಇನ್ನೊಂದು ಕಡೆ. ಕಾಂಗ್ರೆಸ್‌ನ ಶಾಸಕ ಕಿರಣ ಶಂಕರ ರಾಯ್ ೫೦ರ ದಶಕದಲ್ಲಿ ತೀರಿಕೊಂಡಾಗ ಶಾಸನಸಭೆಯಲ್ಲಿ ಸಂತಾಪ ಸೂಚಕ ನಿರ್ಣಯದ ಮಂಡಿಸುವಿಕೆಯ ಸಂದರ್ಭ. ಬಸು ಪ್ರಕಾರ ಆತ ಅತಿಧೂರ್ತ. ಸಂತಾಪ ಸೂಚಿಸಲು ತಾವು ಮೇಲೇಳುವುದಿಲ್ಲವೆಂದು ಶಾಸನಸಭೆಯಲ್ಲಿ ಬಸು ಪಟ್ಟುಹಿಡಿದು ಕೂತೇ ಇದ್ದರು (ಪು. ೧೪೧). ಈಗಿನ ದಾಕ್ಷಿಣ್ಯಪರತೆ ಅತಿಯಾಗಿ, ಕೆಲವೇಳೆ "ಮಣ್ಣಿನ ಮಗ"ನ ಶ್ಲಾಘನೆಯೂ ಕೇಳಿಬರುವುದುಂಟು. ವಿರೋಧಿಗಳೊಡನೆ ಜ್ಯೋತಿಬಾಬು ವೈಯಕ್ತಿಕ ಸ್ನೇಹಪರತೆಯನ್ನೆಂದೂ ಮರೆಯಲಿಲ್ಲವೆಂದು ಇದರರ್ಥವಲ್ಲ. ಅವರ ಕುಟುಂಬ ದೆಹಲಿಗೆ ಹೋದಾಗ ತಂಗುತ್ತಿದ್ದುದು ಭೂಪೇಶ ಗುಪ್ತರ ಮನೆಯಲ್ಲಿ; ಡಾ|| ಬಿ. ಸಿ. ರಾಯ್ ಮತ್ತು ಸಿದ್ಧಾರ್ಥ ಶಂಕರ ರಾಯ್ ಜೊತೆ ಬಸು ಆತ್ಮೀಯವಾಗಿ ನಡೆದುಕೊಳ್ಳುತ್ತಿದ್ದರು, ಆದರೆ ರಾಜಕೀಯವಾಗಿ ಅವರನ್ನೆಂದೂ ಸಹಿಸುತ್ತಿರಲಿಲ್ಲ. ಇಂದಿನ ಸಂದರ್ಭದಲ್ಲಿ ಬುದ್ಧದೇವ ಭಟ್ಟಾಚಾರ್ಯರು ಮಮತಾ ಬ್ಯಾನರ್ಜಿಯೊಡನೆ ಎಂತಹ ಆತ್ಮೀಯತೆ ಬೆಳೆಸಿಕೊಳ್ಳಲು ಶಕ್ಯ! ಅದು ವ್ಯಕ್ತಿಲಕ್ಷಣ ಮಾತ್ರವಲ್ಲ, ಕಾಲ ಲಕ್ಷಣವೂ ಹೌದು. ನೆಹರು - ಹಿರೇನ್ ಮುಖರ್ಜಿ ಸಂಬಂಧವು ಮನಮೋಹನ ಸಿಂಗ್ – ಗುರುದಾಸ ದಾಸ್‌ಗುಪ್ತರ ನಡುವೆ ಸಾಧ್ಯವಾದೀತೆ!

## ಎಲ್ಲರೂ ನಮ್ಮವರೆ

ಕಂದಾಯ ಪೊಲೀಸು ನಮ್ಮ ಅಧಿಕಾರಿಗಣ
ಶಾಸಕರು ಮಂತ್ರಿಗಳು ನಮ್ಮವರೆ ಅಣ್ಣಾ,
'ನಾವು ?' "ನೀವು ಜನತಾ ಜನಾರ್ದನಾ !"
ತೃಣಮಪಿ ನ ಚಲತಿ ಲಂಚವಿನಾ
ಎಲ್ಲೆಲ್ಲೂ ತುಂಬಿಹರು ತೆಲಗಿ ಜನಾ

ವ್ಹಿ. ಎಂ. ಶೆಟ್ಟರ

ಕೆಲವು ಸೂಕ್ಷ್ಮಗಳನ್ನು ಗ್ರಹಿಸದೆ ಸುರಭಿ ಬ್ಯಾನರ್ಜಿ ಕೆಲವು ವಿರೋಧಾತ್ಮಕ ಹೇಳಿಕೆಗಳನ್ನು ಕಥಾನಕದಲ್ಲಿ ಬೆಸೆದುಬಿಟ್ಟಿದ್ದಾರೆ. ಉದಾಹರಣೆಗೆ, ಅಜಯ್ ಮುಖರ್ಜಿ ಮುಖ್ಯಮಂತ್ರಿಯಾದುದು (ಪು. ೧೯೫-೧೯೬): ಶಾಸನಸಭೆಯ ೨೮೦ ಸ್ಥಾನಗಳಲ್ಲಿ ೧೪ ಪಕ್ಷಗಳ ಎಡ ಐಕ್ಯರಂಗ ೨೧೮ ಸ್ಥಾನಗಳನ್ನು ಗಳಿಸಿತ್ತು; ೧೯೬೯ರಲ್ಲಿ ಅದರಲ್ಲಿ ಬಸು ಅವರ ಪಕ್ಷಕ್ಕೆ ಅತಿಹೆಚ್ಚಿನ ಸಂಖ್ಯೆ; ೮೦. ಬಸು ಅವರೇ ಮುಖ್ಯಮಂತ್ರಿಯಾಗಬೇಕು, ಆದರೆ ಫಾರ್ವರ್ಡ್ ಬ್ಲಾಕ್ ಮತ್ತು ಭಾರತ ಕಮ್ಯುನಿಸ್ಟ್ ಪಕ್ಷ ಒಪ್ಪಲಿಲ್ಲ. ಸುರಭಿ ಹೇಳುತ್ತಾರೆ (ಪು. ೧೯೫), ಈ ಪಕ್ಷಗಳ "ಹಟಮಾರಿತನದಿಂದಾಗಿ" ಸಿಪಿಐ(ಎಂ) ಮುಖ್ಯಮಂತ್ರಿಯ ಸ್ಥಾನವನ್ನು "ತ್ಯಾಗ ಮಾಡಬೇಕಾಯಿತು" ಎಂದು. ಆ ಬಗ್ಗೆ ಸ್ವತಃ ಜ್ಯೋತಿ ಬಸು ಹೇಳುತ್ತಾರೆ (ಪು. ೧೯೬), ಅಜಯ್ ಮುಖರ್ಜಿಗೆ ಮುಖ್ಯಮಂತ್ರಿ ಸ್ಥಾನ ಕೊಡದೆ ಹೋಗಿದ್ದರೆ ಎಡ ಐಕ್ಯರಂಗದಿಂದ ಆತನ ಪಕ್ಷಾಂತರ ಖಚಿತವಾಗಿತ್ತು, ಎಂದು. ಹಾಗಾದರೆ ಫಾರ್ವರ್ಡ್ ಬ್ಲಾಕ್ – ಸಿಪಿಐಗಳ ಹಟಮಾರಿತನ ಎಲ್ಲಿಯದು? ಜ್ಯೋತಿಬಾಬು ಅಜಯ್ ಮುಖರ್ಜಿಯನ್ನು ಐಕ್ಯರಂಗದಲ್ಲಿ ಕಟ್ಟಿಹಾಕಲು ಆತನನ್ನು ಮುಖ್ಯಮಂತ್ರಿ ಮಾಡಲೇಬೇಕಾದ ತಂತ್ರವನ್ನು ಅನುಸರಿಸಬೇಕಿತ್ತು, ಅವರು ಹಾಗೆಯೇ ಮಾಡಿದರು. ಅದು ಹಟಮಾರಿತನದ ವಿಚಾರವಲ್ಲ, ಆ ಐಕ್ಯರಂಗದ ಸ್ವರೂಪವೇ ಅಸಂಗತವಾಗಿತ್ತು. ಅಜಯ್ ಮುಖರ್ಜಿಯ ಮುಂದಿನ ನಡೆವಳಿಕೆ ಅದನ್ನೇ ಸಾಬೀತುಗೊಳಿಸುತ್ತದೆ.

ತಮ್ಮ ಹಾಗೂ ಇತರ ಪಕ್ಷಗಳ ತಪ್ಪುಗಳನ್ನು ಕುರಿತಂತೆ ಯಾವಾಗಲೂ ಅನ್ವಯವಾಗುವ ಸೂತ್ರವೊಂದನ್ನು ೧೯೫೧ರಷ್ಟು ಹಿಂದೆಯೇ ಬಸು ನಿರೂಪಿಸಿದ್ದರು. ಕಮ್ಯುನಿಸ್ಟ್ ಪಕ್ಷದ ಮೇಲಿನ ನಿಷೇಧವನ್ನು ತೆರವುಗೊಳಿಸಿದ್ದ ಸಂದರ್ಭ ಅದು. ಬಸು ಹೇಳಿದರು: "ಪಕ್ಷವು ತಾನು ಮಾಡಿದ ತಪ್ಪುಗಳಿಂದ ಪಾಠ ಕಲಿತು ಭವಿಷ್ಯತ್ತಿನೆಡೆಗೆ ದಾಪುಗಾಲು ಹಾಕಲು ಹೊಸ ಮಾರ್ಗವೊಂದನ್ನು ರಚಿಸಿಕೊಳ್ಳಬೇಕು" (ಪು. ೧೩೦). ೨೦೧೦ರಲ್ಲಿ ನಿಂತಿರುವ ನಾವು ಈ ಮಾತುಗಳನ್ನು ಅಂತರ್ಗತಗೊಳಿಸಿಕೊಳ್ಳಬೇಕಾದ ಅಗತ್ಯವಿದೆ. ೧೯೬೦ರ ದಶಕದ ಪ್ರಭುತ್ವ, ಆಳುವ ವರ್ಗ, ಅಂತರರಾಷ್ಟ್ರೀಯ ವಿದ್ಯಮಾನ, ಯಾವುದೂ ಈಗಿಲ್ಲ. ಅಂದಿನ ಸೈದ್ಧಾಂತಿಕ ಪ್ರಶ್ನೆಗಳ ಜಾಗದಲ್ಲಿ ಇಂದು ಇನ್ನೂ ಪ್ರಕರ್ಷವಾದ ಬೇರೆ ಪ್ರಶ್ನೆಗಳಿವೆ. ರಾಷ್ಟ್ರೀಯ ಬಂಡವಾಳಶಾಹಿ, ಐಕ್ಯತೆ ಮತ್ತು ಹೋರಾಟ ತಂತ್ರ, ಸಮಾಜವಾದಿ ಬಣದೊಂದಿಗಿನ ಮೈತ್ರಿ, ಸಾರ್ವಜನಿಕ ಉದ್ದಿಮೆಗಳ ಮಹತ್ವ, ಒಪ್ಪಬಹುದಾದ ವಿದೇಶಾಂಗ ನೀತಿ, ಸಮಾಜವಾದಿ ಚೀಣಾ, ಎಲ್ಲಾ ಗತ ಕಾಲದ ಸಂಗತಿಗಳು. ನಮ್ಮದು ವಿಶ್ವ ವ್ಯಾಪಾರ ಸಂಸ್ಥೆಯ ಕಾಲ, ಅಂಬಾನಿ - ಮಿತ್ತಲ್ ಬಳಗದ ಯುಗ, ಸಂಪೂರ್ಣವಾಗಿ ಅಮೆರಿಕಾ ಬಣದ ಪರವಾದ ವಿದೇಶಾಂಗ ನೀತಿಯ ಅನುಷ್ಠಾನದ ಹೀನಸಂದರ್ಭ, ಕೋಮುವಾದದ ವಿಜೃಂಭಣೆ - ಹಿಂಸೆ -ಅವೈಜ್ಞಾನಿಕತೆಗಳ ಸಂಗಮದ ಭೀಕರ ಸನ್ನಿವೇಶ. ಕಮ್ಯುನಿಸ್ಟರು ತಪ್ಪುಗಳನ್ನೇ ಮಾಡುವುದಿಲ್ಲ, ಅವರ ಸೈದ್ಧಾಂತಿಕ ಸ್ಪಷ್ಟತೆ ಅಮೋಘವಾದ್ದು, ಎಂದೆಲ್ಲಾ ಹೇಳಿಕೊಳ್ಳುವುದು ಅಪಪ್ರಲಾಪವಾಗಿಬಿಡುತ್ತದೆ. ಸ್ವ-ವಿಮರ್ಶೆ ಕಮ್ಯುನಿಸ್ಟ್ ಪಕ್ಷಗಳ ಮೂಲಭೂತ ಲಕ್ಷಣ ಮತ್ತು ಕರ್ತವ್ಯವೆಂದು ಹೇಳುತ್ತಾ ಸ್ವಂತದ ತಪ್ಪುಗಳನ್ನು ಗುರುತಿಸುವ ಗೊಡವೆಗೆ ಹೋಗದೆ ಕೇವಲ ಅನ್ಯರ "ಸ್ವ-ವಿಮರ್ಶೆ" ಮಾಡಹೊರಡುವುದು ಮಾರ್ಕ್ಸ್‌ವಾದಕ್ಕೆ ಶೋಭಿಸುವುದಲ್ಲ. ಎಲ್ಲ ಕಮ್ಯುನಿಸ್ಟ್ ಪಕ್ಷಗಳೂ ಇದನ್ನು ಮನನ ಮಾಡುವ ಅಗತ್ಯವಿದೆ.

ಜ್ಯೋತಿ ಬಸು ಅವರ ನೇತೃತ್ವದಲ್ಲಿ ಎಡರಂಗದ ಸಭೆಗಳು ವಿಧ್ಯುಕ್ತವಾಗಿ ನಡೆಯುತ್ತಿದ್ದ ಕಾಲ ೧೯೭೦ರ ದಶಕದ ಆರಂಭಿಕ ವರ್ಷಗಳು. (ಆಮೇಲೆ ಜೆ.ಪಿ. ಚಳುವಳಿ, ಇಂದಿರಾ ಗಾಂಧಿ ಅಧಿಕಾರ, ಸಂಜಯ ಗಾಂಧಿ ಉಪಟಳ, ತುರ್ತು ಪರಿಸ್ಥಿತಿ, ಇತ್ಯಾದಿ.) ೧೯೭೫ರಲ್ಲಿ ಬಸು ಹೇಳಿದ್ದು: "ನಾವು ಮತ್ತೊಬ್ಬರೊಂದಿಗೆ ಹೊಂದಿಕೊಳ್ಳದಿದ್ದರೆ, ಅವರ ಅಭಿಪ್ರಾಯಗಳಿಗೂ ಅವಕಾಶ ಕಲ್ಪಿಸಿಕೊಟ್ಟು ವ್ಯಾಪಕ ನೆಲೆಗಟ್ಟಿನ ಮೇಲೆ ನಿಲ್ಲದಿದ್ದರೆ, ಕುಸಿದು ತಳಕಾಣುವುದು ಖಂಡಿತ. ಕ್ಷುಲ್ಲಕ ಮನಸ್ತಾಪಗಳನ್ನು, ವಿಷಮ ಭಾವನೆಗಳನ್ನು ಮೆಟ್ಟಿ ಮೀರಿ ನಿಲ್ಲಲು ಸಾಧ್ಯವಾಗದಿದ್ದರೆ, ಒಂದು ಸಮೂಹವನ್ನು, ಒಂದು ತಂಡವನ್ನು, ಸುಸೂತ್ರವಾಗಿ ಮುನ್ನಡೆಸಿಕೊಂಡು ಹೋಗಲಾಗುವುದಿಲ್ಲ" (ಪು. ೨೩೨).

ಈ ಮಾತು ಕೇಳಿಸುತ್ತಿದೆಯೆ? ಕೇಳಿಸಿದ್ದರೆ ಜ್ಯೋತಿ ಬಸು ಅವರ ಗೌರವಾರ್ಥ ಅವರ ಮಾರ್ಗದರ್ಶನದಲ್ಲಿ ಈ ಮಾತನ್ನು ಅನುಷ್ಠಾನಕ್ಕೆ ತರಬೇಕು: ಪಶ್ಚಿಮ ಬಂಗಾಳದ ಶಾಸನಸಭೆಯ ಚುನಾವಣೆಗಾಗಿ ಮಾತ್ರವಲ್ಲ, ನಮ್ಮ ದೇಶದ ಹಿತಕ್ಕಾಗಿ, ಸಾರ್ವಭೌಮತ್ವಕ್ಕಾಗಿ.

ಜಿ. ಆರ್.

# ಭಾರತ-ಪಾಕಿಸ್ತಾನ ಮಾತುಕತೆಯೊಂದೇ ಮಾರ್ಗ




**ಭಾ**ರತ-ಪಾಕಿಸ್ತಾನ ಸಂಬಂಧಗಳ ಸುಧಾರಣೆ ಬರಬರುತ್ತಾ ಮರೀಚಿಕೆಯಾಗತೊಡಗಿದೆ. ಪರಸ್ಪರ ವಿಶ್ವಾಸ ವರ್ಧಿಸುವ ದಿಶೆಯಲ್ಲಿ ಮಾತುಕತೆಗಳು ಒಂದು ಹಂತ ತಲುಪಿದೆ ಎನ್ನುವಷ್ಟರಲ್ಲಿ ಯಾವುದೋ ಕಾರಣಗಳು, ಇಲ್ಲವೆ ಸಂಭವಿಸುವ ದುರ್ಘಟನೆಯೊಂದರಿಂದ ಮತ್ತೆ ಸ್ಥಗಿತಗೊಳ್ಳುತ್ತವೆ, ನೆನೆಗುದಿಗೆ ಬೀಳುತ್ತವೆ. ಹಾಗಾದಾಗ ಮತ್ತೆ ಒಂದು ಎಳೆ ಹಿಡಿದು ಪ್ರಯತ್ನ ಮುಂದುವರಿಸಲು ಸಾಕಷ್ಟು ಕಾಲ ಹಿಡಿದಿರುತ್ತದೆ. ಅಷ್ಟು ಹೊತ್ತಿಗೆ ಹಳೆಯದರ ಜೊತೆಗೆ ಹೊಸ ಸಮಸ್ಯೆಗಳೂ ಸೇರಿ ಮತ್ತಷ್ಟು ಕಗ್ಗಂಟಾಗಿರುತ್ತದೆ. ಇದೊಂದು ವಿಷವರ್ತುಲವಾಗತೊಡಗಿದೆ. ಎರಡು ವರ್ಷಗಳ ನಂತರ ಈಗ ಪುನರಾರಂಭವಾಗಿರುವ ಮಾತುಕತೆಗಳೂ ಕೂಡ ಅದೇ ಜಾಡು ಹಿಡಿಯುವ ಸೂಚನೆಗಳು ಕಂಡುಬರುತ್ತಿವೆ. ಇದರಿಂದ ಸಂತೋಷವಾಗಿರುವುದು ಎರಡೂ ಕಡೆಯ ಉಗ್ರಗಾಮಿಗಳಿಗೆ ಮಾತ್ರ. ಒತ್ತಡಗಳೇನೇ ಇರಲಿ ಮಾತುಕತೆಗಳ ಮುಂದುವರಿಕೆ ಬಿಟ್ಟರೆ ಅನ್ಯಮಾರ್ಗವಿಲ್ಲ ಎಂಬುದು ಎರಡೂ ಕಡೆ ಮನದಟ್ಟಾದರೆ ಇಂದಲ್ಲ ನಾಳೆ ಹಾದಿ ಸುಗಮವಾದೀತು.

ಮುಂಬೈಯಲ್ಲಿ ೨೦೦೮ರ ನವೆಂಬರ್ ೨೬ರಂದು ಪಾಕಿಸ್ತಾನಿ ಉಗ್ರಗಾಮಿಗಳು ನಡೆಸಿದ ದಾಳಿ ಒಂದು ಬಗೆಯಲ್ಲಿ ಭಾರತದ ಮೇಲೆ ಸಾರಿದ ಪರೋಕ್ಷ ಯುದ್ಧವಾಗಿತ್ತು. ಆ ಸಂದರ್ಭದಲ್ಲಿ ಭಾರತ-ಪಾಕಿಸ್ತಾನಗಳ ನಡುವೆ ನಡೆಯುತ್ತಿದ್ದ ಪರಸ್ಪರ ವಿಶ್ವಾಸ ಮೂಡಿಸುವ ಮಾತುಕತೆಗಳು ಒಂದು ನಿರ್ದಿಷ್ಟ ಹಂತ ತಲುಪಿದ್ದವು. ಉಗ್ರಗಾಮಿಗಳ ಉಪಟಳದಿಂದಾಗಿ ಆ ಬೆಳವಣಿಗೆ ಹಳಿ ತಪ್ಪಿದ್ದಲ್ಲದೆ, ಭಾರತ-ಪಾಕಿಸ್ತಾನಗಳ ನಡುವಿನ ಸಂಬಂಧಗಳು ತೀವ್ರವಾಗಿ ಕುಸಿದವು. ಪಾಕಿಸ್ತಾನಿ ಸರಕಾರ ಮುಂಬೈ ದಾಳಿಯ ರೂವಾರಿಗಳ ಮೇಲೆ ಕ್ರಮ ಕೈಗೊಳ್ಳಲು ನಿರಾಕರಿಸಿತು. ಇದರಿಂದಾಗಿ ಪರಿಸ್ಥಿತಿ ಬಿಗಡಾಯಿಸಿತು. ಪಾಕಿಸ್ತಾನದಲ್ಲಿ ಹಲವು ವರ್ಷಗಳ ಮಿಲಿಟರಿ ಸರ್ವಾಧಿಕಾರದ ಆಡಳಿತದ ನಂತರ ಸ್ಥಾಪನೆಗೊಂಡಿರುವ ನಾಗರಿಕ ಸರಕಾರ ಇನ್ನೂ ಪೂರ್ಣವಾಗಿ ನೆಲೆ ಕಂಡುಕೊಂಡಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆ ಸ್ಥಿರಗೊಳ್ಳಲು ಅವಶ್ಯಕವಾಗಿರುವ ಸೇನೆಯ ಮೇಲೆ ಹಿಡಿತ, ಮುಖ್ಯವಾಗಿ ಪಾಕಿಸ್ತಾನಿ ಸೇನೆಯ ಗುಪ್ತಚರ ಸಂಸ್ಥೆ ಇಂಟರ್ ಸರ್ವಿಸಸ್ ಇಂಟೆಲಿಜೆನ್ಸ್ ಮೇಲೆ ನಿಯಂತ್ರಣ ಸಾಧಿಸಲು ನಾಗರಿಕ ಸರಕಾರಕ್ಕೆ ಸಾಧ್ಯವಾಗಿಲ್ಲ. ಅದೇ ರೀತಿಯಲ್ಲಿ ಉಗ್ರಗಾಮಿ ಸಂಘಟನೆಗಳಾದ ಲಷ್ಕರ್-ಇ-ತೊಯ್ಬಾ, ಜೈಷೆ ಮೊಹಮ್ಮದ್ ಮೊದಲಾದುವುಗಳ ಮೇಲೆ ಕ್ರಮಕೈಗೊಳ್ಳಲು ಸಾಧ್ಯವಾಗುತ್ತಿಲ್ಲ. ಈ ಉಗ್ರಗಾಮಿ ಸಂಘಟನೆಗಳ ಚಟುವಟಿಕೆಗಳು ಒಂದು ಕಡೆಯಾದರೆ, ಅಫ್ಘಾನಿಸ್ತಾನದ ತಾಲಿಬಾನ್‌ಗಳ ಹಾವಳಿಯಿಂದ ಪಾಕಿಸ್ತಾನ ತತ್ತರಿಸುತ್ತಿದೆ. ಇದರ ಮೇಲೆ ಹೆಚ್ಚುತ್ತಿರುವ ಅಮೆರಿಕಾದ ಒತ್ತಡ ಬೇರೆ. ಈ ಹಿನ್ನೆಲೆಯಲ್ಲಿ ಪಾಕಿಸ್ತಾನದಲ್ಲಿ ಜನಜೀವನ ಹೆಚ್ಚು ಹೆಚ್ಚು ದುಸ್ತರವಾಗುತ್ತಿದೆ. ಸಮಸ್ಯೆಗಳ ಆಗರದಿಂದ ಜನರ ಮನಸ್ಸನ್ನು ಬೇರೆಡೆಗೆ ತಿರುಗಿಸಲು ಪಾಕಿಸ್ತಾನಿ ಆಡಳಿತಕ್ಕೆ ಸುಲಭವಾದ ಮಾರ್ಗವೆಂದರೆ ಭಾರತದ ಮೇಲೆ ಆಕ್ರೋಶವನ್ನು ತೋರುವುದು. ಇದು ಯಾವತ್ತಿನಿಂದಲೂ ನಡೆದುಬಂದಿರುವ ವಿಚಾರ.



ಯೂಸುಫ್ ರಜಾ಼ ಗಿಲಾನಿ

ಭಾರತ-ಪಾಕಿಸ್ತಾನಗಳ ನಡುವಣ ವೈಮನಸ್ಯ ಇಂದು ನಿನ್ನೆಯದೇನಲ್ಲ, ವಿಭಜನೆಯೊಂದಿಗೇ ಹುಟ್ಟಿಬಂದದ್ದು, ಸಮಸ್ಯೆಗಳು ಬೆಳೆದಿವೆಯೇ ಹೊರತು ಕಡಿಮೆಯಾಗಿಲ್ಲ, ಆಯಕಟ್ಟಿನಲ್ಲಿರುವ ಪಾಕಿಸ್ತಾನ ಶೀತಯುದ್ಧದ ಕಾಲದಿಂದಲೂ ಅಮೆರಿಕಾದ ಕೈಗೊಂಬೆಯಾಗಿ ಅದರ ಪೋಷಣೆಯಲ್ಲೇ ಬೆಳೆದಿದೆ. ಈಗಂತೂ ಅಫ್ಘಾನಿಸ್ತಾನದಲ್ಲಿ ಸಿಕ್ಕಿಕೊಂಡಿರುವ ಅಮೆರಿಕಾಗೆ ಪಾಕಿಸ್ತಾನದ ಸಹಕಾರ ತುಂಬಾ ಅಗತ್ಯವಾಗಿದೆ. ಇಂಥ ಪರಿಸ್ಥಿತಿಯಲ್ಲಿ ಭಾರತ-ಪಾಕಿಸ್ತಾನಗಳ ನಡುವೆ ಇರುವ ಸಮಸ್ಯೆಗಳನ್ನು ಬಗೆಹರಿಸುವತ್ತ, ಸಂಬಂಧಗಳನ್ನು ಸುಧಾರಿಸುವತ್ತ ಸರಿಯುವುದು ಸುಲಭವೇನಲ್ಲ. ಒಂದು ಸುತ್ತಿನ ಮಾತುಕತೆಯಲ್ಲಿಯೇ ದಾರಿ ಕಂಡುಕೊಳ್ಳುವುದು ಸಾಧ್ಯವಿಲ್ಲ. ಹಾಗಾಗಿ ಮಾತುಕತೆಗಳು ನಿರಂತರವಾಗಿ ನಡೆಯುತ್ತಿದ್ದು, ಹಂತಹಂತವಾಗಿ ಸಮಸ್ಯೆಗಳನ್ನು ನಿವಾರಿಸಬೇಕು. ಭಾರತ ಸರಕಾರ ಈ ವಿಚಾರದಲ್ಲಿ ಸ್ಪಷ್ಟವಾದ ನಿಲುವನ್ನು ತಾಳಿದೆ. ಹಿಂದುತ್ವವಾದಿ ಸಂಘಟನೆಗಳ ಟೀಕಾಪ್ರಹಾರಗಳೇನೇ ಇರಲಿ ಭಾರತ ಸರಕಾರ ಮಾತುಕತೆಗಳಿಗೆ ಆದ್ಯತೆ ನೀಡುತ್ತ ಬಂದಿದೆ. ಅದು ಬಿಟ್ಟರೆ ಬೇರೇ ಮಾರ್ಗವಿಲ್ಲ ಎಂಬುದನ್ನು ಅರಿತಿದೆ.

ಮುಂಬೈ ದಾಳಿ ಪ್ರಕರಣ ಜರುಗಿದ ಮೇಲೆ ಮುರಿದುಬಿದ್ದ ಮಾತುಕತೆ ಪುನರಾರಂಭವಾಗತೊಡಗಿದ್ದು ಕೂಡ ವಿವಾದಾತ್ಮಕವಾಗಿಯೇ. ಮನಮೋಹನ ಸಿಂಗ್ ಸರಕಾರ ಅಮೆರಿಕಾದ ಒತ್ತಡಕ್ಕೆ ಮಣಿಯಿತು ಎನ್ನುವ ಆರೋಪ ತೀವ್ರವಾಗಿತ್ತು. ಇದು ನಿಜವಾದರೂ, ಒಂದು ಬಗೆಯಲ್ಲಿ ಪೂರ್ಣವಾಗಿ ಶೈತ್ಯಗೊಂಡಿದ್ದ ಸಂಬಂಧಗಳಿಗೆ ಪುನಶ್ಚೇತನ ನೀಡಿತು ಎನ್ನಬಹುದು. ಅಮೆರಿಕಾದ ಉದ್ದೇಶ ಏನೇ ಇರಲಿ, ಪಾಕಿಸ್ತಾನದೊಂದಿಗೆ ಸಂಪರ್ಕ ಏರ್ಪಡಿಸುವುದಕ್ಕೆ ನಾಂದಿಯಾದರೆ ಒಳಿತೆ. ಪಾಕಿಸ್ತಾನದ ಪ್ರಧಾನಿ ಯೂಸುಫ್ ರಜಾ಼ ಗಿಲಾನಿ ಭಾರತದ ಪ್ರಧಾನಿ ಮನಮೋಹನ ಸಿಂಗ್ ಶರ್ಮ್‌ಅಲ್‌ಶೇಖ್ ಮತ್ತು ಭೂತಾನದ ರಾಜಧಾನಿ ಥಿಂಪುವಿನಲ್ಲಿ ಸಾರ್ಕ್ ಸಮ್ಮೇಳನದ ಸಂದರ್ಭದಲ್ಲಿ ಭೇಟಿಯಾಗಿ ವಿದೇಶಾಂಗ ಸಚಿವರ ಮಟ್ಟದಲ್ಲಿ ಮಾತುಕತೆ ಪುನರಾರಂಭಿಸಲು ಸಮ್ಮತಿಸಿದ್ದು ದಿಟ್ಟ ಹೆಜ್ಜೆ. ಆದರೆ ಎರಡೂ ದೇಶಗಳಲ್ಲಿ ಇದಕ್ಕೆ ಭಾರಿ ವಿರೋಧವಿತ್ತು. ತೀವ್ರಗಾಮಿಗಳ ವತಿಯಿಂದ. ಭಾರತ-ಪಾಕಿಸ್ತಾನಗಳ ನಡುವೆ ಮುಖಾಮುಖಿಯನ್ನು ಸೋಲು-ಗೆಲುವಿನ ದೃಷ್ಟಿಯಿಂದ ನೋಡುವ ಪ್ರವೃತ್ತಿ ಇದೆ. ಪಾಕಿಸ್ತಾನ ಸರಕಾರ ಮುಂಬೈ ದಾಳಿಯ ರೂವಾರಿಗಳ ಮೇಲೆ ಕ್ರಮ ಕೈಗೊಳ್ಳದಿದ್ದರೂ ಮಾತುಕತೆ ಪ್ರಾರಂಭಿಸಲು ಭಾರತ ತೋರಿದ ಸಮ್ಮತಿಯನ್ನು 'ಶರಣಾಗತಿ' ಎಂದು ಟೀಕಿಸಲಾಯಿತು.



ಎಸ್. ಎಂ. ಕೃಷ್ಣ

ಈ ಎಲ್ಲ ವಾದವಿವಾದಗಳ ಸುಳಿಯಲ್ಲಿ ಜರುಗಿದ ಭಾರತ-ಪಾಕಿಸ್ತಾನ ವಿದೇಶಾಂಗ ಸಚಿವರ ಭೇಟಿ, ಮಾತುಕತೆಗಳಲ್ಲಿ ಪರಸ್ಪರರು ತಮ್ಮತಮ್ಮ ನಿಲುವಿಗೆ ಬದ್ಧರಾಗಿದ್ದುದರಲ್ಲಿ ಆಶ್ಚರ್ಯವೇನಿಲ್ಲ. ಮಾತುಕತೆಯ ನಂತರ ಅಂಗೀಕೃತ ಜಂಟಿ ಪ್ರಕಟಣೆ ಇಲ್ಲದಿದ್ದರಿಂದಲೇ ಅದು ವೇದ್ಯವಾಗುತ್ತದೆ. ಡಿಸೆಂಬರ್ ತಿಂಗಳಲ್ಲಿ ಮತ್ತೆ ಭೇಟಿಯಾಗುವ ತೀರ್ಮಾನವನ್ನು ಬಿಟ್ಟರೆ ಬೇರೇನೂ ಸಾಧನೆಯಾಗಲಿಲ್ಲ ಎನ್ನುವುದು ನಿಜ. ಪಾಕಿಸ್ತಾನಿ ವಿದೇಶಾಂಗ ಸಚಿವರು ರಾಜತಾಂತ್ರಿಕ ಸಭ್ಯತೆ ಮೀರಿ ನಡೆದುಕೊಂಡುದುದೇ ಅಲ್ಲದೆ, ವ್ಯತಿರಿಕ್ತ ಹೇಳಿಕೆ ನೀಡಿದ್ದೂ ನಿಜ. ಮರುದಿನ ಅದೇ ಸಚಿವ ಬೇರೆಯೇ ನಿಲುವನ್ನು ತಳೆದು ಗೊಂದಲ ಸೃಷ್ಟಿಸಿದ್ದೂ ಅಷ್ಟೆ ನಿಜ. ಇದನ್ನೇ ದೊಡ್ಡದು ಮಾಡಿ ನಮ್ಮ ಇಲೆಕ್ಟ್ರಾನಿಕ್ ಮಾಧ್ಯಮಗಳು ಎರಡು ದಿನ ಮಾತುಕತೆಗಳು ಮುರಿದುಬಿದ್ದುವು ಎಂದು ಅಬ್ಬರಿಸಿವೆ. ಭಾರತೀಯ ಜನತಾ ಪಾರ್ಟಿಯಂತೂ ಮಾತುಕತೆಗೆ ಸಮ್ಮತಿಸಿದ್ದೇ ತಪ್ಪು ಎಂದು ಟೀಕಿಸುವುದರ ಜೊತೆಗೆ ಪಾಕಿಸ್ತಾನ ಭಾರತಕ್ಕೆ, ವಿಶೇಷವಾಗಿ ವಿದೇಶಾಂಗ ಸಚಿವರಿಗೆ ಅವಮಾನ ಮಾಡಿದೆ ಎಂದು ಆರೋಪಿಸಿ, ಇನ್ನು ಪಾಕಿಸ್ತಾನದೊಂದಿಗೆ ವ್ಯವಹರಿಸಕೂಡದು ಎಂದು ಸಾರಿದೆ. ಇಂಥ ಅಬ್ಬರಗಳಿಂದ ಯಾವ ಪ್ರಯೋಜನವೂ ಇಲ್ಲ. ಈ ಮೊದಲೇ ಹೇಳಿರುವಂತೆ ಮಾತುಕತೆ ನಡೆಸುವುದು ಬಿಟ್ಟರೆ ಅನ್ಯ ಮಾರ್ಗವಿಲ್ಲ. ಇದನ್ನು ಅರಿತುಕೊಂಡು ಎರಡೂ ದೇಶಗಳು ಮುಂದುವರಿಯಬೇಕಿದೆ. ಆತುರದ ನಿರ್ಧಾರಗಳು ಅಪಾಯಕಾರಿ.

ಸೀಯಾರ್ಕೆ
'ಚೌಬೀನ', ೮೪೫, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು -೫೬೦ ೦೮೫

# 'ಕವಲು' ಕಾದಂಬರಿ ಮತ್ತು ಕುಟುಂಬ ವಿನಾಶದ ಸಂಕಥನ

ಡಾ|| ಬಿ. ಎನ್. ಸುಮಿತ್ರಾಬಾಯಿ






ಪ್ರಕಾಶಕರು : **ಸಾಹಿತ್ಯ ಭಂಡಾರ, ಬಳೆಪೇಟೆ, ಬೆಂಗಳೂರು** ಪುಟಗಳು : ೩೦೦
ಲೇಖಕರು : **ಎಸ್. ಎಲ್. ಭೈರಪ್ಪ** ಬೆಲೆ : ರೂ. ೨೫೦

**ಪ**ತ್ರಿಕೆಗಳಲ್ಲಿ ಪ್ರಚಾರ ಪಡೆದ, ರಭಸದಿಂದ ಬಿಕರಿಯಾಗುತ್ತಿರುವ ಭೈರಪ್ಪನವರ 'ಕವಲು' ಕಾದಂಬರಿಯನ್ನು ಓದಿದ ಮೇಲೆ ಮೂಡಿದ ಅಭಿಪ್ರಾಯಗಳು: ಜೀವನದ ಎಲ್ಲ ಕ್ಷೇತ್ರಗಳೂ ವಾಣಿಜ್ಯೀಕರಣಗೊಂಡಿರುವ ಇಂದಿನ ನಮ್ಮ ಪರಿಸರದಲ್ಲಿ 'ಲಾಭಗಾರಿಕೆ' ಕೇವಲ ಯಶಸ್ಸು, ಆರ್ಥಿಕ ಸವಲತ್ತಿನ ಅಗತ್ಯವನ್ನು ಮಾತ್ರ ಪೂರೈಸಿ ವಿರಮಿಸುವುದಿಲ್ಲ. ಲಾಭಗಾರಿಕೆಯೇ ಸ್ವತಃ ಜೀವನದ ಎಲ್ಲದರ ಯೋಗ್ಯತೆಯನ್ನು ಅಳೆಯಲು ಮಾನದಂಡ ಆಗುತ್ತದೆ. ಹೀಗಾಗಿ ಸಾಹಿತ್ಯ ಎಂಬುದೂ ಒಂದು ಸೃಷ್ಟಿಶೀಲ ಕಲಾಭಿವ್ಯಕ್ತಿ, ಅದು ಎಲ್ಲ ಕಾಲದ ಮನುಷ್ಯರ ಅಂತರಂಗವನ್ನು ಮುಟ್ಟಿ ಅರಳಿಸುವುದರಲ್ಲಿ ಸಾರ್ಥಕತೆ ಕಾಣಬೇಕು, ಜನಪ್ರಿಯತೆ ಬೇರೆ ಜನಪರತೆಯೇ ಬೇರೆ ಎಂದು ನಂಬಿ ಓದುವವರಿಗೆ 'ಕವಲು'ವಿನ ಜನಪ್ರಿಯತೆಯ ಲಕ್ಷಣಗಳು ಎಷ್ಟರಮಟ್ಟಿಗೆ ಕೃತಿಯ ಸತ್ಯ ಹೇಳುವ ಯತ್ನಕ್ಕೆ ಪೂರಕ, ಎಂಬ ಪ್ರಶ್ನೆ ಹುಟ್ಟಿದರೆ ಆಶ್ಚರ್ಯವಿಲ್ಲ. ಆದ್ದರಿಂದ ಈ ಪುಸ್ತಕ ಎಷ್ಟು ಮಾರಾಟ ಆಗಿದೆ, ಎಷ್ಟು ಜನ ಇದನ್ನು ಓದಿ ಮನರಂಜನೆ ಪಡೆದಿದ್ದಾರೆ, ಎಂಬುದು ಇದರ ಜೀವನದರ್ಶನ ಸಾಮರ್ಥ್ಯವನ್ನು ನಿರ್ಧರಿಸಲು ಮಾನದಂಡಗಳಲ್ಲ.

'ಕವಲು'ವಿನ ವಸ್ತು ನಮಗೆ ತೀರಾ ಹತ್ತಿರದಲ್ಲಿ ಜರುಗುತ್ತಿರುವ ಸಾಮಾಜಿಕ ಕೌಟುಂಬಿಕ ಸ್ಥಿತ್ಯಂತರಗಳನ್ನೂ, ಅವುಗಳಿಗೆ ಕಾರಣವಾಗುವ ಶಕ್ತಿಗಳನ್ನೂ, ಈ ಸ್ಥಿತ್ಯಂತರದಿಂದಾಗಿ ಕೌಟುಂಬಿಕ ಸಾಮರಸ್ಯ, ಭದ್ರತೆಗಳು ನಶಿಸಿಹೋಗುತ್ತಿರುವುದನ್ನೂ ಕಂಡು ಕಳವಳಗೊಂಡು ಚರ್ಚೆಗೆ ತರುತ್ತದೆ. ಇಂದಿನ ಈ ಬಗೆಯ ಅಸ್ಥಿರತೆ, ಸಂಕ್ರಮಣ ಸ್ಥಿತಿಗತಿಗಳನ್ನು ಅವುಗಳ ಚಲನಶೀಲತೆಯ ಅನಿವಾರ್ಯ ಅವಸ್ಥೆಗಳೆಂದು ನೋಡದೆ, ಸ್ಥಿರವಾದದ್ದು, ಶಾಶ್ವತವಾದದ್ದು ಎಂಬ ಸಾಂಪ್ರದಾಯಿಕ ನಂಬಿಕೆಗಳ ಮೂಲಕವಾಗಿ ನೋಡಹೊರಟಲ್ಲಿ, ಬದಲಾವಣೆ = ವಿಕೃತಿ = ವಿನಾಶ ಎಂಬ ಸರಳ ಸಮೀಕರಣ ಮಾತ್ರ ಎದುರಾಗುತ್ತದೆ.

ಹಿಂದಿನಿಂದ ಬಂದ ಹಿಂದು ಕುಟುಂಬ ವ್ಯವಸ್ಥೆ ಆಧುನಿಕ ಶತಮಾನಗಳಲ್ಲಿ ಸಾಕಷ್ಟು ಬದಲಾಗಿದೆ. ಆದರೆ ಅದರ ಚೌಕಟ್ಟಿನೊಳಗೇ ಬದುಕಬಯಸುವವರಿಗೆ ಬದಲಾವಣೆಗಳಿಗೆ ಒಗ್ಗಿಕೊಳ್ಳುವ ಪ್ರಕ್ರಿಯೆಯೇ ಆತ್ಮಮರುಕದ ಕಾರಣವಾಗಬಹುದು. 'ಕವಲು'ವಿನ ಒಂದು ಮುಖ್ಯಪಾತ್ರವಾದ ಕೈಗಾರಿಕೋದ್ಯಮಿ ಜಯಕುಮಾರನದು ಇಂತಹ ಪರಿವರ್ತನೆಗೆ ಒಗ್ಗುವ ಬದಲು 'ಬಲಿಪಶು'ವಾಗಿಬಿಡುವ ದುರಂತದ ವೃತ್ತಾಂತ. ಇವನು ಎರಡು ಬಾರಿ ಮದುವೆಯಾಗಿದ್ದು, ಆ ಇಬ್ಬರು ಪತ್ನಿಯರ ಜೊತೆಗೆ ಇವನ ಸಾಂಸಾರಿಕ ಜೀವನ ಎಷ್ಟು ಪರಸ್ಪರ ವಿರುದ್ಧವಾದದ್ದು ಎಂಬುದನ್ನು 'ಕವಲು' ಕಾದಂಬರಿಯ ಮುಖ್ಯ ಇತಿವೃತ್ತವೆಂದು ಭಾವಿಸಬಹುದು. 'ಬಲಿಪಶು'ವಿನ ಜಾಗದಲ್ಲಿ ಕಡೆಯಲಾಗಿರುವ ಇವನ ಮನೋವೇಧಕ ಚಿತ್ರದಲ್ಲಿ ಅವನು ತನ್ನ ಪತ್ನಿಯರ ಬಗ್ಗೆ ಬದುಕಿನ ಆ ಎರಡು ಹಂತಗಳಲ್ಲಿ ಬೆಳೆಸಿಕೊಂಡ ಭಾವನೆ, ಅವರೊಂದಿಗಿನ ಇವನ ಅನುಭವಗಳನ್ನು ವೈದೃಶ್ಯವನ್ನು ಕೃತಿಯಲ್ಲಿ ತರುವುದಕ್ಕೆ ಲೇಖಕರು ಸ್ತ್ರೀವಾದದ ಕೆಲವು ಸೈದ್ಧಾಂತಿಕ ವಿಚಾರಗಳನ್ನು, ಸ್ತ್ರೀವಾದದ ಪ್ರತಿಪಾದನೆ ಮಾಡುವ ಬುದ್ಧಿಜೀವಿ ಮಹಿಳೆಯರನ್ನು, ಮಹಿಳಾ ಚಳವಳಿ ಮತ್ತು ಅದರ ಪರಿಣಾಮವಾಗಿ ರೂಪುಗೊಂಡಿರುವ ಕಾನೂನುಗಳನ್ನು ವಿಚಿತ್ರವಾಗಿ ಒಗ್ಗೂಡಿಸಿ ತಮ್ಮ ವಾದವನ್ನು ಮುಂದಿಡಲು ಉಪಕರಣವನ್ನಾಗಿ ಮಾಡಿಕೊಳ್ಳುವುದು ಒಂದು ಮುಖ್ಯ ಸಂಗತಿ. ಎಲ್ಲ ಬಗೆಯ ಪುರೋಗಾಮಿ ಎಂದು ಜನ ಭಾವಿಸುವ ಸಿದ್ಧಾಂತ ತತ್ವ ವಿಚಾರಗಳನ್ನೂ ಅದರ ವಿರುದ್ಧ ಜಾಗದಿಂದ, ಅಂದರೆ ಸಾಂಪ್ರದಾಯಿಕ ನಂಬಿಕೆ, ಭಾವನೆ ಶ್ರದ್ಧೆಗಳ ನೆಲೆಯಿಂದ ನೋಡಲು ಯತ್ನಿಸುವುದೇ ಭೈರಪ್ಪನವರ ಸ್ಟೈಲು. ಹಾಗಾಗಿ ಕುಟುಂಬ ವ್ಯವಸ್ಥೆಯ ಪಲ್ಲಟಗಳ ಬಗ್ಗೆ ತೀರ್ಮಾನಿಸಲು ಸಮಾಜವೇ ನ್ಯಾಯಾಲಯವಾಗಿ, ಅದರಲ್ಲಿ ಬಡಪಾಯಿ ಜಯಕುಮಾರ, ವಿನಯಚಂದ್ರರಂಥ ಸಾಧು ಪತಿಗಳು ನ್ಯಾಯ ಕೇಳುತ್ತಿರುವ ಫಿರ್ಯಾದುದಾರರಾಗಿ, ಇವರನ್ನು ಬಾಳಿಸಲಾರದ, ಇವರೊಂದಿಗೆ ಬಾಳಲೂ ಆಗದ ರೀತಿ ನಿರ್ಮಾನವೀಕರಣಗೊಂಡುಬಿಟ್ಟಂಥ ಸ್ತ್ರೀವಾದಿಗಳಾದ ಪತ್ನಿಯರನ್ನು ಅಪರಾಧಿಗಳನ್ನಾಗಿಯೂ ಕಲ್ಪಿಸಿರುವ 'ಕವಲು'ವಿನಲ್ಲಿ ನ್ಯಾಯಾಧೀಶರು ಯಾರೆಂದು ಬೇರೆ ಹೇಳಬೇಕೆ ? ಆ ನ್ಯಾಯಾಧೀಶರು ಲೇಖಕರೇ ಎಂದು ಕೆಲವರೂ, ಓದುಗರೇ ಎಂದು ಲೇಖಕರೂ ಭಾವಿಸಲು ಅವಕಾಶವಿದೆ.

ಆದರೆ ನಾನು ಹೇಳಿದ ಈ ಕುಟುಂಬ ನ್ಯಾಯಾಲಯ (!)ದ ಚಿತ್ರಕ್ಕೆ ಆಧಾರವೊದಗಿಸಬೇಕಲ್ಲವೆ. ಅದಕ್ಕಾಗಿ ಈ ಕೆಲವು ಉಲ್ಲೇಖಗಳು :

ನಂಜುಂಡೇಗೌಡ ಎಂಬ ಮಹಿಳಾ ಪೊಲೀಸು ಠಾಣೆಯ ಪುರುಷ ಕಾನ್ಸ್‌ಟೇಬಲ್ ಹೇಳುತ್ತಾನೆ: ''ಗೊತ್ತಿಲ್ವರಾ ? ಎಲ್ಲಾ ಕಡೇಲೂ ಎಂಗಸರಿಗೆ ಅನ್ಯಾಯವಾಗ್ತಿದೆ. ಕಂಪ್ಲೇಂಟು ತಗಂಡು ಓದ್ರೂ ಗಂಡಸು ಪೊಲೀಸಿನೋರು ಕ್ರಮ ತಗಾಳಾಕಿಲ್ಲ. ಆದ್ದರಿಂದ ಎಂಗಸರ ಕಂಪ್ಲೇಂಟು ಇಚಾರಿಸಿ ಗಂಡಸು ಆಪಾದಿತನನ್ನ ಇಡಿದು ಮಟ್ಟ ಹಾಕಾಕೆ ಎಂಗಸು ಪೊಲೀಸಿನೋರೇ ಇರಬೇಕು ಅಂತ ಸರ್ಕಾರವೇ ನೇಮಕ ಮಾಡಸಿಟ್ಟಿದೆ. ಯಾವಳೇ ಎಂಗಸು ಟೇಸನ್ನಿಗೆ ಬಂದು ನನ್ನ ಗಂಡ ನೀನು ವರದಕ್ಷಿಣೆ ತರಲಿಲ್ಲ ಅಂತ ಬೊಯ್ದ, ನನ್ನ ಅತ್ತೆ ಮಾವ ಅತ್ತಿಗೆ ನಾದಿನಿ ಬಾವ ಬಾಮೇದ ನೀನೇನೇ ತಂದದ್ದು ಮಹಾ ಅಂತ ಹಂಗಿಸಿದರು ಅಂತ ಒಂದು ಕಂಪ್ಲೆಂಟು ಬರೆದುಕೊಟ್ಟಳು ಅಂದರೆ ಅವರೆಲ್ಲರನ್ನೂ ಇಡಕಂಡು ಬಂದು ಲಾಕಪ್ಪಿಗೆ ಆಕಿ ಬೀಗ ಜಡಿದು, ಜಾಮೀನು ಇಲ್ಲ, ತಿಳಕಳಿ. ಎಲ್ಲರಿಗೂ ಏಳು ವರ್ಸ ಸಜೆ ತಿಳಕಳಿ. ಹಂಗೇನೇ ಯಾವಳೇ ಎಂಗಸು ಟೇಸನ್ನಿಗೆ ಬಂದು ನನ್ನ ಗಂಡ ನನ್ನ ಹ್ವಡದ ಅತ್ತೆಮಾವ ಅತ್ತಿಗೆ ನಾದಿನಿ ಬಾವ ಬಾಮೈದ ಮನಸ್ಸಿಗೆ ಕಿರುಕುಳ ಕೊಟ್ಟರು ಅಂತ ಕಂಪ್ಲೇಂಟು ಕೊಟ್ಟಳು ಅಂದರೆ ಅವರನ್ನೆಲ್ಲ ಲಾಕಪ್ಪಿಗೆ ಆಕಿ ಜಾಮೀನು ಕೊಡೂ ಹಂಗಿಲ್ಲ ನಾಕು ವರ್ಷ ಐದು ವರ್ಸ ಹಿಂಗೆ ಸಜಾ. ಇದಕ್ಕೆಲ್ಲ ಎಂಗಸು ಪೊಲೀಸರೆ ಸರಿ, ಗಂಡಸರನ್ನ ನಂಬೂ ಹಂಗಿಲ್ಲ ಅಂತ ಸರ್ಕಾರದೋರೇ ಮಾಡಿ ಮಡಗವ್ರೆ'' (ಪುಟ ೧೫)

ಮಹಿಳಾಪರವಾದ ಕಾನೂನು ಸವಲತ್ತನ್ನು ಉದ್ಯಮಪತಿಯಾದರೂ ಕಾನೂನನಲ್ಲಿ ನಿರಕ್ಷರಿಯಾಗಿರುವ ಜಯಕುಮಾರನೆಂಬ ವಿಷಾದವಾದಿ ಅರ್ಜುನನಿಗೆ ನಂಜುಂಡೇಗೌಡ ಎಂಬ ಪೊಲೀಸ್ ಪೇದೆ ಗೀತಾಚಾರ್ಯನು ಶಿಕ್ಷಣ ನೀಡುತ್ತಾನೆ. ಶಮ್. ಈ ಮಾತೆಲ್ಲ ಯಥಾರ್ಥವೇ. ಆ ಮಾತನ್ನು ಇಷ್ಟೇ ಸರಳಾರ್ಥದಲ್ಲಿ ಸಮರ್ಥಿಸುವಂತೆಯೇ ಜಯಕುಮಾರನ ತಾಯಿಯನ್ನು ಅವಳ ಹಿರಿಸೊಸೆ ವರದಕ್ಷಿಣೆ ಕೇಸಲ್ಲಿ ಸಿಕ್ಕಿಸಿ, ಆಕೆ ಜೇಲು ಸೇರುವ ಚಿತ್ರವಿದೆ. ಸ್ವತಃ ಜಯಕುಮಾರನನ್ನೇ ಅವನ ಎರಡನೆಯ 'ಸ್ತ್ರೀವಾದಿ ಹೆಂಡತಿ' ಕೌಟುಂಬಿಕ ದೌರ್ಜನ್ಯದ ಕಂಪ್ಲೇಂಟಿನಲ್ಲಿ ಸಿಕ್ಕಿಸುತ್ತಾಳೆ. ಇವನು ಹೆಂಗಸರ ತಂಟೆ ಬಿಡಲಾರದ ಗಂಡಸು. ಲೈಂಗಿಕವಾಗಿ ತನ್ನನ್ನು ತಿರಸ್ಕರಿಸಿದ ಪತ್ನಿಯಿಂದ ಕುಗ್ಗಿಹೋಗಿ ತನ್ನ ಪೌರುಷ ಪರೀಕ್ಷೆ ಮಾಡಿಕೊಳ್ಳಲೆಂದು ದೆಹಲಿಯ ಹೋಟೆಲೊಂದರಲ್ಲಿ ಪದೇಪದೇ ಕಾಲ್‌ಗರ್ಲ್‌ಗಳ ಜೊತೆಗೂಡಿ, ಕೊನೆಗೊಮ್ಮೆ ಹೋಟೆಲ್ ರೈಡ್ ಆದಾಗ ವೇಶ್ಯಾಗಾರಿಕೆಯ ಕೇಸಲ್ಲಿ ಸಿಕ್ಕಿಬಿದ್ದು ಪಡುವ ಪಾಡು ನಾಯಿಗೂ ಬೇಡ. ಅಂದರೆ

ಒಂದಾದಮೇಲೆ ಒಂದರಂತೆ 'ಅಪರಾಧ'ಗಳನ್ನು ಮಾಡಿಯೇ ಇವನು ತನ್ನ ಲೌಕಿಕ ಹಾಗೂ ಕಾನೂನಿನ ಜ್ಞಾನವನ್ನು ಬೆಳೆಸಿಕೊಳ್ಳುವಷ್ಟು ಮುಗ್ಧ. ಆ ಮುಗ್ಧತೆಯಿಂದಲೇ ಇರಬೇಕು, ತನ್ನ ಕೈಕೆಳಗೆ ಪಿ.ಎ. ಆಗಿರುವ 'ಮಂಗಳೆ' ತನ್ನ ಕಾಮೋಪಶಮನಕ್ಕೆ ತಕ್ಕ ವಸ್ತು ಎಂದು ಸಂಪರ್ಕ ಬೆಳೆಸಿದಾಗ ಆಗಲಿ, ಒಂದು ತಿಂಗಳು ಆಕೆಯನ್ನು ಕೂಡುತ್ತಿದ್ದಾಗ ಆಗಲಿ ಅವಳೊಬ್ಬ ವ್ಯಕ್ತಿ ಎಂದು ಅವಳ ಭಾವನೆ, ವಿಚಾರ, ವ್ಯಕ್ತಿತ್ವಗಳೇನೆಂದು ಅರ್ಥಮಾಡಿಕೊಳ್ಳಲು ಯತ್ನಿಸುವ ಅವಶ್ಯಕತೆ ಅವನಿಗಿಲ್ಲ. ಕಾದಂಬರಿಯಲ್ಲಿ ಹಲವಾರು ಸಂದರ್ಭಗಳಲ್ಲಿ ಮರುಕಳಿಸುವ ಒಕ್ಕಣೆ ಹೆಣ್ಣನ್ನು ಹೇಗೆ essential ರೂಪದ ಲೈಂಗಿಕ ನೆಲೆಯಲ್ಲಿ ಮಾತ್ರ ಈ ಮುಗ್ಧ ಭಾವಿಸುತ್ತಾನೆ ಎಂಬುದರ ಸೂಚನೆ ಕೊಡಬಲ್ಲದು :

''... ನನಗೆ ಇವಳ ಜೊತೆ ಹೆಚ್ಚು ಸಂಪರ್ಕವಿರಲಿಲ್ಲ, ನಾನೂ ಕೇಳಿರಲಿಲ್ಲ. ವಿಧವೆ ಎಂದು ತಿಳಿದಿದೆ. ಬರಿ ಹಣೆ, ಬರಿ ಕಿವಿ, ಎಡಗೈಗೆ ಗಡಿಯಾರ, ಬಳೆ ಇಲ್ಲ, ಸಲ್ವಾರ್ ಕಮೀಜ಼್, ಅಪರೂಪಕ್ಕೆ ಸೀರೆ. ವೈಧವ್ಯ ಅಥವಾ ಸೂತಕದ ಕಳೆ. ನಗು ಇಲ್ಲವೇ ಇಲ್ಲ. ಆದರೆ ಹುಟ್ಟಿನಿಂದ ಲಕ್ಷಣವಾದುದು ಮುಖ ಮೈಕಟ್ಟುಗಳು...'' (ಪುಟ ೨೨) ನಗು ಏಕಿಲ್ಲ ಆಕೆಗೆ ಎಂಬುದಲ್ಲ ಮುಖ್ಯ, ಅವಳ ಮೈಕಟ್ಟು.

ಇಂಥ ಬರಿದಾದ ಬೋಳುತನದ ಹೊರಲಕ್ಷಣ ಇಂಥ ಮಹಿಳೆಯರಿಗೆ ಮನಸ್ಸಾಗಲೀ ಭಾವವಾಗಲೀ ಇರಲಾರದು ಎಂಬಂತೆ ಅವರ ನಿರ್ಮಾನವೀಕೃತ ಚಿತ್ರಣಕ್ಕಾಗಿಯೂ ಬಳಕೆ ಆಗುತ್ತದೆ ಜಯಕುಮಾರ (ಜೋಕುಮಾರ ?)ನ ಮನಸ್ಸಿನಲ್ಲಿ.

''... ಸುಮಾರು ಐವತ್ತು ವರ್ಷ ವಯಸ್ಸು. ನನ್ನ ತಲೆಗೂದಲಿಗಿಂತ ತುಂಡಾಗಿ ಕ್ರಾಪ್‌ಕಟ್ ಮಾಡಿಸಿಕೊಂಡಿದ್ದ ಬಿಳಿಗೂದಲಿನ ಬರಿ ಹಣೆ, ಬರಿ ಮೊಣಕೈಗಳ ಖಾದಿಯಂತೆ ಕಾಣುವ ಬೂದು ಬಣ್ಣದ ಸೀರೆಯುಟ್ಟು...'' ಇದು ಮಹಿಳಾ ಚಳವಳಿಗಾರಳೊಬ್ಬಳ ವರ್ಣನೆ. ಪುಟ (೨೬)

''... ಸ್ವಲ್ಪ ಬಿಳಿಪು ಎನ್ನಬಹುದಾದ ಮುಖ ಬಣ್ಣ, ಕಿವಿಗೆ ಓಲೆಯೂ ಇಲ್ಲ, ಮೂಗಿಗೆ ಮೂಗುಬೊಟ್ಟಂತೂ ಇಲ್ಲವೇ ಇಲ್ಲ. ವಿಧವೆಯೋ ಅಥವಾ ಸೂತಕವೋ ಎಂಬಂತಹ ಕಳೆ.'' (ಪುಟ ೨೬ - ಮಹಿಳಾ ವಕೀಲೆಯ ಚಿತ್ರ ಇದು)

ಮಹಿಳಾ ಪೊಲೀಸು ಠಾಣೆಯಲ್ಲೂ ದಫೇದಾರ್ ಆದಾಕೆಗೂ, ಇನ್ಸ್‌ಪೆಕ್ಟರ್ ಆಗಿರುವಾಕೆಗೂ ಇವನು ಗ್ರಹಿಸುವ ಲಕ್ಷಣ ಹೀಗಿದೆ :

''... ಗಂಡು ಮುಖ ನನ್ನ ಕೂದಲಿಗಿಂತ ತುಂಡಾದ ಕಪ್ಪು ಬಣ್ಣ ಹಾಕಿದ ಕ್ರಾಪ್‌ಕಟ್. ಖಾಲಿ ಹಣೆ, ಬೋಳು ಕಿವಿ, ಖಾಕಿ ಪ್ಯಾಂಟು ಬಿಗಿಯಾಗಿ ಹಿಸುಕಿ ಚಪ್ಪಟೆ ಮಾಡಿದಂತೆ ಎದೆಯನ್ನು ಸುತ್ತುವರೆದ ಖಾಕಿ ಕೋಟು, ಉರಿಯುವ ದರ್ಪದ ಕಣ್ಣುಗಳು...''
(ಇದು ಮಹಿಳಾ ದಫೇದಾರಳ ಚಿತ್ರ)

... ಮಹಿಳಾ ಇನ್ಸ್‌ಪೆಕ್ಟರ್ ನನ್ನಷ್ಟೇ ಎತ್ತರ ಐದು ಒಂಭತ್ತು ಬೂಟಿನ ಎತ್ತರವೂ ಸೇರಿ ಇರಬೇಕು. ಧಡೂತಿ ಮೈಕಟ್ಟಿನಿಂದ ... ಬಿಗಿಯಾದ ಖಾಕಿ ಕೋಟಿನ ಒಳಗೆ ಚಪ್ಪಟೆಗೊಂಡ ಎದೆಯಾದರೂ ಹೆಂಗಸಿನ ಒಳ ಆಕಾರವನ್ನು ಬಿಚ್ಚಿಡದ ಸುತ್ತಳತೆ. ಹೆಣ್ಣಿಗೆ ಪ್ರಕೃತಿದತ್ತವಾದ ದಪ್ಪ ಅಂಡುಗಳು ನನ್ನ ಆ ಮನಃಸ್ಥಿತಿಯಲ್ಲೂ ಕಣ್ಣಿಗೆ ತಗುಲಿ...''
(ಪುಟ ೧೦-೧೧)

ಈ ಬಗೆಯ ಮೂಲಭೂತವಾಗಿ ಹೆಣ್ಣಿನ ದೇಹವನ್ನಷ್ಟೇ ಎಲ್ಲಿ ಕಂಡರೂ ಮನದಲ್ಲಿ ನೆನೆಯುವ ಮನಸ್ಸಿನ ವ್ಯಾಧಿಗೆ ಮಹಿಳೆಯರ ವಿದ್ಯೆ, ವಿದ್ವತ್ತು, ಪ್ರತಿಭೆ, ಅವರ ವೃತ್ತಿ, ಸಾಮಾಜಿಕ ಸ್ಥಾನಮಾನ ಎಲ್ಲವೂ ಗೌಣ. ಆದ್ದರಿಂದ ಇಡೀ ಕಾದಂಬರಿಯನ್ನು ಜಯಕುಮಾರನಂಥವನ ವಿಕ್ಷಿಪ್ತಮನದ ಒಳ ಸತ್ಯವನ್ನು ಹೇಳುವ ಕಡೆಗೆ ವಾಲಿಸಿಬಿಟ್ಟರೆ ಪ್ರತ್ಯಕ್ಷವಾಗುವುದು ಯಥಾರ್ಥ ಪುರುಷಪ್ರಧಾನ ನಂಬಿಕೆ, ಚಿಂತನೆಗಳೇ ಹೊರತು ಮಹಿಳೆಯರ ನಿಜವಾದ ಘನತೆಯನ್ನು ಗುರುತಿಸಿ ಪೂಜಿಸಬೇಕೆಂಬ ಸನಾತನ ನಂಬಿಕೆಯಂತೂ ಅಲ್ಲ.

ಜಯಕುಮಾರನಂಥ ಪುರುಷರೇ ಸಮಾಜದಲ್ಲಿ ಬಹಳಷ್ಟು ಸಂಖ್ಯೆಯಲ್ಲಿ ಇರುವವರು. ಇವನ ಮಾತು, ಮತಿ, ವರ್ತನೆಗಳು ಯಾವುದೂ ಮೌಲಿಕವಾದ ಜೀವನಾದರ್ಶವಿರುವ ವ್ಯಕ್ತಿ ಎಂಬಂತೆ ಇಲ್ಲ. ಆದರೆ ಕಾದಂಬರಿಯ ಮುಖ್ಯ ಭಾಗವನ್ನು ಇವನ ಆತ್ಮಕಥನಕ್ಕೇ ಮೀಸಲಿಟ್ಟಿರುವುದರಿಂದ ಲೇಖಕರು ಅಲ್ಲಲ್ಲಿ ಒಂದೊಂದು ಸಲ ಈ ಧೋರಣೆಗಳನ್ನು ಪ್ರಶ್ನಿಸುವಂತಹ ಮಾತೊಂದನ್ನು ತಂದರೂ ಇವನ ಸನಾತನಿ ಭಾವ ಪ್ರವಾಹದಲ್ಲಿ ಆ ಮಾತಿನ ಪರಿಣಾಮ ಏನೂ ಉಳಿಯುವಂತಿಲ್ಲ.

ಈ ಮುಖ್ಯ ಕತೆಗೆ ಜೊತೆಗೂಡುವ ಇನ್ನೊಂದು ಕುಟುಂಬಚಿತ್ರವನ್ನು ನೋಡಬಹುದು. ಮಂಗಳೆಯಲ್ಲಿ ಸ್ತ್ರೀವಾದಿ ವಿಚಾರಗಳನ್ನು ಬೋಧಿಸಿ ಬೆಳೆಸಿದ ಪ್ರೊಫೆಸರ್ ಇಳಾ ಆಕ್ಸ್‌ಫರ್ಡ್‌ನಲ್ಲಿ ಕಲಿತಾಕೆ, ಪಶ್ಚಿಮದ ವಿಚಾರಗಳಲ್ಲಿ ಶ್ರದ್ಧೆಯಿಟ್ಟವಳು, ಸ್ವದೇಶಿ ಧರ್ಮ ಕುಟುಂಬ ಲಕ್ಷಣಗಳ ಬಗ್ಗೆ ತಿರಸ್ಕಾರ. ತನ್ನ ಪ್ರೊಫೆಸರ್ ಹುದ್ದೆ ಬಿಟ್ಟು ಗಂಡನೊಂದಿಗೆ ಹೋಗಲು ಸಿದ್ಧವಿಲ್ಲದೆ ಒಬ್ಬಳೇ ಉಳಿದಾಗಿನ ಇವಳ ಐಷಾರಾಮ, ಸಂಪತ್ತು ಸ್ವಾತಂತ್ರ್ಯದ ಕಲ್ಪನೆಗಳು ಕ್ರಮವಾಗಿ ಅರ್ಥ ಕಳೆದುಕೊಳ್ಳುತ್ತಾ ಹೋಗುವುದನ್ನೂ, ಸ್ತ್ರೀಸ್ವಾತಂತ್ರ್ಯ ಎಂದರೆ ಮುಕ್ತ ಲೈಂಗಿಕ ಸಂಬಂಧ ಹೊಂದಿರುವುದೆಂದೇ ಪ್ರಚಾರಮಾಡುವ ವ್ಯಕ್ತಿ ಈಕೆ ಎಂಬಂತೆಯೂ, ಗಂಡನಿಂದ ದೂರವಾಗಿ ರಾಜಕಾರಣಿಯೊಬ್ಬನ ವಶಳಾಗಿ, ಕೊನೆಗೆ ಅವನು ತನ್ನ ಮೊದಲ ಪತ್ನಿಯನ್ನು ವಿಚ್ಛೇದಿಸಿ ತನ್ನನ್ನು ವಿವಾಹವಾಗುವಂತೆ ಒತ್ತಾಯಿಸುವ ಮಟ್ಟಕ್ಕೂ ಹೋಗುವಂತಹ ಅತ್ಯಂತ ಹತಾಶ ವ್ಯಕ್ತಿಯೆಂದು ಚಿತ್ರಿಸುವ ಕಾದಂಬರಿ ಆಕೆಯ ಪತಿಯಾದ ವಿನಯಚಂದ್ರನನ್ನು ತುಂಬ ಸಂಯಮಿ, ಪತ್ನಿಯ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅಡ್ಡಿ ಬರದವನು, ತನ್ನ ಮಗಳ ತಂದೆಯಾಗಿ ಪಾಲಕನ ಜವಾಬ್ದಾರಿಯನ್ನು ಮರೆಯದ, ನಿಜವಾದ ಕೌಟುಂಬಿಕ ಪ್ರೀತಿ, ವಿಶ್ವಾಸಗಳನ್ನು ತನ್ನ ಬಂಧುಗಳಿಂದ ಕಂಡುಕೊಳ್ಳುವನೆಂಬಂತೆಯೂ ಚಿತ್ರಿಸುತ್ತದೆ.

ಈ ಪಾತ್ರಗಳ ಚಿತ್ರಣದಲ್ಲಿ ನೈಜತೆಯ ಪ್ರಶ್ನೆಯನ್ನು ನಾನು ಎತ್ತುವುದಿಲ್ಲ. ಆದರೆ ಇವೆಲ್ಲವೂ ಏಕೀಕೃತ ದೃಷ್ಟಿಕೋನಕ್ಕಾಗಿ ತಿರುಚಲ್ಪಟ್ಟು ಕೀಲುಬೊಂಬೆಗಳಾಗಿ ಏಕಿವೆ, ಯಾಕೆ ಈ ವಿರುದ್ಧ ಧ್ರುವದ ಪಾತ್ರಗಳೂ ಮಾನವೀಯ ಜೀವಂತಿಕೆಯಿಂದ ಕೂಡಿ ಅರ್ಥವತ್ತಾಗುವಂತೆ ಮಾಡಲು ಲೇಖಕರಿಗೆ ಸಾಧ್ಯವಾಗಿಲ್ಲ, ಎಂಬುದು ನನ್ನ ಪ್ರಶ್ನೆ. ಅಂದರೆ ಇದನ್ನು ಸಾಹಿತ್ಯಕ ಕಲಾಕೃತಿ ಆಗಿಸುವ ಬದಲು ಚರ್ಚಾವೇದಿಕೆಯಾಗಿ ಮಾಡಿಕೊಳ್ಳುವ ಆತುರ ಈಗಲೇ ಏಕೆ ಹುಟ್ಟಿರಬಹುದು ಎಂದು ಯೋಚಿಸಿದಾಗ ತೀರ ಇತ್ತೀಚೆಗೆ ಮಹಿಳೆಯರು, ಯುವತಿಯರು ಪಬ್‌ಗಳಲ್ಲಿ ಪಾಲ್ಗೊಂಡು ನೈತಿಕವಾಗಿ ಹಾಳಾಗಬಾರದೆಂದು ಕೆಲವರು ಅವರನ್ನು ಬಡಿದು ಬುದ್ಧಿ ಕಲಿಸಲು ದೊಣ್ಣೆ ಎತ್ತಿದ ವಿದ್ಯಮಾನ ಇನ್ನೂ ಹಸಿಯಾಗಿಯೆ ಇದೆ.

ಇಂಥ ಪರಿಸರದಲ್ಲಿ ಕಬ್ಬಿಣ ಕಾದಿದ್ದಾಗಲೆ ಬಡಿದು ಬಗ್ಗಿಸಬೇಕು ಎಂಬ ಹಾಗೆ ಭೈರಪ್ಪನವರ ಈ 'ಕವಲು' ಲೇಖನಿಯ ಮೂಲಕ ಅದೇ ಉದ್ದೇಶ ಈಡೇರಿಸಲು ಹೊರಟಿದೆಯೆ, ಎಂಬ ಅನುಮಾನಗಳು ನನಗೆ ಉಂಟಾದವು. ಈ ಕಾದಂಬರಿಯ ವಸ್ತು, ವಿನ್ಯಾಸ, ಪಾತ್ರಚಿತ್ರಣ ಮುಂತಾದ ಸಾಹಿತ್ಯಕ ಚರ್ಚೆಗೆ ನಾನು ಇಲ್ಲಿ ಹೊರಡುವುದಿಲ್ಲ. ಆದರೆ ಈ ಕೃತಿಯ ಓದಿನಿಂದ ನನ್ನೊಳಗೆ ಹುಟ್ಟಿದ ವಿಚಾರಗಳನ್ನು ಮಾತ್ರ ಹೇಳಲು ಯತ್ನಿಸಿದ್ದೇನಷ್ಟೆ.

ಈ ಮೊದಲು ಪ್ರಸ್ತಾಪಿಸಿದ ಸ್ತ್ರೀವಾದಿ, ಬುದ್ಧಿಜೀವಿತನದ ಮಾದರಿಗಳ ನಿರ್ಮಾನವೀಕೃತ ವೈಲಕ್ಷಣ್ಯಗಳಿಗೆ ಪರ್ಯಾಯವಾಗಿ ಜಯಕುಮಾರನ ಮೊದಲ ಪತ್ನಿ ವೈಜಯಂತಿಯ ಚಿತ್ರವನ್ನು ಕಾದಂಬರಿ ನೀಡುತ್ತದೆ. ಈಕೆ ಗಂಡನಂತೆಯೇ ವಿದ್ಯಾವಂತೆ. ಸ್ವಂತ ಕೈಗಾರಿಕೋದ್ಯಮವನ್ನು ಕಟ್ಟಿ ಬೆಳೆಸಲು ಅವನಿಗೆ ಭುಜಕೊಟ್ಟು ದುಡಿದವಳು. ಕಾರ್ಮಿಕರ ಜೊತೆ ಸ್ನೇಹದಿಂದ ಕೆಲಸಮಾಡಿ ಅವರಿಗೆ ಕೆಲಸ ತೋರಿಸಿಕೊಡಲು ಪ್ಯಾಂಟ್ ಷರ್ಟು ತೊಟ್ಟರೂ, ಮನೆಯಲ್ಲಿ ಸೀರೆ, ಕುಂಕುಮ, ಬಳೆ, ಸರ, ಹೂವು ಒಡವೆಗಳಿಂದ ಅಲಂಕರಿಸಿಕೊಂಡು ಪತಿಗೆ ವಶವರ್ತಿನಿಯಾಗಿ ಕುಟುಂಬದೊಳಗೆ ಪ್ರೀತಿವಾತ್ಸಲ್ಯ ಹರಿಸಬಲ್ಲವಳು. ಒಂದೆಡೆ ಆಧುನಿಕ ಗಂಡು ಬಯಸುವ

(೪೩ನೇ ಪುಟಕ್ಕೆ)

ಅವಮಾನ
ರೈತ ಆತ್ಮಹತ್ಯೆ

ಅಷ್ಟೊಂದು ಸ್ವಾಭಿಮಾನ ಒಳ್ಳೇದಲ್ಲ ಕಣ್ರೀ! ನಮ್ಮನ್ನು ನೋಡಿ... ಎಲ್ಲ ಬಿಟ್ಟು ಬದುಕಬೇಕ್ರೀ...?!

## ಹೊಸ ಓದು




### ಪರಿಸರ ಅಧ್ಯಯನ

ಡಾ|| ಎಚ್. ಆರ್. ಕೃಷ್ಣಮೂರ್ತಿ
**ಪುಟ :** ೧೨೦
**ಬೆಲೆ : ರೂ.** ೬೦
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ನಮ್ಮ ಪರಿಸರ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಲು ಈ ಪುಸ್ತಕ ನೆರವಾಗುತ್ತದೆ. ಈ ಭೂಮಿ ಮತ್ತು ಇಲ್ಲಿ ವಾಸಿಸುವ ಅಸಂಖ್ಯ ಪ್ರಾಣಿ ಪ್ರಭೇದಗಳು, ಸುತ್ತಮುತ್ತಲಿನ ಸಸ್ಯಸಂಕುಲ ಹಾಗೂ ಇವೆಲ್ಲವನ್ನೂ ಪೋಷಿಸುವ ಗಾಳಿ, ನೀರು ಎಲ್ಲವೂ ಎಲ್ಲರಿಗೂ ಅಗತ್ಯವಾಗಿದ್ದು ಪರಸ್ಪರ ಅವಲಂಬನೆ ಇಲ್ಲಿ ಕಂಡುಬರುತ್ತದೆ. ಪರಿಸರವನ್ನು ಹೆಚ್ಚು ಹೆಚ್ಚು ಅರ್ಥೈಸಿಕೊಳ್ಳುತ್ತ ಹೋದಂತೆ ಜೀವಿಸಮೂಹದಲ್ಲಿ ಒಬ್ಬನಾದ ಮಾನವನಿಗೆ ಪ್ರಕೃತಿ ಯಾವುದೇ ಪರಮಾಧಿಕಾರ ವನ್ನೂ ನೀಡಿಲ್ಲ ಎಂಬುದು ಮುಖ್ಯ. ಆತ ಸ್ವಲ್ಪ ಬುದ್ಧಿವಂತ ನಾಗಿರುವ ಮಾತ್ರಕ್ಕೆ ಇಡೀ ಜೀವಿಗೋಳದ ವ್ಯವಸ್ಥೆಯನ್ನೇ ಬದಲಿಸುವ ಮತ್ತು ಪುಟ್ಟ ಬಾಂಬ್ ಮೂಲಕ ಭೂಮಿಯನ್ನೇ ನಾಶಪಡಿಸುವಷ್ಟು ಮುಂದುವರಿದಿದ್ದಾನೆ. ನವನಾಗರಿಕತೆ - ಸುಖಸೌಕರ್ಯದ ಬೆನ್ನುಹತ್ತಿ ಪರಿಸರಕ್ಕೆ ಸರಿಪಡಿಸಲಾಗದಷ್ಟು ಹಾನಿಯನ್ನು ಮಾಡಿದ್ದಾನೆ. ಅಂತರ್ಜಲ ಕುಸಿತ, ನದಿಗಳ ಮಾಲಿನ್ಯ, ನೈಸರ್ಗಿಕ ಅರಣ್ಯನಾಶ, ಓಝೋನ್ ಪದರದಲ್ಲಿ ರಂಧ್ರ ಇಂತಹ ಗಂಭೀರ ಅನಾಹುತಗಳಲ್ಲಿ ಮಾನವನ ನೇರ ಕೈವಾಡವಿದೆ. ಲಕ್ಷಾಂತರ ವರ್ಷಗಳಿಂದ ಭೂತಳದಲ್ಲಿ ಜೀವರಸದಂತೆ ಹುದುಗಿದ್ದ ತೈಲ ನಿಕ್ಷೇಪಗಳನ್ನು ಮತ್ತು ಖನಿಜ ಸಂಪತ್ತನ್ನು ಲೂಟಿಗೈದು ತನ್ಮೂಲಕ ಭೂಮಿಯನ್ನು ನಿಸ್ಸಾರಗೊಳಿಸಿದ್ದಂತೂ ಅಕ್ಷಮ್ಯ. ಹೀಗೆ ಇನ್ನೂ ಅನೇಕ ಜೀವಜಾಲದ ಕೊಂಡಿಗೆ ಸಂಬಂಧಿಸಿದ ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

### ಕಡಲ ತಡಿಯ ಮನೆ (ಕತೆಗಳು)

ಡಾ|| ಸಬಿಹಾ ಭೂಮೀಗೌಡ
**ಪುಟ : xvi + ೮೪ = ೧೦೦** **ಬೆಲೆ : ರೂ.** ೫೦
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ ಹಾಸ್ಟೆಲ್, ಗದಗ - ೫೮೨ ೧೦೧

ಜಾತಿ ಮತಗಳ ಹಂಗಿಲ್ಲದೆ ಮನುಷ್ಯರು ಪರಸ್ಪರ ನಂಬಿಕೆ-ಸಹನೆಗಳಿಂದ ಕೂಡಿ ಬಾಳಬೇಕೆನ್ನುವುದು ಈ ಕಥೆಗಳನ್ನು ಬರೆದ ಸಬಿಹಾ ಅವರ ಬಯಕೆ. ಅವರದ್ದು ತೋರಿಕೆಯ ಹೇಳಿಕೆಯಲ್ಲ, ಅದನ್ನವರು ತಮ್ಮ ಬದುಕಿನಲ್ಲಿ ಬಾಳಿ ತೋರಿಸಿ ತಮ್ಮ ಕಥೆಗಳಲ್ಲೂ ಪ್ರತಿಪಾದಿಸಿದ್ದಾರೆ. ಮನೆಮನೆಯ ಮಾತುಗಳು, ಸಣ್ಣಪುಟ್ಟ ಸನ್ನಿವೇಶಗಳು, ಸಹಜವೆಂಬಂತೆ ನಡೆಯುವ ಘಟನೆಗಳು ಬದುಕಿನಲ್ಲಿ ಮಹತ್ತರ ಪಾತ್ರವಹಿಸುವ ಸಾಧ್ಯತೆ ಇರುತ್ತದೆ. ಪರಸ್ಪರ ದ್ವೇಷಾಸೂಯೆಗಳನ್ನೇ ಹೆಚ್ಚಾಗಿ ಕಲಿಯುತ್ತಿರುವ ಇಂದಿನ ದಿನಗಳಲ್ಲಿ ಕಥೆಗಳಲ್ಲಿನ ಕೆಲವು ಆತ್ಮೀಯ ಸಂಭಾಷಣೆಗಳು ಹೀಗಿದ್ದರೆ ಚೆನ್ನ ಎಂಬ ಅನಿಸಿಕೆಯನ್ನು ನಮ್ಮಲ್ಲಿ ಮೂಡಿಸುತ್ತವೆ. ತಂತಮ್ಮ ಆಚಾರ ವಿಚಾರಗಳನ್ನು ಉಳಿಸಿಕೊಂಡು ಇತರರನ್ನು ಗೌರವಿಸಿದಾಗ ಎಂದಿಗೂ ಕೋಮು ವೈಷಮ್ಯ ಬೆಳೆಯಲು ಸಾಧ್ಯವಿಲ್ಲ. ಮನಸ್ಸುಗಳನ್ನು ಒಗ್ಗೂಡಿಸುವ ಸಂದೇಶಗಳುಳ್ಳ ಕಥೆಗಳು ಯಾವ ಕಾಲಕ್ಕೂ ಪ್ರಸ್ತುತವೆನಿಸುತ್ತವೆ, ಇಂದಿನ ಕಾಲಕ್ಕಂತೂ ಅವಶ್ಯ ಬೇಕೆನಿಸುತ್ತವೆ. ಕಥೆಗಾರ್ತಿ ಡಾ|| ಸಬಿಹಾ ಸ್ತ್ರೀವಾದ, ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ಹೆಚ್ಚಿನ ಒಲವುಳ್ಳವರು.




### ಸಂಚಲ

ಡಾ|| ಎನ್. ಗಾಯತ್ರಿ
**ಪುಟ :** ೨೩೨ **ಬೆಲೆ : ರೂ.** ೧೨೦
**ಮಾ-ಲೆ ಪ್ರಕಾಶನ,** ೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಅಡ್ಡರಸ್ತೆ, ಕಾವೇರಿನಗರ, ಬನಶಂಕರಿ ೩ನೇ ಘಟ್ಟ, ಬೆಂಗಳೂರು - ೫೬೦ ೦೮೫

ಇತ್ತೀಚಿನವರೆಗೂ ಪ್ರಕಟವಾಗುತ್ತಿದ್ದ 'ಅಚಲ' ಎಂಬ ಮಹಿಳಾಪರ ಸಹಾನುಭೂತಿ ಹೊಂದಿದ್ದ ಮಾಸಪತ್ರಿಕೆಯ ಆಯ್ದ ಸಂಪಾದಕೀಯಗಳಿವು. ಮಹಿಳೆಗೆ ಅಚಲ ಆತ್ಮವಿಶ್ವಾಸ ಮತ್ತು ಅಪಾರ ಧೈರ್ಯವನ್ನು ತುಂಬುತ್ತಿದ್ದ ಪತ್ರಿಕೆಯಿದು. ಮಹಿಳೆಯ ಮೇಲಿನ ದೌರ್ಜನ್ಯವನ್ನು ಅದು ಖಂಡಿಸಿ ಬಯಲಿಗೆಳೆಯುತ್ತಿತ್ತು. ರಾಜ್ಯ, ರಾಷ್ಟ್ರ ಕೆಲವೊಮ್ಮೆ ವಿದೇಶಗಳಲ್ಲಿನ ಘಟನೆಗಳೂ ಪತ್ರಿಕೆಯ ಸಂಪಾದಕೀಯ ಮತ್ತು ಲೇಖನಗಳಿಗೆ ವಸ್ತುವೈವಿಧ್ಯಗಳಾಗಿದ್ದವು. ಮಹಿಳೆ ವಿದ್ಯಾವಂತಳಾಗಿ, ಉದ್ಯೋಗ ಗಳಿಸಿ ಆರ್ಥಿಕ ಸುಭದ್ರತೆಯೊಂದಿಗೆ ಸ್ವಾವಲಂಬಿಯಾಗಬೇಕೆಂಬುದು ಪತ್ರಿಕೆಯ ಹಂಬಲವಾಗಿತ್ತು. ಮಹಿಳಾ ಶೋಷಣೆಯ ವಿವಿಧ ಮುಖಗಳನ್ನು ಪರಿಚಯಿಸಿ, ಪ್ರತಿಭಟಿಸಿ ಸ್ತ್ರೀಪರ ದನಿಯಾಗಿತ್ತು. ಶಾಬಾನೊ ಪ್ರಕರಣದಿಂದ ಹಿಡಿದು ಸುವರ್ಣ ಕರ್ನಾಟಕದ ಇತ್ತೀಚಿನ ಮಹಿಳೆಯವರೆಗೂ ಅಂದಂದಿನ ಘಟನೆಗಳಿಗೆ ಸಂಬಂಧಿಸಿದಂತೆ ಮಾಡಿದ ಪ್ರಸ್ತಾಪಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಹೋರಾಟದಿಂದ ಕೆಲಮಟ್ಟಿಗೆ ಯಶಸ್ಸು ಸಿಕ್ಕಿದರೂ ಇನ್ನೂ ಆಕೆಯ ಶೋಷಣೆ ನಿಂತಿಲ್ಲ. ಅದು ಹೊಸ ವಿದ್ಯಮಾನಗಳಿಗೆ ತಕ್ಕಂತೆ ತನ್ನ ವೇಷ ಬದಲಾಯಿಸಿಕೊಂಡು ಆಕೆಯನ್ನು ಹಿಂಬಾಲಿಸುತ್ತಿದೆ. ಹೊಸ ಸಂಚಲನ ಉಂಟುಮಾಡುವ ಸಾಮರ್ಥ್ಯ ಇರುವ ಇಲ್ಲಿನ ಸಂಪಾದಕೀಯಗಳು ಮರು ಓದಿಗಾಗಿ ಇಂದಿಗೂ ಪ್ರಸ್ತುತವಾಗಿವೆ. ಪತ್ರಿಕೆಯ ಸಂಪಾದಕಿಯಾಗಿದ್ದ ಡಾ|| ಎನ್. ಗಾಯತ್ರಿ ಇವನ್ನು ಬರೆದಿದ್ದು ಅವರೇ ಸಂಗ್ರಹಿಸಿ ಕೊಟ್ಟಿದ್ದಾರೆ.

### ತೊಗಲು ಗೊಂಬೆ (ಕನ್ನಡ ಕಾದಂಬರಿ)




ಕಾತ್ಯಾಯಿನಿ ಕುಂಜಿಬೆಟ್ಟು
**ಪುಟ :** ೮ + ೧೮೨ = ೧೯೦ + iv **ಬೆಲೆ : ರೂ.** ೮೦
**ಕೆ. ಎಸ್. ಕೃಷ್ಣಮೂರ್ತಿ, ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೇ ಮಹಡಿ, ಎಂ.ಆರ್.ಎನ್. ಬಿಲ್ಡಿಂಗ್ ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

ಭಾರತೀಯ ಪರಂಪರೆ, ಬದುಕಿನ ರೀತಿನೀತಿಗಳನ್ನು ಅಮೆರಿಕಾದ್ದ ನಾಗರಿಕ ಸಂಸ್ಕೃತಿಯೊಂದಿಗೆ ಹೋಲಿಸಿ ಬರೆದ ಕಾದಂಬರಿ. ನಮ್ಮ ದೇಶದ ಇತ್ತೀಚಿನ ಒಂದೆರಡು ಪೀಳಿಗೆಯ ಜನರಿಗೆ ಅಮೆರಿಕಾದ ನಂಟು. ಅವರಿಗೂ ನಮ್ಮ ಉತ್ಸಾಹಿ ಯುವಕರು ಬೇಕಾಗಿದ್ದರು. ನಮಗೂ ಡಾಲರ್ ಪ್ರೇಮ – ಸರಿ, ನಮಗೆ ನಮ್ಮ ದೇಶ ಕೇವಲವಾಗಿ ಕಂಡಿತು. ನಮ್ಮ ವ್ಯವಸ್ಥೆಗಳಲ್ಲಿ ನಮಗೇ ಕುಂದು ಕಾಣತೊಡಗಿ ರೆಕ್ಕೆಯಿದ್ದವರು ಅಲ್ಲಿಗೆ ಹಾರಿದರು. ಮೊದಲು ವ್ಯಾಸಂಗ, ಮತ್ತೆ ಉದ್ಯೋಗ. ಸ್ವರ್ಗದಲ್ಲಿ ತೇಲಿದರು. ಬಿಡಿಸಿಕೊಂಡು ಬರಲಾಗದ ಮೋಹ. ಇಂದಿಗೂ ನಡೆಯುತ್ತಿರುವ ಇಂಥ ವಾಸ್ತವ ಘಟನೆಗಳು ಕಾದಂಬರಿಗೆ ಪ್ರೇರಕ ವಸ್ತು. ಭಾರತಕ್ಕೂ ಅಮೆರಿಕಾಗೂ ಹಗಲು-ರಾತ್ರಿಯ ಅಂತರ. ನಮ್ಮ ಕೌಟುಂಬಿಕ ಪರಿಸರದಲ್ಲಿ ಗಂಡಿನದು ಯಜಮಾನಿಕೆ-ಗತ್ತು-ದರ್ಪ. ಹೆಣ್ಣು ಇಲ್ಲಿ ನಿಕೃಷ್ಟ. ಅದೇ ಅಲ್ಲಿ ಯಾವುದಕ್ಕೂ ಬೇಲಿ ಇಲ್ಲ. ಹೆಣ್ಣಿಗೆ ಪರಮ ಸ್ವಾತಂತ್ರ್ಯ, ಕಾನೂನಿನ ಬಿಗಿ ರಕ್ಷಣೆ. ಎರಡು ದೇಶಗಳಲ್ಲೂ ಅತಿ ಎನಿಸುವಷ್ಟು ಆಚರಣೆ. ಇಂಥ ವಾಸ್ತವ ಸಂಗತಿಯನ್ನು ತುಳುನಾಡಿನ ಗ್ರಾಮೀಣ ಪ್ರದೇಶದ ಕುಟುಂಬದ ಕಥೆಯ ಮೂಲಕ ಹಂತಹಂತವಾಗಿ ನಿರೂಪಿಸಲಾಗಿದೆ. ಇಲ್ಲಿನ ಗ್ರಾಮೀಣ ಪರಿಸರ, ಜನಜೀವನದ ವೈವಿಧ್ಯಗಳು ವಿಸ್ತಾರವಾಗಿ ಹೇಳಲ್ಪಟ್ಟಿವೆ. ಇದೇ ಲೇಖಕಿಯಿಂದ ಈ ಕಾದಂಬರಿ 'ಕಬರ್ಗತ್ತಲೆ' ಹೆಸರಿನಿಂದ ತುಳುಭಾಷೆಯಲ್ಲೂ ಬಂದಿದೆ.

## ಕೋಮುವಾದಿ ಕಾರ್ಯಾಚರಣೆ ಮತ್ತು ದಲಿತ ಪ್ರತಿಸ್ಪಂದನೆ



*ಸಂ. ಆನಂದ್ ತೇಲ್ತುಂಬ್ಡೆ; ಅನುವಾದ ಸಂಯೋಜನೆ : ಪ್ರೊ|| ಬಿ. ಗಂಗಾಧರಮೂರ್ತಿ, ಶಿವಸುಂದರ*

**ಪುಟ : xvii + ೧೭೫**

ಬೆಲೆ : ರೂ. ೧೨೦

**ಲಡಾಯಿ ಪ್ರಕಾಶನ**, ನಂ. ೨೧, ಪ್ರಸಾದ ಹಾಸ್ಟೆಲ್, ಗದಗ - ೫೮೨ ೧೦೧

ಭಾರತದ ದಲಿತರೆಂದರೆ ಅವರಿಗೆ ಸಹಜ ಸಾವು ಇಲ್ಲವೇನೋ ಎನ್ನುವಷ್ಟರ ಮಟ್ಟಿಗೆ ಅವರನ್ನು ಹತ್ಯೆಗೈಯಲಾಗುತ್ತಿದೆ. ಕೋಮುವಾದಿ ಗಲಭೆಗಳಲ್ಲಿ, ವ್ಯವಸ್ಥಿತ ಕಾರ್ಯಾಚರಣೆಯಿಂದ ದಲಿತರನ್ನೂ ಮುಸ್ಲಿಮರನ್ನೂ ಬರ್ಬರವಾಗಿ ಕೊಲೆ ಮಾಡಲಾಗುತ್ತಿದೆ. ದೇಶಾದ್ಯಂತ ವ್ಯಾಪಿಸುತ್ತಿರುವ ಕೋಮುಗಲಭೆಗಳನ್ನು ಹತ್ತಿಕ್ಕಲು ಸರಕಾರ ವಿಫಲವಾಗಿರುವುದು ಗುಜರಾತ್ ಗೋಧ್ರಾ ಪ್ರಕರಣಗಳಿಂದ ದೃಢಪಟ್ಟಿದೆ. ದಲಿತ ಚಿಂತನೆಯ ನೆಲೆಗಟ್ಟಿನಲ್ಲಿ, ಕೋಮುಸೌಹಾರ್ದದ ವಾತಾವರಣ ನಿರ್ಮಿಸಲು ಬಯಸುತ್ತ ಅದಕ್ಕಾಗಿ ಚಳುವಳಿಗಳನ್ನು ಹಮ್ಮಿಕೊಂಡಿರುವ ಸಮಾನ ಮನಸ್ಕರು ಸೇರಿ ಬರೆದಿರುವ ಲೇಖನಗಳ ಕನ್ನಡಾನುವಾದವಿದು. ಮೂಲಕೃತಿಯ ಸಂಪಾದಕರು 'ಖೈರ್ಲಾಂಜಿ' ಪುಸ್ತಕದ ಮೂಲಕ ಕನ್ನಡಿಗರಿಗೆ ಪರಿಚಿತರಾದ ಶ್ರೀ ಆನಂದ್ ತೇಲ್ತುಂಬ್ಡೆ ಅವರು. ಭಾರತದ ರಾಜಕಾರಣದಲ್ಲಿ ಚುನಾವಣಾ ಸಮಯದಲ್ಲಿ ಮಾತ್ರ ಮುಸ್ಲಿಂ ಹಾಗೂ ದಲಿತ ಸಮುದಾಯಗಳನ್ನು ಓಲೈಸಿ ತನ್ಮೂಲಕ ಅಧಿಕಾರಕ್ಕೇರಿ 'ಕೈಯಲ್ಲಿ ಶರಣಾರ್ಥಿ; ಕಂಕುಳಲ್ಲಿ ದೊಣ್ಣೆ' ಎಂಬಂತೆ ದ್ವಿಮುಖ ನೀತಿ ಅನುಸರಿಸುವ ಸರಕಾರಗಳಿಂದ ದಲಿತೋದ್ಧಾರ ಎಂದಿಗೂ ಸಾಧ್ಯವಿಲ್ಲ. ಇಂತಹ ವಿಚಾರಗಳನ್ನು ಈ ಪುಸ್ತಕದಲ್ಲಿ ಆಘಾತಕಾರಿ ಸನ್ನಿವೇಶಗಳನ್ನು ಉಲ್ಲೇಖಿಸುತ್ತ ಪ್ರಸ್ತುತಪಡಿಸಲಾಗಿದೆ.




## ಮನೆಮನೆಗೆ ಬೇಲಿ (ಕವನ ಸಂಕಲನ)

ಬಿ. ಎ. ಸನದಿ

**ಪುಟ : ೬೪**

ಬೆಲೆ : ರೂ. ೫೦

**ಬಿ. ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ)**, ೧೮೬೬, 'ನೀಲು', ಮಾಳಮಾರುತಿ ಗುಡಿಯ ಹತ್ತಿರ, ಆಂಜನೇಯನಗರ, ಬೆಳಗಾವಿ - ೫೯೦ ೦೧೬

ಬಿ. ಎ. ಸನದಿ ಹೆಸರಾಂತ ಕವಿಗಳು. ನಾಡಿನ ಕಾವ್ಯಪ್ರೇಮಿಗಳು ಅವರ ಕವಿತೆಗಳನ್ನು ಮೆಚ್ಚಿದ್ದಾರೆ. ಗಹನವಾದ ವಿಚಾರಗಳುಳ್ಳ, ತಕ್ಷಣಕ್ಕೆ ಮನಸ್ಸಿಗೆಟುಕದ ಅವರ ಕಾವ್ಯವನ್ನು ಮತ್ತೆ ಮತ್ತೆ ಮಥಿಸಿ ಓದಬೇಕಾಗುತ್ತದೆ. ಕವಿ ಯಾವುದೋ ಗಂಭೀರ ವಿಷಯವನ್ನು ತನ್ನಳತೆಗೆ ತಕ್ಕಂತೆ, ಭಾವನೆಗೆ ರೂಪ ಕೊಡುವುದರಲ್ಲಿ ನಿರತನಾಗಿರುತ್ತಾನೆ. ಅದೇ ಜಾಡನ್ನನುಸರಿಸಿ ನಾವು ಕಾವ್ಯವನ್ನು ಆಸ್ವಾದಿಸಬೇಕಾಗುತ್ತದೆ. ಕಾವ್ಯವನ್ನು ಅರ್ಥೈಸುವುದೂ ಒಂದು ಕಲೆ. ಕಾವ್ಯವನ್ನು ಕಟ್ಟುವುದೂ ಒಂದು ಕಲೆಯೇ. ಇಲ್ಲಿ ಸಂಗ್ರಹವಾಗಿರುವ ಕವನಗಳು ಸುಮಾರು ಮೂವತ್ತು ವರ್ಷಗಳಷ್ಟು ಹಿಂದೆ ರಚಿಸಲ್ಪಟ್ಟವು. ಇದೀಗ ದ್ವಿತೀಯ ಆವೃತ್ತಿ ಹೊರಬಂದಿದೆ. ಅಂದಿನ ಸಾಮಾಜಿಕ ಸನ್ನಿವೇಶಗಳು, ಕವನಗಳಿಗೆ ಪ್ರೇರಣೆಯಾಗುವ ಅಂಶಗಳು ಬೇರೆ ಬಗೆಯವು. ಅಂದಿನ ೫೦ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಮನೆಮನೆಗೆ ಬೇಲಿ' ಎಂಬ ಕವನವನ್ನು ಕವಿಗೋಷ್ಠಿಯಲ್ಲಿ ಓದಲಾಗಿತ್ತು. ಅದಕ್ಕೆ ಬಂದ ಮೆಚ್ಚುಗೆ ಅವಿಸ್ಮರಣೀಯ, ಅಭಿಮಾನದ ಸಂಗತಿಯೆಂದು ಕವಿ ಸನದಿಯವರು ನೆನಪಿಸಿಕೊಂಡಿದ್ದಾರೆ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

---

**'ಕವಲು' ಕಾದಂಬರಿ ಮತ್ತು ಕುಟುಂಬ ವಿನಾಶದ ಸಂಕಥನ**

(೪೧ನೇ ಪುಟದಿಂದ)

ಉದ್ಯೋಗದ ಸಂಗಾತಿತನದ ದಕ್ಷತೆ. ಮತ್ತೊಂದು ಕಡೆ ಅದೇ ಪುರುಷನ ಸಾಂಪ್ರದಾಯಿಕ ನಿರೀಕ್ಷೆಗಳನ್ನೂ ಈಡೇರಿಸಬಲ್ಲ ಅಸಾಧಾರಣ Super Woman ಈ ವೈಜಯಂತಿ. ಹಿಂದೂಶಾಸ್ತ್ರಕಾರರು ಹೇಳುವ ಕಾರ್ಯೇಷು ದಾಸಿ... ಇತ್ಯಾದಿ ಆರು ಗುಣಗಳೂ ಈಕೆಯಲ್ಲಿ ಮೈಗೂಡಿವೆ. ಆದರೆ ಈಗ ಅಪಘಾತದಲ್ಲಿ ತೀರಿಹೋಗಿ ಕೇವಲ ಸ್ಮೃತಿಚಿತ್ರವಷ್ಟೇ ಆಗಿರುವುದು ಸಾಂಕೇತಿಕವೇ ಇದ್ದೀತು.

ಇಡೀ ಕಾದಂಬರಿಯಲ್ಲಿ ಈಕೆಯನ್ನು ಬಿಟ್ಟರೆ ಕುಟುಂಬವನ್ನು ಕಟ್ಟಿ ಹಿಡಿದಿಡಬಲ್ಲ ಇನ್ನೊಬ್ಬಳೇ ಮಹಿಳೆ ಎಂದರೆ ಇವಳ ತದ್ರೂಪದಂತಿರುವ, ಆದರೆ ಬುದ್ಧಿಮಾಂದ್ಯವುಳ್ಳ ಇವಳ ಮಗಳು ವತ್ಸಲೆ.

ಈ ಕಾದಂಬರಿಯಲ್ಲಿ ನಂಜುಂಡೇಗೌಡನ ಬಾಯಲ್ಲಿ ತಮಾಷೆಯಿಂದಲೋ ಎಂಬಂತೆ ಬರುವ ವಾಕ್ಯ ಹೀಗಿದೆ :

''ಓದಿದ ಗಂಡಸರೆಲ್ಲ ಎಂಗಸರಂಗಾಗ್ತಾರೆ, ಓದಿದ ಎಂಗಸರೆಲ್ಲಾ ಗಂಡಸರಂಗಾಗ್ತಾರೆ. ಗಂಡಸರು ಗಂಡಸರಾಗಿ ಎಂಗಸರು ಎಂಗಸರಾಗಿ ಇರಬೇಕಾದರೆ ಯಾರೂ ಓದಕೂಡದು.'' (ಪುಟ ೧೪)

ಈ essentialist ದೃಷ್ಟಿಗಿಂತಲೂ ಯೂಂಗ್ ಹೇಳುವ ಹಾಗೆ ಹೆಣ್ಣಿನೊಳಗಿನ ಗಂಡುಗುಣ, ಗಂಡಿನೊಳಗಿನ ಹೆಣ್ಣುಗುಣಗಳನ್ನು ಅವರು ಪ್ರಜ್ಞಾಪೂರ್ವಕವಾಗಿ ತಮ್ಮ ವ್ಯಕ್ತಿತ್ವದೊಳಗೆ ಗುರುತಿಸಿಕೊಂಡಾಗಲೇ ಪೂರ್ಣ ಮಾನವವ್ಯಕ್ತಿಗಳಾಗಲು ಸಾಧ್ಯ ಎಂಬುದು ಸ್ತ್ರೀವಾದದ್ದು ಮಾತ್ರವಲ್ಲ, ಮನುಷ್ಯತ್ವವಾದಿಗಳೆಲ್ಲರ ಕಳಕಳಿಯೂ ಹೌದು. ಇಂತಹ ಮಾನವೀಯ ಕಳಕಳಿಯೊಂದನ್ನು ಸೂಚಿಸುವ, ಕ್ರಿಯಾಶೀಲವೂ ಆದ ಇತ್ಯಾತ್ಮಕ ಮಾದರಿಗಳ ಕೊರತೆ ಎದ್ದುತೋರುತ್ತದೆ.

ಹಾಗೆಯೇ ಎರಡೋ ಮೂರೋ ಕಾನೂನು ದುರ್ಬಳಕೆಯಾಗುವ ಮಾದರಿಗಳನ್ನು ಮಾತ್ರ ಚಿತ್ರಿಸಿದಾಗ ವರದಕ್ಷಿಣೆಗಾಗಿ ಸುಡಲ್ಪಡುವ ಅಥವಾ ಬಡಿತ ತಿನ್ನುವ, ಅತ್ಯಾಚಾರಕ್ಕೆ ಬಲಿಯಾಗುವ ಬಹು ಸಂಖ್ಯೆಯ ಮಹಿಳೆಯರಿಗೆ ಇಂಥ ಕಾನೂನುಗಳು ಬೇಕಾಗುತ್ತವೆ ಎಂಬುದನ್ನು ನಿರ್ಲಕ್ಷಿಸಿದಂತಾಗುತ್ತದೆ. ವಿಚ್ಛೇದನೆ, ಲೈಂಗಿಕ ಸ್ವೇಚ್ಛೆ, ಆಸ್ತಿದಾಹ ಕ್ರೌರ್ಯಗಳು ಯುಗಯುಗಗಳಿಂದಲೂ ಇರುವ ಸಾಮಾಜಿಕ ವಿದ್ಯಮಾನಗಳೇ. ಅವುಗಳನ್ನು ನಡೆಸುವುದರಲ್ಲಿ ಸ್ತ್ರೀಯರು, ಸ್ತ್ರೀವಾದಿಗಳೇ ಆಗಿರಬೇಕಿಲ್ಲ. ಸ್ತ್ರೀವಾದಿಗಳೆಲ್ಲರೂ ಹೀಗೆಯೇ ಇರುತ್ತಾರೆಂಬ ಧ್ವನಿಚಿತ್ರಣದಿಂದ ನಿಜವಾಗಿ ಪುರೋಗಾಮಿಯಾಗಿರುವ, ಮಹಿಳೆಯರ ಮತ್ತು ಪುರುಷರಿಬ್ಬರಿಗೂ ಅವಶ್ಯಕವೇ ಆಗಿರುವ ಸಾಮಾಜಿಕ ಬದಲಾವಣೆಗಳ ಔಚಿತ್ಯ ಮೌಲ್ಯಗಳೆಲ್ಲ ಅರ್ಥಹೀನ ಎಂಬಂತಾಗುತ್ತದೆ.

ಯಾವುದೇ ಸಾಮಾಜಿಕ ಪರಿವರ್ತನೆಗಾಗಿ ಹಂಬಲಿಸಿ ಹುಟ್ಟುವ ಸಿದ್ಧಾಂತವಾಗಲಿ ಚಳವಳಿಯಾಗಲಿ ಹುಟ್ಟಿದಾಗಲೇ ಪರಿಪೂರ್ಣವಾಗಿಬಿಟ್ಟಿರುವುದಿಲ್ಲ. ಅದು ಜನರ ಅನುಭವ, ಕಾರ್ಯಕರ್ತೃತ್ವ, ಹೋರಾಟಗಳ ಮೂಲಕವೇ ಬೆಳೆದು ತಿದ್ದಿಕೊಳ್ಳುತ್ತಾ, ತನ್ನ ನಂಬಿಕೆಗಳನ್ನು ನಿಜ ಜೀವನದಲ್ಲಿ ಸಾಧಿಸಲೂ ಯತ್ನಿಸುತ್ತಿರುತ್ತದೆ. ಇಂಥ ಪ್ರಕ್ರಿಯೆಯಲ್ಲಿ ನಿಷ್ಠೆಯಿಂದ ತೊಡಗುವವರೂ ಮನುಷ್ಯ ಸಹಜ ದೌರ್ಬಲ್ಯಗಳಿಂದ ಮುಕ್ತರಾಗಿಯೇ ಸೃಷ್ಟಿಯಾಗಿರುವುದಿಲ್ಲ. ಯಾವುದೇ ಚಳವಳಿಯ ಅರ್ಥವಂತಿಕೆಯನ್ನು ತತ್ಕಾಲದ ಘಟನೆಗಳ ಇತಿ-ಮಿತಿಗಳ ಮೂಲಕ ಅಳೆಯುವುದು ಕ್ಷುದ್ರ ದೃಷ್ಟಿ ಮಾತ್ರ. ಎದುರಾಗುವ ಅಡ್ಡಿ-ಆತಂಕಗಳಿಗೂ ತನ್ನೊಳಗಿನ ದುರ್ಬಲತೆಗಳಿಗೂ ಮುಖಾಮುಖಿಯಾಗಿ, ಗಟ್ಟಿಗೊಳ್ಳುತ್ತಾ ಸಾಗುವ ನಿರಂತರ ಪ್ರಕ್ರಿಯೆ ಅದು. ಆದ್ದರಿಂದ ವಿಚ್ಛೇದಿತ ಕುಟುಂಬಗಳ ಕೆಲವು ಮಾದರಿಗಳನ್ನು ಮುಂದಿಟ್ಟು ಅದೂ ಈ ಸಮಾಜ ಸಂಕೀರ್ಣದ ಚಿಕ್ಕ ಸೀಳಿಗೆ ಉಂಟಾದ ಸಂಕಟಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಇದೇ ಇಡೀ ಭಾರತೀಯ ಸಮಾಜದ ಸತ್ಯವೆಂದು ಹೇಳುವುದು ಭೋಳೆತನವಷ್ಟೇ ಹೊರತು ಬೇರೆ ಅಲ್ಲ.

**ಡಾ|| ಬಿ. ಎನ್. ಸುಮಿತ್ರಾಬಾಯಿ**
ನಂ. ೩೫, ೦ನೇ ಮುಖ್ಯರಸ್ತೆ, ಪ್ರಮೋದ ಲೇಔಟ್
ನಾಯಂಡಹಳ್ಳಿ ಅಂಚೆ
ಬೆಂಗಳೂರು - ೫೬೦ ೦೩೯

# ನವ್ಯೋತ್ತರ ಸಂಕಥನಗಳಾಗಿ ಚಿತ್ತಾಲರ ಕೃತಿಗಳು



ಡಾ॥ ಎ. ರಘುರಾಂ

ಚಿತ್ತಾಲರು ಮೂಲತಃ ಸಾಹಿತ್ಯದ ವಿದ್ಯಾರ್ಥಿಯಲ್ಲ, ಕೆಮಿಕಲ್ ಇಂಜಿನಿಯರಿಂಗ್ ಪದವೀಧರರು. ಸಾಹಿತ್ಯದಿಂದ ಯಾರಿಗೆ ಏನಾಗಿದೆ, ಏನಾಗಬಲ್ಲುದು, ಎಂಬ ಪ್ರಶ್ನೆಗಿಂತ ಸಾಹಿತ್ಯದಿಂದ ನನಗೇನಾಗಿದೆ ಎಂಬ ಪ್ರಶ್ನೆ ಹೆಚ್ಚು ಸಾರ್ಥಕವಾದದ್ದು; ಹಾಗೆ ಕೇಳಿಕೊಂಡರೆ ಏನಾದರೂ ಉತ್ತರ ಕಂಡುಕೊಳ್ಳಲು ಸಾಧ್ಯ ಎಂದೂ ನಂಬಿದವರು. ೧೯೪೯ರಿಂದ ಕಥಾ ಸಾಹಿತ್ಯದಲ್ಲಿ ತೊಡಗಿದ ಚಿತ್ತಾಲರು ಕ್ರಮಿಸಿದ ಹಾದಿ ದೊಡ್ಡದು. ಭೌತ ವಿಜ್ಞಾನದ ಕ್ವಾಂಟಮ್ ಥಿಯರಿ, ರಿಲೇಟಿವಿಟಿಯನ್ನು ಸಾಹಿತ್ಯಲೋಕದಲ್ಲಿ 'ಪರಿಣಾಮ ವಿವೇಚನೆ'ಯಾಗಿ ಬಳಸುವ ಅವರ ಪ್ರಯತ್ನ ಯಾರನ್ನೂ ಮೆಚ್ಚಿಸುವಂಥದ್ದು.

ಚಿತ್ತಾಲರ ಮೊದಲ ಕಾದಂಬರಿ ನವ್ಯದ ದಟ್ಟತೆಯಲ್ಲಿ ಬಂದ ಕೃತಿ. 'ವ್ಯಕ್ತಿ'ಯ ಅಸ್ತಿತ್ವವನ್ನು ಭಿನ್ನ ನೆಲೆಗಳಿಂದ ಅನಾವರಣಗೊಳಿಸುವ ಶಕ್ತಿ ನವ್ಯ ಬರಹಗಾರರಲ್ಲೇ ವಿಶೇಷವಾದುದು. 'ಮೂರು ದಾರಿಗಳು' ಕೃತಿಯ ನಿರ್ಮಲೆ, ವಾಸುದೇವ, ರಾಮನಾಥ ಇವರಲ್ಲಿ ಸುಖ, ವಿಷಾದ, ದ್ವಂದ್ವ ಇತ್ಯಾದಿ ಗುಣಗಳನ್ನು ಅಸ್ತಿತ್ವವಾದದ ನೆಲೆಯಲ್ಲಿ ಹುಡುಕಲೆತ್ನಿಸಿದ್ದಾರೆ, ಮನುಷ್ಯರ ನಡುವೆ ಹುಟ್ಟುವ ಆತಂಕಗಳಿಗೆ ಕಲಾತ್ಮಕತೆಯ ಮೆರುಗು ನೀಡಿದ್ದಾರೆ. ಚಿತ್ತಾಲರೂ ಕೂಡ ದೇಸಾಯಿಯವರಂತೆ ನವ್ಯೋತ್ತರ ಸಂಕಥನಕ್ಕೆ ತೆರೆದುಕೊಂಡದ್ದು ತಡವಾಗಿಯೇ ಆದರೂ ಸಂಪೂರ್ಣ ವ್ಯಕ್ತಿಪ್ರಜ್ಞೆಯನ್ನು ಮೀರುವ ಪ್ರಯತ್ನವನ್ನೇನೂ ಮಾಡಿದಂತೆ ಕಾಣುತ್ತಿಲ್ಲ. ಮನುಷ್ಯಲೋಕದಲ್ಲಿ ಕಾಣುವ ಪ್ರೀತಿ, ಭೀತಿ, ಕಳವಳ, ತಲ್ಲಣ, ಕೋಪ, ಅಸಹನೆ, ನೋವು ಇತ್ಯಾದಿ ಪ್ರವೃತ್ತಿಗಳನ್ನು ಮನೋವಿಜ್ಞಾನಿಯ ರೀತಿ ಕೃತಿಯಲ್ಲಿ ದುಡಿಸಿಕೊಂಡ ಲೇಖಕರು ಕನ್ನಡದಲ್ಲಿ ವಿರಳ. ಚಿತ್ತಾಲರು ಕಲಾವಂತ ಬರಹಗಾರನಾಗಿ, ಮನೋವಿಜ್ಞಾನಿಯ ರೀತಿಯಲ್ಲಿ ಮನುಷ್ಯನ ಪ್ರವೃತ್ತಿಗಳಿಗೆ ದನಿ ಕೊಡಬಲ್ಲ ಶಕ್ತಿಯುಳ್ಳ ಬರಹಗಾರರಾಗಿದ್ದಾರೆ. ದೈಹಿಕ ಹಾಗೂ ಮಾನಸಿಕ ಕ್ರಿಯೆಗಳಿಗೆ ಇರುವ ಸಂಬಂಧವನ್ನು ಕಲಾತ್ಮಕತೆಯ ಮೂಲಕ ಶೋಧಿಸುವ ಗುಣ ಚಿತ್ತಾಲರ ಬರವಣಿಗೆಯ ಪ್ರಮುಖ ಲಕ್ಷಣವೂ ಆಗಿದೆ.

ಚಿತ್ತಾಲರ 'ಮೂರು ದಾರಿಗಳು', 'ಶಿಕಾರಿ', 'ಛೇದ' ಕಾದಂಬರಿಗಳು ವ್ಯಕ್ತಿನಿಷ್ಠ ನೆಲೆಯಲ್ಲಿ ಅರಳಿದ ಕೃತಿಗಳೇ ಆಗಿವೆ. 'ಛೇದ'ದ ನಂತರದ ಬರವಣಿಗೆ ವ್ಯಕ್ತಿ ಕೇಂದ್ರಿತ ನೆಲೆಯಿಂದ ಸಮಾಜಕೇಂದ್ರಿತವಾಗಿದೆ. ನವ್ಯದ ಲಕ್ಷಣಗಳನ್ನು ಒಳಗೊಂಡು ರಚನೆಯಾದ ಕೃತಿಗಳು ನವ್ಯೋತ್ತರಕ್ಕೆ ಮುಖಾಮುಖಿಯಾದದ್ದು ಹೇಗೆ ಎಂಬ ಪ್ರಶ್ನೆಗೆ ಉತ್ತರ ಹುಡುಕುವುದು ಅಷ್ಟೇ ಜಟಿಲವಾದುದು. 'ಸಂದರ್ಶನ' (೧೯೮೭), 'ಆಬೋಲಿನ' (೧೯೬೦), 'ಆಟ' (೧೯೬೯) ಕಥಾ ಸಂಕಲನಗಳನ್ನು ಗಮನಿಸಿದರೆ ನವ್ಯದ ವ್ಯಕ್ತಿವಾದಿ ನಿಲುವುಗಳಿಗೆ ಚಿತ್ತಾಲರು ಹೇಗೆ ಬದ್ಧವಾಗಿದ್ದಾರೆ ಎಂಬುದು ತಿಳಿಯುತ್ತದೆ. ನಗರದಲ್ಲಿ ನಾಗರಿಕತೆಯ ವಿಷಮತೆಗಳು ಹೇಗಿರುತ್ತವೆ ಎಂಬುದನ್ನು 'ಶಿಕಾರಿ' ಕಾದಂಬರಿಯಲ್ಲಿ ಅದ್ಭುತವಾಗಿ ಚಿತ್ರಿಸಿದ್ದಾರೆ. ಆರಂಭದ ಕತೆಗಳು ಮಾಸ್ತಿಯವರ ಪರಂಪರೆಯಿಂದ ಪ್ರವೇಶ ಮಾಡಿದಂತೆ ಕಂಡರೂ ನಂತರದ ಸಂಕಲನದಲ್ಲಿ ಅನುಭವದ ಸ್ವರೂಪ ಕಲಾವಂತಿಕೆಯಲ್ಲಿ ಅರಳಿದೆ. ಕತೆಯ ಶಿಲ್ಪ, ಭಾಷೆ ಇತರೆ ಅಂಶಗಳಲ್ಲಿ ನವ್ಯತೆಯನ್ನು ರೂಢಿಸಿಕೊಂಡವರು ಅವರು. ೧೯೫೫ರಷ್ಟು ಹಿಂದೆಯೇ ಬಂದ 'ಅಪರಿಚಿತರು' ಕತೆಯು ನವ್ಯವಾದಿ ನಿಲುವುಗಳನ್ನು ಧ್ವನಿಸುತ್ತದೆ. ಸನ್ನಿವೇಶ ನಿರ್ಮಾಣ, ಭಾಷೆ ಸಾಂಕೇತಿಕತೆಯ ಸ್ಪರ್ಶವನ್ನು ಪಡೆಯಿತು. ಬಾಲ್ಯದಲ್ಲಿನ ಹನೇಹಳ್ಳಿ ಹಾಗೂ ಅದರೊಟ್ಟಿಗಿನ ಸಂಬಂಧಗಳು 'ಶಿಕಾರಿ'ಯ ವ್ಯಕ್ತಿವಾದಿ ನಿಲುವಿಗೆ ಬದ್ಧವಾದಂತೆ 'ಪುರುಷೋತ್ತಮ'ದ ಸಾಮಾಜಿಕ ಅಭಿವ್ಯಕ್ತಿಗೂ ಕಾರಣವಾಗಿವೆ. 'ಮೃತ್ಯು ಹಾಗೂ ನಿರಪರಾಧಿಯ ಯಾತನೆ' ಇವರ ಕಥಾ ಸಾಹಿತ್ಯದಲ್ಲಿ ಎಷ್ಟೊಂದು ಗಾಢವಾಗಿ ಆವರಿಸಿಕೊಂಡಿದೆ ಎಂಬುದಕ್ಕೆ ಸ್ಪಷ್ಟ ಉದಾಹರಣೆಯಾಗಿ 'ಶಿಕಾರಿ' ನಮ್ಮೆದುರಿಗಿದೆ.

ಚಿತ್ತಾಲರು ಮೂಲತಃ ಸಾಹಿತ್ಯದ ವಿದ್ಯಾರ್ಥಿಯಲ್ಲ, ಕೆಮಿಕಲ್ ಇಂಜಿನಿಯರಿಂಗ್ ಪದವೀಧರರು. ಸಾಹಿತ್ಯದಿಂದ ಯಾರಿಗೆ ಏನಾಗಿದೆ, ಏನಾಗಬಲ್ಲುದು, ಎಂಬ ಪ್ರಶ್ನೆಗಿಂತ ಸಾಹಿತ್ಯದಿಂದ ನನಗೇನಾಗಿದೆ ಎಂಬ ಪ್ರಶ್ನೆ ಹೆಚ್ಚು ಸಾರ್ಥಕವಾದದ್ದು; ಹಾಗೆ ಕೇಳಿಕೊಂಡರೆ ಏನಾದರೂ ಉತ್ತರ ಕಂಡುಕೊಳ್ಳಲು ಸಾಧ್ಯ ಎಂದೂ ನಂಬಿದವರು. 1949ರಿಂದ ಕಥಾ ಸಾಹಿತ್ಯದಲ್ಲಿ ತೊಡಗಿದ ಚಿತ್ತಾಲರು ಕ್ರಮಿಸಿದ ಹಾದಿ ದೊಡ್ಡದು. ಭೌತ ವಿಜ್ಞಾನದ ಕ್ವಾಂಟಮ್ ಥಿಯರಿ, ರಿಲೇಟಿವಿಟಿಯನ್ನು ಸಾಹಿತ್ಯಲೋಕದಲ್ಲಿ 'ಪರಿಣಾಮ ವಿವೇಚನೆ'ಯಾಗಿ ಬಳಸುವ ಅವರ ಪ್ರಯತ್ನ ಯಾರನ್ನೂ ಮೆಚ್ಚಿಸುವಂಥದ್ದು.

ನವ್ಯದ ಶೈಲಿಯನ್ನು ಘನಿಷ್ಠವಾಗಿ ಪಡೆದೂ ಕೂಡ ನವ್ಯೋತ್ತರದ ಆಶಯಗಳನ್ನು ಹೊತ್ತ ಬೀಜರೂಪಿ ಕೃತಿಯಾಗಿದೆ. ೭೦ರ ದಶಕದಲ್ಲಿ ಕಾಣಿಸಿದ ಸಾಮಾಜಿಕ ಎಚ್ಚರಗಳು ಕೃತಿಯ ಹಿಂದಿವೆ ಎಂಬುದನ್ನೂ ಗಮನಿಸಬೇಕಾಗಿದೆ. ಪ್ರಾಣಿವರ್ಗದಲ್ಲಿ ಕೂಡ ಕಾಣಸಿಗದಂಥ ಕ್ರೌರ್ಯದ ಕಡೆಗೆ ಮನುಷ್ಯ ಮುಖ ಮಾಡುತ್ತಿದ್ದಾನೆಯೇ ಎನ್ನುವಂಥ ಭಯ ಹಾಗೂ ಈ ಕ್ರೌರ್ಯಕ್ಕೆ ಇಂದಿನ ಯಂತ್ರಯುಗದಲ್ಲಿ, ಔದ್ಯೋಗೀಕರಣದ ಮೇಲೆ ನಿಂತ ನಾಗರಿಕತೆಯಲ್ಲಿ ಮನುಷ್ಯ ತನ್ನ ಸೃಜನಶೀಲತೆಯನ್ನು ಕಳಕೊಳ್ಳುತ್ತಿರುವದು ಕಾರಣವಾಗಿರಬಹುದೇ ಎಂಬ ಗುಮಾನಿ ಹುಟ್ಟಿಕೊಳ್ಳುತ್ತದೆ. ''ಈ ಭಯ-ಗುಮಾನಿಗಳ ಬಗ್ಗೆ ಈಗ ಬರೆಯಬೇಕೆಂದು ತೋರಿದ್ದಕ್ಕೆ ಕಾರಣವಾದದ್ದರಲ್ಲಿ ಜಗತ್ತಿನಲ್ಲಿ ನಡೆಯುತ್ತಿದ್ದ ರಾಜಕೀಯ ವಿದ್ಯಮಾನಗಳ ಹಿಂದಿನ ಹಿಂಸೆಯ ಜತೆಗೆ ನಮ್ಮ ದೇಶದಲ್ಲೇ ಬುದ್ಧ, ಮಹಾವೀರ, ಮಹಾತ್ಮಾ ಗಾಂಧೀ ಇವರಿಗೆ ಜನ್ಮವಿತ್ತ ನೆಲದಲ್ಲೇ – ಇತ್ತೀಚೆಗೆ ನಡೆದ ಕೆಲವು ಹಿಂಸೆಯ ಪ್ರಕರಣಗಳು ಸೇರಿಕೊಂಡಿವೆ ಎನ್ನುವುದನ್ನು ಗಮನಿಸಬೇಕು. ಬಿಹಾರದ ಬೆಲ್ಚಿಯಲ್ಲಿ ಹರಿಜನರ ಮೇಲೆ ನಡೆದ ಅತ್ಯಾಚಾರ, ಉತ್ತರ ಪ್ರದೇಶದ ನಾರಾಯಣಪುರದ ಪೊಲೀಸರು ಹೆಂಗಸರ ಮೇಲೆ ಎಸಗಿದ ಬಲಾತ್ಕಾರ, ಅಷ್ಟೇಕೆ, ಮೊನ್ನೆ ಮೊನ್ನೆ ದೇಶದ ರಾಜಧಾನಿಯಲ್ಲೇ ಅಂಧರ ಮೆರವಣಿಗೆಯ ಮೇಲೆ ಪೊಲೀಸರು ನಡೆಸಿದ ಕೊನ್ರಾಡ್ ಲಾಠಿಹಲ್ಲೆಯಲ್ಲಿ ವ್ಯಕ್ತವಾದ ಮದಾಂಧತೆ – ಇವೆಲ್ಲ ಒಂದಕ್ಕೊಂದು ಸಂಬಂಧವಿಲ್ಲದ ಸಂಗತಿಗಳಲ್ಲ ಎನ್ನುವ ತಿಳುವಳಿಕೆ ಕೂಡ ನನ್ನ ವಿಷಯದ ಆಯ್ಕೆಯನ್ನು ನಿರ್ಧರಿಸಿದೆ'' ಎಂಬ ಮಾತುಗಳ ಹಿನ್ನೆಲೆಯಲ್ಲಿ 'ಶಿಕಾರಿ' ಕೃತಿಯನ್ನು ಪರಿಶೀಲಿಸಬೇಕಾಗುತ್ತದೆ. ಪ್ರಖ್ಯಾತ ನಿಸರ್ಗ ವಿಜ್ಞಾನಿ ಲಾರೆಂಝ್ ಬರೆದ ಪುಟ್ಟ ಕೃತಿ 'ಆನ್ ಅಗ್ರೆಷನ್' ಮಾನವನ ಆಕ್ರಮಣಶೀಲತೆ ಹಾಗೂ ಕ್ರೌರ್ಯಗಳನ್ನು ವಿವರಿಸುತ್ತದೆ. ಪ್ರಾಣಿವರ್ಗದಲ್ಲಿ ಆಕ್ರಮಣಶೀಲತೆ ಅವುಗಳ ಜೈವಿಕ ಉಳಿವಿಗೆ ಅವಶ್ಯಕ ಶಕ್ತಿಯಾಗಿದ್ದರೆ ಮನುಷ್ಯನಲ್ಲಿ ಇದೊಂದು ಅನಾರೋಗ್ಯಕಾರಿ ಬೆಳವಣಿಗೆಯಾಗಿ ವಿನಾಶಕ್ಕೆ ಕಾರಣವಾಗುತ್ತದೆ ಎಂಬ ಎಚ್ಚರವನ್ನು ಲಾರೆಂಝ್ ನೀಡುತ್ತಾನೆ. ಲಾರೆಂಝ್ ಹೇಳಿದ ವಿಚಾರಗಳೂ, ಫ್ರಾಯ್ಡ್ ಹಾಗು ಎರಿಕ್ ಫ್ರಾಮ್ ಇವರ ವಿಚಾರಗಳನ್ನೂ ಒಟ್ಟಿಗೇ ಇಟ್ಟು 'ಬೇಟೆ'ಯ ಪರಿಕ್ರಮದ ಪರಿಣಾಮವನ್ನು ತೀವ್ರ ಸ್ವರೂಪದಲ್ಲಿ 'ಶಿಕಾರಿ' ಕಾದಂಬರಿಯಲ್ಲಿ ಚಿತ್ತಾಲರು ಕಟ್ಟಿಕೊಟ್ಟಿದ್ದಾರೆ.

'ಶಿಕಾರಿ' ಕೃತಿಯ ನಾಯಕ ನಾಗಪ್ಪ. ಅವನ ಮೇಲೆ ಶ್ರೀನಿವಾಸ, ಫಿರೋಜ್, ಖಂಬಾಟಾ ಆಕ್ರಮಣ ಮಾಡುತ್ತಾರೆ. ಬರೀ ಇವರಷ್ಟೇ ಅಲ್ಲ, ಇವರ ದಾಳಕ್ಕೆ ಸಿಲುಕಿ ಮೇರಿ, ಥ್ರೀಟಿ, ಸೀತಾರಾಮ, ರಾಣಿ ಎಲ್ಲರೂ ಮೋಸ ಮಾಡುತ್ತಾರೆ. ಪ್ರತಿಭೆ, ಸ್ವಾತಂತ್ರ್ಯಗಳಿಗೆ ಬೆಲೆ ಕೊಡದ ವ್ಯವಸ್ಥೆಯೊಂದು ಜಾತಿ, ಅಧಿಕಾರ, ಹಣದ ಸಂದರ್ಭದಲ್ಲಿ ಇಡೀ ವ್ಯವಸ್ಥೆಯನ್ನು ಹೇಗೆ ಬಗ್ಗಡಗೊಳಿಸಿ ವಿನಾಶದೆಡೆಗೆ ತಳ್ಳುತ್ತವೆ ಎಂಬುದನ್ನು ಚಿತ್ತಾಲರು ಬಹು ಧ್ವನಿಪೂರ್ಣವಾಗಿ ಚಿತ್ರಿಸಿದ್ದಾರೆ. ತನಿಖೆಯ ನೆಪದಲ್ಲಿ ಫ್ಯಾಸಿಸ್ಟ್ ಶಕ್ತಿಗಳೆಲ್ಲವೂ ಹೇಗೆ ಒಂದಾಗುತ್ತವೆ; ಕೇವಲ ಒಂದಾಗುವುದಲ್ಲದೇ ಎದುರಾಳಿಗಳನ್ನು ಸೋಲಿಸುವವರೆಗೂ ಹೇಗೆ ಹೋರಾಡುತ್ತವೆ ಎಂಬುದನ್ನು ಅತ್ಯಂತ ಪರಿಣಾಮಕಾರಿಯಾಗಿ ಕಟ್ಟಿದ್ದಾರೆ. ಇದನ್ನು ಓದುವಾಗ ಬರೀ ಕಾದಂಬರಿಯನ್ನು ಓದುತ್ತಿದ್ದೇವೆ ಎನ್ನಿಸದೇ ವರ್ತಮಾನದ ಸನ್ನಿವೇಶವನ್ನು ಎದುರಿಸಿದ ಅನುಭವವಾಗುತ್ತದೆ. ಅಂತರಂಗ, ಬಹಿರಂಗದ ಸಂದರ್ಭದಲ್ಲಿ ವ್ಯಕ್ತಿ ಸ್ವರೂಪಗಳ ಒಳಪದರಗಳನ್ನು ಅಷ್ಟೇ ಘನೀಭೂತವಾಗಿ ಕಟ್ಟುವ ಜಾಣ್ಮೆ ಯಾರನ್ನೂ ಮೆಚ್ಚಿಸುತ್ತದೆ. ಇಷ್ಟೊಂದು ಘನೀಭೂತವಾಗಲು ಕಾರಣಗಳನ್ನು ಕೂಡ ಹುಡುಕಬೇಕಾಗಿದೆ. ಚಿತ್ತಾಲರೇ ಈ ಕೃತಿ ಹುಟ್ಟುವ ಸಂದರ್ಭದ ಕುರಿತು ಹೀಗೆ ಹೇಳಿದ್ದಾರೆ: '''ಶಿಕಾರಿ' ಬೀಜರೂಪದಲ್ಲಿ ಮನಸ್ಸಿನಲ್ಲಿ ನೆಟ್ಟದ್ದು 'ಏಲಿಯನೇಶನ್'ದ ಕತೆಯಾಗಿ – 'ಕತೆಯಾದಳು ಹುಡುಗಿ'ಗಿಂತ ಹೆಚ್ಚು ವಿಸ್ತೃತವಾದ ರೂಪದಲ್ಲಿ. ಔದ್ಯೋಗಿಕ ಕ್ಷೇತ್ರದಲ್ಲಿಯ ನನ್ನ ಹಲವು ವರ್ಷಗಳ ಅನುಭವಗಳಿಗೆ, ಬಹುಮುಖ್ಯವಾಗಿ ವೈಯಕ್ತಿಕ ಹಿತಾಸಕ್ತಿಗಳಿಗೆ ಕಟ್ಟುಬಿದ್ದು ಸುಳ್ಳಾದ ಸಂಬಂಧಗಳನ್ನಷ್ಟೇ ನಿರ್ಮಿಸಬಲ್ಲ ಕೆಲಸದ ಭ್ರಷ್ಟ ಸ್ವರೂಪಕ್ಕೆ ಮಾರ್ಕ್ಸ್‌ವಾದದ ಕೇಂದ್ರ ಪರಿಕಲ್ಪನೆಯಾದ 'ಏಲಿಯನೇಶನ್' ಬೆಳಕಿನಲ್ಲಿ ಹೊಳೆದ ಅರ್ಥ ಉತ್ಸಾಹದಾಯಕವಾದ ಆಹ್ವಾನವಾಗಿ ಕಂಡಿತು. ಬಂಡವಾಳಶಾಹೀ ವ್ಯವಸ್ಥೆಯ ಎಲ್ಲ ಲಕ್ಷಣಗಳನ್ನೂ




ಒಳಗೊಂಡ ಒಂದು ವ್ಯಾವಸಾಯಿಕ ಸಂಸ್ಥೆಯಲ್ಲಿ ಕೆಲಸ ಮಾಡುವಾಗ ಇದಿರಾದ ದುರ್ಧರ ಸನ್ನಿವೇಶವೊಂದರಲ್ಲಿ ಬಂದ 'ಅನುಭವ'ದೊಳಗಿಂದಲೇ ಕೃತಿಯನ್ನು ಪ್ರವೇಶಿಸಬಹುದೆಂದು ತೋರಿತು. ಹೀಗೆ ತೋರಿದ್ದು ಪ್ರತ್ಯಕ್ಷ ಕೃತಿಯಾಗಲು ಮಾತ್ರ ಏಳು ವರ್ಷಗಳ ದೀರ್ಘ ಕಾಲ ಕಾಯಬೇಕಾಯಿತು. ನನ್ನ ವ್ಯಾವಸಾಯಿಕ ಜೀವನದಲ್ಲಿಯಂತೆ ಸಾಹಿತ್ಯಿಕ ಜೀವಮಾನದಲ್ಲೂ ವಿಚಿತ್ರ ಸಂಧಿಕಾಲವಿದು; 'ವನವಾಸ', 'ಅಜ್ಞಾತವಾಸ' ಎರಡೂ ಒಂದೇ ಹೊತ್ತಿಗೆ ತೊಡಗಿರುವಂತೆ ತೋರಿದ ಆ ರೀತಿ ಅನುಭವಿಸಿದ ಕಾಲ; ಈ ಅವಧಿಯ ಯಾತನೆಯೇ – ನಾವು ನಮ್ಮೊಳಗಿನ 'ಮನುಷ್ಯ'ನನ್ನು ಹುಡುಕುವ ಕ್ರಿಯೆಯಾಗಿ ಸಾಹಿತ್ಯ ಕೃತಿಯಲ್ಲಿ ಹರಳುಗಟ್ಟುವ ಹೊತ್ತಿಗೆ ವನವಾಸ, ಅಜ್ಞಾತವಾಸ ಎರಡೂ ಮುಗಿಯುತ್ತಿರುವ ಲಕ್ಷಣಗಳು ಕಂಡು ಮನಸ್ಸಿಗೆ ನೆಮ್ಮದಿ ಬರತೊಡಗಿತು. ನಾವು 'ಅಸಮಗ್ರತೆ'ಯಿಂದ 'ಸಮಗ್ರತೆ'ಯ ಕಡೆಗೆ, ಅಪ್ರಬುದ್ಧತೆಯಿಂದ ಪ್ರಬುದ್ಧತೆಯ ಕಡೆಗೆ ಸಾಗುವ, ಸ್ವಲ್ಪದರಲ್ಲಿ ಮನುಷ್ಯರಾಗಿ 'ಮಾಗುವ' ಪ್ರಕ್ರಿಯೆಗೆ 'ಶಿಕಾರಿ' ರೂಪಕವಾಗಿದೆ. ಇದು ನೇರವಾಗಿ ಒಂದು ನಿರ್ದಿಷ್ಟ ಸಮಾಜದ ಒಳಗೇ ನಡೆಯುವ ಕ್ರಿಯೆಯಾದ್ದರಿಂದ ಅದಕ್ಕೆ ನೆರವಾಗುವ, ಇಲ್ಲ ಅಡ್ಡಬರುವ ಶಕ್ತಿಯಾಗಿ, ಅದರ ಅಂತಿಮ ರೂಪವನ್ನು ನಿಶ್ಚಯಿಸುವ ಕಾರಣವಾಗಿ ಈ ಸಮಾಜದ ಸ್ವರೂಪವು ನಮಗೆ ಗೊತ್ತಾಗುತ್ತದೆ'' ಎಂಬ ಮಾತುಗಳೂ ಕಾದಂಬರಿಯ ಅಧ್ಯಯನದ ಸಂದರ್ಭದಲ್ಲಿ ಮುಖ್ಯವಾಗಿವೆ.

'ಏಲಿಯನೇಶನ್' ಎನ್ನುವ ಪರಿಕಲ್ಪನೆಯ ಮೂಲಕವೇ ಕತೆ ಹುಟ್ಟಿದ್ದು ಎಂದು ಹೇಳುವ ಚಿತ್ತಾಲರು ಈ ಪರಿಕಲ್ಪನೆ ಮಾರ್ಕ್ಸ್‌ನದು ಎನ್ನುತ್ತಾರೆ. 'ಏಲಿಯನೇಶನ್'ನ ಪರಿಣಾಮವಾಗಿ ಮಾನವ ವ್ಯಕ್ತಿಗಳು ಕೇವಲ ತಮ್ಮ ಸ್ವಭಾವಕ್ಕೆ ಮಾತ್ರವಲ್ಲ, ಪರಸ್ಪರರಿಗೂ ಪರಕೀಯರಾಗುತ್ತಾರೆ. ಉತ್ಪಾದನೆ ಕ್ರಿಯೆ ಬರಿದೆ ಇನ್ನೊಬ್ಬನ ಅಧಿಕಾರಕ್ಕೆ, ದಬ್ಬಾಳಿಕೆಗೆ, ದಾಸ್ಯಕ್ಕೆ ಒಳಪಟ್ಟ ಕ್ರಿಯೆಯಾಗುತ್ತದೆ. ಈ ಇನ್ನೊಬ್ಬ ಮನುಷ್ಯ ಅನ್ಯನಾಗುತ್ತಾನೆ, ಹಗೆಯಾಗುತ್ತಾನೆ. ಪರಸ್ಪರರೊಡನೆ ಸಹಕರಿಸುವ ಬದಲು ಸ್ಪರ್ಧಿಗಳಾಗುತ್ತಾರೆ. ಪ್ರೀತಿ, ವಿಶ್ವಾಸಗಳ ಜಾಗದಲ್ಲಿ ಚೌಕಾಸಿ, ವ್ಯಾಪಾರಗಳ ದೃಷ್ಟಿ ನೆಲೆಸುತ್ತದೆ. 'ಮಾನವ ವ್ಯಕ್ತಿಗಳೂ ತಮ್ಮೆಲ್ಲರಿಗೂ ಸಮಾನವಾದ ಮನುಷ್ಯ ಸ್ವಭಾವವನ್ನು ಗುರುತಿಸಲು ಅಸಮರ್ಥರಾಗುತ್ತಾ ಉಳಿದವರನ್ನು ತಮ್ಮ ವೈಯಕ್ತಿಕ ಹಿತಾಸಕ್ತಿಗಳನ್ನು ಪೂರೈಸುವ ಸಾಧನವನ್ನಾಗಿ ಕಾಣುತ್ತಾರೆ' ಎಂಬ ಮಾರ್ಕ್ಸ್‌ನ ಪರಿಕಲ್ಪನೆಯು ಪೀಟರ್ ಸಿಂಗರ್‌ನ ಶಬ್ದಗಳಲ್ಲಿ ಹೀಗೆ ಬಂದಿದೆ ಎಂದು ಚಿತ್ತಾಲರೇ ಹೇಳಿದ್ದಾರೆ. ಈ ಪರಿಕಲ್ಪನೆಯ ಜೊತೆಗೆ ಸಿ. ಜೆ. ಯೂಂಗನ 'ಅಂತರ್ಮುಖ ವ್ಯಕ್ತಿತ್ವ'ವನ್ನೂ ನಾಗಪ್ಪನಲ್ಲಿ ಕಾಣಬಹುದು. ಈ ವ್ಯಕ್ತಿತ್ವ ಹೊಂದಿದವರು ಸಮಾಜದ ಪರಿಸರಕ್ಕೆ ಸಹಜವಾಗಿ ಹೊಂದಿಕೊಳ್ಳುವುದು ಸುಲಭವಲ್ಲ. ಇವರು ಹೊರಗೆ ಗಂಭೀರವಾಗಿ ಕಂಡರೂ ಒಳಗೆ ಪ್ರೀತಿ, ಅನುಕಂಪ, ಕರುಣೆಗೆ ಸಹಜವಾಗಿ ಪ್ರತಿಕ್ರಿಯಿಸುವ ಆತ್ಮೀಯ ಗುಣವನ್ನು ಉಳ್ಳವರಾಗಿರುತ್ತಾರೆ. ಈ ತೆರನಾದ ವ್ಯಕ್ತಿತ್ವವನ್ನು ನಾಗಪ್ಪ ಹೊಂದಿದ್ದಾನೆ. ಚಿತ್ತಾಲರು ಹೇಳಿದಂತೆ ಇಲ್ಲಿನ ನಾಗಪ್ಪ ಅಪ್ರಬುದ್ಧತೆಯಿಂದ ಪ್ರಬುದ್ಧತೆಯೆಡೆಗೆ ಮುಖ ಮಾಡಿದ್ದಾನೆ. ಇದು ಕೂಡ ಸಿ. ಜೆ. ಯೂಂಗನ 'ಇಂಡಿವಿಜುಯೇಶನ್' ಪರಿಕಲ್ಪನೆಯೇ ಆಗಿದೆ.

ನಾಗಪ್ಪ ಕಾದಂಬರಿಯುದ್ದಕ್ಕೂ ವ್ಯವಸ್ಥೆಯೊಂದರಲ್ಲಿ ಬಲಿಪಶುವಾಗಲಾರ ಎಂದು ತಿಳಿದ ಓದುಗನಿಗೆ ನಿರಾಶೆಯಾಗುತ್ತದೆ. ನಿರಾಶೆಯಾದ ಮಾತ್ರಕ್ಕೆ ಅದು ಕಾದಂಬರಿಯ ಸೋಲಲ್ಲದೇ ಗೆಲುವೇ ಆಗುತ್ತದೆ. ಸಾಮಾಜಿಕ ವ್ಯವಸ್ಥೆಯೂ ಎಷ್ಟು ಪಾತಕವಾಗಿದೆ, ಈ ಪಾತಕ ಪ್ರಪಂಚದಿಂದ ಮುಕ್ತನಾಗುವುದೇ ಮಾನವೀಯತೆ ಎಂದು ಭಾವಿಸುತ್ತಾನೆ. ರೆಡ್ಡಿ ಎಂದು ಕರೆಯುವ ಅಪರಿಚಿತ ವ್ಯಕ್ತಿಯು ಹೇಳಿದ ಮಾತುಗಳಿಗೆ ಯಾವ ಹುದ್ದೆಯನ್ನೂ ಪಡೆಯಲಾರೆ ಎಂಬ ಖಚಿತ ನಿಲುವಿದೆ. ಇನ್ನೂ ಮುಂದೆ ಹೋದರೆ ಅವನೇ ಕೊಟ್ಟ ಪತ್ರವನ್ನು ಓದಿಯೇ ಹರಿದುಹಾಕುವ ನಿಷ್ಠುರ ಮನಸ್ಸನ್ನೂ ಹೊಂದಿದ್ದಾನೆ. ಕಾದಂಬರಿಯಲ್ಲಿ ಬರುವ ಎರಡು ಸಂದರ್ಭಗಳಲ್ಲಿ ಬರುವ ವಿವರಗಳು ಅವನ ವರ್ತನೆಯಲ್ಲಿನ ಗಟ್ಟಿತನವನ್ನು ತಿಳಿಸುತ್ತವೆ.

''ಕಂಪನಿಯ ಕೆಲಸಕ್ಕೆ ಎಂದೋ ರಾಜೀನಾಮೆ ಕೊಡುವುದನ್ನು ಅವನು ಎಂದೋ ನಿರ್ಧರಿಸಿದ್ದ – ಆದರೆ ಮನುಷ್ಯನಾಗಿ, ಗಂಡಸಾಗಿ ಇಲ್ಲದ ಲಫಡಾದಲ್ಲಿ ತನ್ನನ್ನು

ಸಿಲುಕಿಸಲು ನಡೆಸಿದ ಪಿತೂರಿಯನ್ನು ಬಯಲಿಗೆ ಎಳೆದ ನಂತರವೇ ತನ್ನ ಹೆಸರಿಗೆ ಹತ್ತಿರಬಹುದಾದ ಕಳಂಕವನ್ನು ಅಳಿಸಿದ ನಂತರವೇ.'' ಇನ್ನೊಂದು, ಮೇರಿ ಸ್ವತಃ ನಾಗಪ್ಪನ ಮನೆಗೇ ಬಂದ ಸಂದರ್ಭ. ನಾಗಪ್ಪ ಅರ್ಜುನರಾವ್ ಅವರ ಮನೆಯಲ್ಲಿದ್ದನು. ಬಾಗಿಲು ತೆರೆದವರು ಅರ್ಜುನರಾವ್. ನಾಗಪ್ಪ ತನ್ನ ಜೊತೆ ರೂಮಿಗೆ ಮೇರಿಯನ್ನು ಕರೆತಂದ. ಮೇರಿ ಎಂ.ಡಿ. ಮನೆಗೆ ಡಿನ್ನರ್‌ಗೆ ಬರಲೇಬೇಕು ಎಂದು ಒತ್ತಾಯಿಸತೊಡಗಿದಳು. ಎಂ.ಡಿ.ಯವರು ಅವನ ರಾಜೀನಾಮೆಯನ್ನು ಸ್ವೀಕರಿಸಿಲ್ಲ ಎಂದು ಹೇಳಿದ್ದಕ್ಕೆ ನಾಗಪ್ಪ ''ನಾನು ರಾಜೀನಾಮೆಯನ್ನು ಕೊಟ್ಟಿದ್ದು ಬರೀ ನೌಕರಿಗಲ್ಲ, ಮೇರಿ, ಹೀಗೆ ಬರಿಯೆ ನಮ್ಮ ನಮ್ಮ ಸ್ವಾರ್ಥಕ್ಕಾಗಿ, ಭಯಗಳಿಗಾಗಿ ಒಬ್ಬರನ್ನೊಬ್ಬರು ಉಪಯೋಗಿಸಿಕೊಳ್ಳುವಂತೆ ಮಾಡುವ ಈ ವ್ಯಾವಹಾರಿಕ ಲೋಕಕ್ಕೆ! ನೀನು ತಿಳಿದ ಹಾಗೆ, ನಾನು ಈ ನಿರ್ಧಾರವನ್ನು ಒಂದು ಪ್ರಕ್ಷುಬ್ಧ ಗಳಿಗೆಯಲ್ಲೇ ಮಾಡಿರಬಹುದಾದ, ಅದು ಸ್ವತಃ ನಾನೇ ತಿಳಿದಿದ್ದಕ್ಕಿಂತ ಹೆಚ್ಚು ಗಟ್ಟಿಮುಟ್ಟಾದುದೆಂದು ಗೊತ್ತಾದ್ದು ಮಾತ್ರ ಇದೀಗ ನೀನು ನನ್ನ ಬಡತಿಯ ಸುದ್ದಿ ಒಡೆದಾಗ! ಅಮೆರಿಕನ್ ಡೈರಕ್ಟರರಿಗೆ ನನ್ನ ಬಗ್ಗೆ ಆದರ ಇದ್ದುದನ್ನು ತಿಳಿಸಿದಾಗ! ನನ್ನ ನಿರ್ಧಾರದ ನಿಶ್ಚಲತೆ ಅಹಂಕಾರದಲ್ಲಿ ಬೇರುಬಿಟ್ಟದ್ದಲ್ಲವೆಂದು ನನ್ನ ಪ್ರಾಮಾಣಿಕವಾದ ಅನಿಸಿಕೆ'' ಎಂದು ಹೇಳುತ್ತಾನೆ.

ನಾಗಪ್ಪ ಮಾನವತಾವಾದಿಯಾಗಿ ಎಷ್ಟೆಲ್ಲಾ ದೊಡ್ಡ ಆದರ್ಶಗಳನ್ನಿಟ್ಟುಕೊಂಡಿದ್ದರೂ ಅವು ವ್ಯವಸ್ಥೆಯಲ್ಲಿ ನಾಶವಾಗಿವೆ. ಹೀಗಾಗಿ ಪತ್ರಿಕೋದ್ಯಮ, ಅಣ್ಣ ತಂಗಿಯನ್ನು ಹುಡುಕುವ ಗುರಿ ಜೀವನಕ್ಕೆ ಸರಿಹೊಂದಬಹುದು ಎಂದು ಯೋಚಿಸುತ್ತಾನೆ. ನಮ್ಮ ಸಮಾಜದ ವ್ಯವಸ್ಥೆ ಢೋಂಗಿತನವನ್ನು ವಿಡಂಬಿಸುತ್ತ ನಮ್ಮೊಳಗಿನ ಊನಗಳು ಸರಿಯಾದಾಗ ಮಾತ್ರ ವ್ಯವಸ್ಥೆ ಸರಿಯಾಗುತ್ತೆ ಎನ್ನುವ ಮಹತ್ ಆಶಯವನ್ನು ಪ್ರಕಟಿಸುತ್ತದೆ. ಅಂತರಂಗದ ತುಮುಲಗಳನ್ನು ಹೊರಗೆಡಲು ತಾಂತ್ರಿಕವಾಗಿ ನವ್ಯದ ಆಕೃತಿಗಳ ದಿಕ್ಕಿನಲ್ಲೇ ಸಾಗಿದರೂ ಆಶಯದ ದೃಷ್ಟಿಯಿಂದ ಸಾಮಾಜಿಕ ವ್ಯವಸ್ಥೆಯನ್ನು ಕೇಂದ್ರ ಮಾಡಿಕೊಂಡಿರುವ ಕಾರಣ ನವ್ಯೋತ್ತರದ ಸಂಕಥನವಾಗಿ ಜಾಡು ಮೂಡಿಸಿದೆ.

ಚಿತ್ತಾಲರು ಹೇಳುವಂತೆ '' 'ಪುರುಷೋತ್ತಮ' ನನ್ನ ಸೃಜನಶೀಲತೆಯ ಸರ್ವಸ್ವವನ್ನೂ ಧಾರೆಯೆರೆದು ಬರೆದಂತೆ ಬರೆದ ಕೃತಿ'' (ಮುನ್ನುಡಿ) ಎಂಬ ಮಾತುಗಳು ಕಾದಂಬರಿಯ ಸಂದರ್ಭದಲ್ಲಿ ಮುಖ್ಯವೆನಿಸುತ್ತವೆ. ಎಪ್ಪತ್ತರ ದಶಕದಲ್ಲಾದ ಸಾಮಾಜಿಕ ಬದಲಾವಣೆಗೆ ಕಾರಣವಾದ ಘಟನೆಗಳು ಸಾಹಿತ್ಯದ ಮೇಲೆ ಗಂಭೀರ ಪರಿಣಾಮ ಬೀರಿವೆ. ನವ್ಯೋತ್ತರದ ಸಾಮಾಜಿಕ, ರಾಜಕೀಯ ಆಶಯಗಳ ಬೀಜರೂಪ 'ಶಿಕಾರಿ'ಯಲ್ಲಿ ಸೂಚ್ಯವಾಗಿ ಕಂಡರೂ 'ಪುರುಷೋತ್ತಮ', 'ಕೇಂದ್ರ ವೃತ್ತಾಂತ'ದಲ್ಲಿ ಮಹತ್ವದ ಬೆಳವಣಿಗೆಯನ್ನು ಕಂಡಿವೆ.

ದೇಸಾಯಿ, ಚಿತ್ತಾಲರಲ್ಲಿ ನವ್ಯೋತ್ತರದ ಆಶಯಗಳು ಗಟ್ಟಿಯಾಗಿ ಧ್ವನಿಸಿದರೂ ವ್ಯಕ್ತಿನಿಷ್ಠ ಪ್ರಜ್ಞೆ ನವ್ಯದ ಆಶಯವಾಗಿ ಮುಂದುವರಿಯುವುದನ್ನು ಕಾಣುತ್ತೇವೆ. ೭೦ರ ದಶಕದಿಂದ ಈಚೆಗಿನ ಬೆಳವಣಿಗೆಯನ್ನು ಗಮನಿಸಿದಾಗ 'ಪುರುಷೋತ್ತಮ' ಸಾಮಾಜಿಕ ಅಭಿಮುಖತೆಯನ್ನು ಸಾಧಿಸಿ ಗಮನಾರ್ಹವಾಗಿದೆ. ಹಿಂದಿನ ದಶಕದ ಚಿಂತನಧಾರೆಗೆ ಹೊಸ ಆಶೋತ್ತರಗಳು ಸೇರಿ ಸಾಹಿತ್ಯ ಮಾರ್ಗದಲ್ಲಿ ಬದಲಾವಣೆಗಳಾಗಿವೆ.

ಚಿತ್ತಾಲರ 'ಪುರುಷೋತ್ತಮ' ಸ್ಪಷ್ಟವಾಗಿ ವ್ಯಕ್ತಿಕೇಂದ್ರಿತ ದೃಷ್ಟಿಕೋನವನ್ನು ಬಿಟ್ಟು ಸಾಮಾಜಿಕ ಆಯಾಮವನ್ನು ಪಡೆದಿದೆ. ಶಿಕಾರಿಯಲ್ಲಿ 'ನಾಗಪ್ಪ' ಮುಖ್ಯವಾದರೆ 'ಪುರುಷೋತ್ತಮ' ಕಾದಂಬರಿಯಲ್ಲಿ ಪುರುಷೋತ್ತಮನೇ ಮುಖ್ಯವಾಗಿದ್ದಾನೆ. ನವ್ಯ ಸಾಹಿತ್ಯದ ಸಂದರ್ಭದಲ್ಲಿ ಬಂದ ಟಿ. ಜಿ. ರಾಘವ ಅವರ 'ಮನೆ' ಕಾದಂಬರಿಯನ್ನು ನವ್ಯೋತ್ತರದ ಸಂದರ್ಭದಲ್ಲಿ ಚಿತ್ತಾಲರ 'ಪುರುಷೋತ್ತಮ' ಕಾದಂಬರಿ ನೆನಪಿಸುತ್ತದೆ. ಚಿಂತನೆ, ನಿರ್ವಹಣೆಯ ಕ್ರಮದಲ್ಲಿ ಮಾತ್ರ ಎರಡೂ ಭಿನ್ನವಾಗಿವೆ. ಬಾಲ್ಯದ ಅನುಭವಗಳನ್ನು ನೆನಪು ಮಾಡಿಕೊಳ್ಳುತ್ತಲೇ ಬದುಕುತ್ತಿರುವ ಪುರುಷೋತ್ತಮನಿಗೆ ವರ್ತಮಾನದ ಸವಾಲುಗಳು ಅಷ್ಟೇ ಗಂಭೀರವಾಗಿವೆ. ಸಮಾಜದ ಎಲ್ಲ ಶಕ್ತಿಗಳಿಂದ ರೂಪಗೊಂಡರೆ ಅದೇ ಶಕ್ತಿಗಳಿಂದ ಎದುರಾಗುವ ಒಳಿತು ಹಾಗೂ ಕೆಡುಕಿಗೂ ಪ್ರತಿಕ್ರಿಯಿಸಲೇಬೇಕಾದುದು ಅನಿವಾರ್ಯ. ಈ ಅನಿವಾರ್ಯತೆ ಎಂಥ ಸಂಕೀರ್ಣತೆಯದ್ದಾಗಿರುತ್ತದೆ ಎಂಬುದನ್ನು ಇವರ ಪಾತ್ರಗಳು ತೋರಿಸುತ್ತವೆ. ಪ್ರೀತಿ, ಕರುಣೆ, ಭಯ, ದ್ವೇಷ, ಕ್ರೌರ್ಯ – ಹೀಗೆ ಅನೇಕ ಪ್ರವೃತ್ತಿಗಳು ಹೇಗೆ ಅವಕಾಶ ಸಿಕ್ಕೊಡನೆ ಭೂತಾಕಾರ ತಾಳುತ್ತವೆ ಎಂಬುದಕ್ಕೆ ನಿರ್ಮಲೆ, ವಾಸುದೇವ, ನಾಗಪ್ಪ, ಮಂಜುನಾಥ, ಪುರುಷೋತ್ತಮ ಸಾಕ್ಷಿಯಾಗಿದ್ದಾರೆ. ಕಾದಂಬರಿಕಾರ ನಿರೂಪಕನಾಗಿ, ಪಾತ್ರಧಾರಿಯಾಗಿ ಎರಡೂ ನೆಲೆಗಳಲ್ಲಿ ನಿರ್ವಹಿಸಬೇಕಾದ ಅನಿವಾರ್ಯತೆ ಇದೆ. ಚಿತ್ತಾಲರಿಗೆ ದೇಹ, ಮನಸ್ಸು ಇವುಗಳ ಮೂಲಕ ಅನಾವರಣಗೊಳ್ಳುವ 'ವರ್ತನೆ' ಬಹಳ ಮುಖ್ಯವಾದುದು. ಒಬ್ಬನ ಜಾಗದಲ್ಲಿ ಮತ್ತೊಬ್ಬನನ್ನಿರಿಸಿ ನೋಡುವ ಕಲ್ಪನಾಶಕ್ತಿ ಲೇಖಕನಿಗೆ ಬಹುಮುಖ್ಯ ಎಂದು ನಂಬಿದಂತಿದೆ. ವಾಸ್ತವವಾಗಿ ಸೃಜನ ಸಾಹಿತ್ಯದ ಭಾಗವೆ ಇದಾಗಿದೆ. ಚಿತ್ತಾಲರಿಗೆ ತಮ್ಮ ವಿಜ್ಞಾನದ ನೆಲೆಗಳನ್ನು ಎಲ್ಲಿ ಹೇಳಬೇಕು ಎಂಬ ಆಸಕ್ತಿ ಇದ್ದಾಗ್ಯೂ ಅದರ ಬಹುಮುಖೀ ದೃಷ್ಟಿಕೋನದ ಉಪಯೋಗ ಸಾಹಿತ್ಯದಲ್ಲಿ ತೆರೆದುಕೊಂಡಿದ್ದು ಕಡಿಮೆಯೇ.

ಚಿತ್ತಾಲರ ಸಾಹಿತ್ಯ ನಿರಪರಾಧಿಯ ಯಾತನೆ ಹಾಗೂ ಮೃತ್ಯುಪ್ರಜ್ಞೆಯನ್ನು ಅಂತರ್‌ಧ್ವನಿಯಾಗಿಸಿಕೊಂಡಿದೆ. ಅವರೇ ಹೇಳುವಂತೆ ''ನನ್ನ ಸೃಷ್ಟಿಕ್ರಿಯೆಯ ಜೀವಸೆಲೆಗಳಲ್ಲಿ, ನನ್ನ ಅನುಭವಿಸುವ ಕ್ರಮವನ್ನು ನಿರ್ಧರಿಸಿ, ನನ್ನ ಸಂವೇದನೆಯ ಮೇಲೆ 'ನನ್ನತನ'ದ ಮುದ್ರೆಯೊತ್ತಿದ ಮೂಲ ಕಾರಣಗಳಲ್ಲಿ ಮೂರು ಮುಖ್ಯವಾಗಿವೆಯೆಂದು ನನಗೆ ತೋರಿದೆ. ಹನೇಹಳ್ಳಿ, 'ನನ್ನ-ಅಪ್ಪನ ಸಂಬಂಧ ಹಾಗೂ ಮೃತ್ಯುಪ್ರಜ್ಞೆ'. ನನ್ನ ಈವರೆಗಿನ ಸಾಹಿತ್ಯದ ಪ್ರಧಾನ ವಿಷಯಗಳಾದ 'ನಿರಪರಾಧಿಯ ಯಾತನೆ' ಹಾಗೂ 'ಸಾವು' ಇವುಗಳ ಹುಟ್ಟು ಕೂಡ ಈ ಮೂರರಲ್ಲಿ ಇದೆಯೆಂದು ನನಗನ್ನಿಸುತ್ತದೆ.'' ಇವರ ಹುಟ್ಟೂರಾದ ಹನೇಹಳ್ಳಿ ಕಥಾ ಸಾಹಿತ್ಯದ ಜೀವದ್ರವ್ಯ. ಸಾಹಿತ್ಯದ ಪ್ರೇರಕ ಶಕ್ತಿಯಾದಂತೆ ಚೈತನ್ಯದ ಚಿಲುಮೆ. ಬಾಲ್ಯದ ಅನುಭವ, ಉತ್ತರ ಕನ್ನಡ ಜಿಲ್ಲೆಯ ಪರಿಸರ, ಅನುಭವದ ಮೂಲಕ ನಡೆಯುವ ವೈಚಾರಿಕ ಸಂಘರ್ಷ ಸಾಹಿತ್ಯ ಮಾಧ್ಯಮದಲ್ಲಿ ಕಲೆಯಾಗಿ ಅರಳಿವೆ. ಕಲೆಗೆ ಎಲ್ಲಿ ಅಡ್ಡಿ ಬರುತ್ತದೋ ಎಂಬ ಆತಂಕ. ಈ ಆತಂಕಕ್ಕೂ ವಿಜ್ಞಾನ ವಿದ್ಯಾರ್ಥಿ ಎಂಬುದೇ ಆಗಿದೆ.

ಚಿತ್ತಾಲರು 'ನಿರಪರಾಧಿಯ ಯಾತನೆ'ಗೆ ತೀವ್ರ ಸ್ವರೂಪದಲ್ಲಿ ಸ್ಪಂದಿಸುವುದು ಸಾಮಾಜಿಕ ಸಂದರ್ಭದಲ್ಲಿ ನಡೆದ ಘಟನೆಗಳೇ ಆಗಿವೆ ಎಂದಿದ್ದಾರೆ. ''ಭುಟ್ಟೋನಿಗಾದ ಫಾಸಿ, ಬೇರೂಟ್-ಅಸ್ಸಾಮಗಳಲ್ಲಿಯ ಹತ್ಯಾಕಾಂಡ, ಗ್ಯಾಂಗ್ ರೇಪ್, ಝೋಪಡ್ ಪಟ್ಟಿಗಳ ಉಚ್ಚಾಟನೆ ಇತ್ಯಾದಿ. ಮಲಗಿದಲ್ಲೇ ಮಂಚಕ್ಕೆ ಕಟ್ಟಿಬಿದ್ದ ಬಾಲಕ ಗಣೇಶ, ಇನ್ನೊಬ್ಬರ ಕನಸಿನಲ್ಲಿ ಸಿಕ್ಕಿಬಿದ್ದ ಬಾಲಕ ಬೇನ್ಯಾ ಮೊದಲಾದವರನ್ನು ಪರಿಗ್ರಹಿಸಿದ ವಿಹ್ವಲತೆ ಇಂಥ ಸನ್ನಿವೇಶಗಳಿಂದಲೇ ಹುಟ್ಟಿದ್ದು. ಭುಟ್ಟೋಗೆ ಫಾಸಿಯಾದ ಸುದ್ದಿ ನನ್ನ ಮೇಲೆ ಮಾಡಿದ ಪರಿಣಾಮವನ್ನು ನಾನು ಹಿಂದೊಮ್ಮೆ ದಾಖಲೆಗೊಳಿಸಿದ ಬಗೆ – ಈ ಮಾತನ್ನು ಹೆಚ್ಚು ಸ್ಪಷ್ಟಗೊಳಿಸೀತೇನೋ. ''ತನ್ನನ್ನು ನಿಜಕ್ಕೂ ಗಲ್ಲಿಗೇರಿಸಬೇಕೆಂಬುದರಲ್ಲಿ ನಂಬಿಕೆಯಿರದ ಭುಟ್ಟೋ ಗಾಢ ನಿದ್ದೆಯಲ್ಲಿದ್ದವನನ್ನು ಜೈಲ್ ಅಧಿಕಾರಿಗಳು ಅವೇಳೆಯಲ್ಲಿ ಎಬ್ಬಿಸಿದಾಗಿನ; ಎಬ್ಬಿಸಿದ್ದರ ಕಾರಣ ತಿಳಿದು ಕಕ್ಕಾಬಿಕ್ಕಿಯಾದಾಗಿನ; ಗಡ್ಡ ಬೋಳಿಸಿ ಸ್ನಾನ ಮಾಡುವಾಗಿನ; ಮೊದಲೇ ಸಿದ್ಧವಾಗಿರಿಸಿದ ನೇಣಿನ ಕಡೆಗೆ ಹೆಜ್ಜೆ ಹಾಕುವಾಗಿನ; ಮನಸ್ಸನ್ನು ಕಲ್ಲು ಮಾಡಿ ನಿಂತ ಹ್ಯಾಂಗ್ಮನ್‌ಗೆ 'ಮುಗಿಸಿಬಿಡು' ಎಂದಾಗಿನ; ಕಟ್ಟಕಡೆಯ ಘಳಿಗೆಯಲ್ಲಿ ''ಅಲ್ಲಾ, ನನ್ನನ್ನು ಕಾಪಾಡು... ನಾನು ನಿರಪರಾಧಿ'' ಎಂದು ಪ್ರಾರ್ಥಿಸಿದಾಗಿನ ಒಬ್ಬಂಟಿ ಭುಟ್ಟೋ ನನ್ನ ಮನಸ್ಸಿನ ಆಳದಲ್ಲಿ ಕೆರಳಿಸಿದ ನೂರಾರು ಪ್ರತಿಮೆಗಳು''– ಹೀಗೆ ಹೇಳುವ ಈ ಮಾತುಗಳು ಸಾಹಿತ್ಯದ ಸಂದರ್ಭದಲ್ಲಿ ಅರ್ಥವತ್ತಾಗಿ ಮೈದಾಳಿವೆ.

'ಶಿಕಾರಿ' ಕಾದಂಬರಿಯ ನಾಯಕ ನಾಗಪ್ಪ ಅಪರಾಧಿಯಲ್ಲದಿದ್ದರೂ ಸಾಮಾಜಿಕ ಫ್ಯಾಸಿಸ್ಟ್ ವ್ಯವಸ್ಥೆ ಅವನನ್ನು ಅಪರಾಧಿಯನ್ನಾಗಿಸಿದೆ. ಒಳಿತಿನ ಪ್ರತೀಕವಾಗಿ 'ನಾಗಪ್ಪ' ಕಂಡರೆ 'ಶ್ರೀನಿವಾಸ', 'ಫಿರೋಜ' ಕೇಡಿನ ರೂಪಗಳಾಗಿದ್ದಾರೆ. 'ಪುರುಷೋತ್ತಮ' ಕಾದಂಬರಿಯಲ್ಲಿ 'ಪುರುಷೋತ್ತಮ' ಏಕಕಾಲದಲ್ಲಿ ಕುಟುಂಬ ವ್ಯವಸ್ಥೆಯಲ್ಲೂ, ಸಾಮಾಜಿಕ ವ್ಯವಸ್ಥೆಯಲ್ಲೂ, ಔದ್ಯೋಗಿಕ ವ್ಯವಸ್ಥೆಯಲ್ಲೂ ಅಪರಾಧಿಯಾಗಿದ್ದಾನೆ. ಅಪರಾಧಿ ಅಲ್ಲ ಎಂದು ಇಡೀ ವ್ಯವಸ್ಥೆಗೆ ಒಪ್ಪಿಸುವುದು ಹೇಗೆ ಎಂಬ ಸವಾಲು ಎದುರಿಗಿದೆ. 'ಮನಸ್ಸು' ಮಾತ್ರ ಎಲ್ಲವನ್ನೂ ಗೆಲ್ಲಬಲ್ಲದು ಎಂಬ ತರ್ಕ ಎರಡು ಕಾದಂಬರಿಗಳ ಸಂದರ್ಭದಲ್ಲಿ ಮುಖ್ಯವಾಗಿದೆ.

ಡಾ|| ಎ. ರಘುರಾಂ
ಮುಖ್ಯಸ್ಥರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಬ್ಬಿ, ತುಮಕೂರು ಜಿಲ್ಲೆ.

### ವಿಪರ್ಯಾಸ

ಹುಟ್ಟುತ್ತಲೇ ಮಾನವನ
ಬೆನ್ನಿಗೆ ಅಂಟಿಕೊಂಡು
ಬಂದ ಜಾತಿಯ ಭೂತ
ಇಂದು ಉಪಯೋಗಿಸುವ
ವಾಹನಗಳ ಎದೆ ಬೆನ್ನುಗಳನ್ನೂ ಬಿಡದೆ
ಅಂಟಿದೆ ಜಾಹೀರಾತಿನ ತರಹ.

ಎನ್. ಶ್ರೀನಿವಾಸ್
ಪ್ರದಸ, ಜಿಲ್ಲಾ ತರಬೇತಿ ಕೇಂದ್ರ
ಎ. ಸಿ. ಫಾರಂ, ಮಂಡ್ಯ

# ಸಮಾಜ ಮತ್ತು ಸಮೂಹ ಮಾಧ್ಯಮಗಳು



**ಜಗತ್ತಿನಾದ್ಯಂತ ಇರುವ ಕುಟುಂಬ ಮತ್ತು ಬಣಗಳ ನಡುವೆ ಅಧಿಕಾರ ಉಳಿಯಬೇಕೆಂಬ ರಾಜಕಾರಣವನ್ನೇ ನಾವು ತಪ್ಪಿಸಿ, ಹೊಸದೊಂದು ಸಮುದಾಯದ ಪಾಲುದಾರಿಕೆಯುಳ್ಳ ಮಾಧ್ಯಮವನ್ನು ರೂಪಿಸುವವರೆಗೆ ನಾವು ಬಯಸುವ ಆದರ್ಶಮಯವಾದ ಮಾಧ್ಯಮ ದೊರೆಯುವುದಿಲ್ಲ. ಅಕಸ್ಮಾತ್ ನಾವು ಗೆದ್ದು ನಮಗೆ ಬೇಕಾದ್ದನ್ನು ರೂಪಿಸಿದರೂ ಈ 'ನಾವು' ಎನ್ನುವ ಶಕ್ತಿ ಎಷ್ಟು ಕಾಲ ಭ್ರಷ್ಟವಾಗದೆ ಉಳಿಯುತ್ತದೆ ಎಂಬುದು ಕೂಡ ನಮ್ಮೆದುರಿಗಿರುವ ಬೃಹತ್ ಪ್ರಶ್ನೆ. ಕಳೆದ ಎರಡು ದಶಕದಲ್ಲಿ ನಾವು ಆದರ್ಶ ವ್ಯಕ್ತಿತ್ವ ಎಂದುಕೊಂಡಿದ್ದವರೆಲ್ಲರನ್ನೂ ಆ ಅಧಿಕಾರದ ಬಣವು ಕೊಂಡುಕೊಂಡಿದೆ ಮತ್ತು ನಮ್ಮೆದುರಿಗೆ ನಮ್ಮ ಆದರ್ಶಗಳು ಕೇವಲ ಆದರ್ಶವಾಗಿ ಮಾತ್ರ ಉಳಿದು ದನ್ನು ನಾವು ನೋಡಿದ್ದೇವೆ. ನಮ್ಮ ನಾಯಕರು ಸಹ ಆತ್ಮಸಾಕ್ಷಿಗಳನ್ನು ಕೊಂದುಕೊಂಡು ಅಧಿಕಾರದಲ್ಲಿ ಉಳಿಯುವ ಪ್ರಯತ್ನವನ್ನು ಮಾಡುತ್ತಲೇ ಹುಚ್ಚರಂತಾಡುತ್ತಿರುವುದನ್ನೂ ನಾವು ನೋಡುತ್ತಿದ್ದೇವೆ.**

*(ಹಿಂದಿನ ಸಂಚಿಕೆಯಿಂದ ಮುಂದುವರಿದುದು)*

**ಮಾಧ್ಯಮದ ಪರಿಣಾಮ**

ಈಚೆಗಿನ ಮಾಧ್ಯಮದ ಪರಿಣಾಮವೊಂದನ್ನು ಸಿಎನ್‌ಎನ್ ಪರಿಣಾಮ ಎಂದು ಗುರುತಿಸುತ್ತಾರೆ. ಅಮೆರಿಕಾದ ಅತ್ಯಂತ ಪ್ರಭಾವಶಾಲಿ ದೂರದರ್ಶನ ವಾಹಿನಿಯಾದ ಸಿಎನ್‌ಎನ್ ಎಂಬ ವಾಹಿನಿಯಲ್ಲಿ ಪ್ರಸಾರವಾಗುವ ವಿವರಗಳನ್ನು ಅತ್ಯಂತ ಜಾಗರೂಕತೆಯಿಂದ ಜೋಡಿಸಲಾಗುತ್ತದೆ. ಅಂತಹ ಸುದ್ದಿಯೊಂದರ ಪ್ರಭಾವ ಸಾರ್ವಜನಿಕರ ಮೇಲೆ ಆಗುವುದಕ್ಕಿಂತ ಹೆಚ್ಚಾಗಿ ಸರ್ಕಾರದ ಮೇಲೆ ಆಗುತ್ತದೆ. ಇದರಿಂದಾಗಿ ಸರ್ಕಾರ ಸಿದ್ದಪಡಿಸುವ ಅನೇಕ ಹೊಸ ಮಸೂದೆಗಳು ಬದಲಾಗಿರುವುದುಂಟು. ಸಿಎನ್‌ಎನ್ ತರಹದ ವಾಹಿನಿಗಳಲ್ಲಿ ಸೋಮಾಲಿಯಾದ ಕಡು ಬಡತನ ಕುರಿತ ಚಿತ್ರಗಳು ಪ್ರಸಾರವಾದಾಗ ಆ ದೇಶವೇ ಎದ್ದು ಸರ್ಕಾರ ಇದರಲ್ಲಿ ಭಾಗವಹಿಸಬೇಕು ಎಂದಿತ್ತು. ಅದರಿಂದಾಗಿ ಅಮೆರಿಕಾದ ಅನೇಕರು ಸೋಮಾಲಿಯಾದ ಜನರಿಗೆ ಸಹಾಯ ಮಾಡಲು ಹೊರಟರು. ಆನಂತರ ಸೋಮಾಲಿಯಾದಲ್ಲಿ ಏನಾಯಿತು ಎಂಬುದು ಇತಿಹಾಸ. ಅದೇ ರೀತಿಯಾಗಿ ವಿಯೆಟ್ನಾಮ್ ಯುದ್ಧ ತಪ್ಪು ಎಂಬ ಮಾಹಿತಿಯನ್ನು ಸಿಎನ್‌ಎನ್ ನೀಡಲಾರಂಭಿಸಿದಾಗ ಅಮೆರಿಕನ್ನರೆಲ್ಲರೂ ಒಟ್ಟಾಗಿ ಸರ್ಕಾರ ತನ್ನ ಸೇನೆಯನ್ನು ವಿಯೆಟ್ನಾಮಿನಿಂದ ಹಿಂದೆ ಕರೆಸಿಕೊಳ್ಳುವಂತೆ ಮಾಡಿತ್ತು. ಅದೇ ವಾಹಿನಿಯೂ ೯/೧೧ ದುರಂತದ ನಂತರ ಚಿತ್ರಿಸಿದ ಸುದ್ದಿಗಳ ಸಹಾಯ ಪಡೆದು ಅಮೆರಿಕಾದ ಬುಷ್ ಸರ್ಕಾರ ಅಫ್ಘಾನಿಸ್ತಾನದ ಮೇಲೆ ಮುಗಿಬಿದ್ದದ್ದು ಸಹ ಈಗ ಇತಿಹಾಸ.

ಇದನ್ನು ನಾವು ನಮ್ಮ ದೇಶದಲ್ಲಿಯೂ ಕಳೆದ ಹತ್ತು - ಹದಿನೈದು ವರ್ಷಗಳಿಂದ ಗಮನಿಸುತ್ತಾ ಬಂದಿದ್ದೇವೆ. ಭಾರತದ ಮಟ್ಟಿಗೆ ಟೈಂಸ್ ನೌ, ಎನ್‌ಡಿ ಟಿವಿ, ಕನ್ನಡದ ಟಿವಿ, ಉದಯ ನ್ಯೂಸ್, ಸುವರ್ಣ ನ್ಯೂಸ್‌ನಂತಹ ಸುದ್ದಿ ಸಂಸ್ಥೆಗಳು ಬಹುಮಟ್ಟಿಗೆ ಅಮೆರಿಕಾದಲ್ಲಿ ಸಿಎನ್‌ಎನ್ ಮಾಡುತ್ತಿರುವ ಕೆಲಸವನ್ನೇ ಮಾಡುತ್ತಿವೆ. ಈ ವಾಹಿನಿಗಳಲ್ಲಿ ಬರುವ ಮಾತುಗಳನ್ನೇ ವೇದವಾಕ್ಯ ಎಂದುಕೊಂಡು ಷೇರುಮಾರುಕಟ್ಟೆಯಲ್ಲಿ ಹಣ ತೊಡಗಿಸುವವರಿಂದ ಹಿಡಿದು, ಈಚೆಗಿನ ಮಹಿಳಾ ಮಸೂದೆಗೆ ಗೆಲುವು ದೊರಕುವುದಕ್ಕೂ ಈ ವಾಹಿನಿಗಳು ಕಾರಣವಾಗಿರುವುದನ್ನು ನಾವು ನೋಡುತ್ತಾ ಇದ್ದೇವೆ. ದೇಶದ ಚಿತ್ರವನ್ನು ನೋಡುವಾಗ ಕಾಣುವ ವಿವರ ಒಂದಾದರೆ ನಮ್ಮ ರಾಜ್ಯದ ಚಿತ್ರವನ್ನು ನೋಡುವಾಗ ಕಾಣುವ ಚಿತ್ರ ಬೇರೆಯದು. ಒಂದು ಜನಪ್ರಿಯ ವಾಹಿನಿಯಲ್ಲಿ ಚಿತ್ರವಾಗುವ ಸುದ್ದಿಯಿಂದ ಜನಮಾನಸವೇ ಚಿಕ್ಕಸಚಿರಗಾಗಿರುವುದನ್ನು ನಾವು ನೋಡಿದ್ದೇವೆ. ನಮ್ಮ ಕೆಲವು ವಾಹಿನಿಗಳು ಪ್ರಸಾರ ಮಾಡಿದ ಈ ಬಾರಿಯ ಪ್ರವಾಹದ ದೃಶ್ಯಗಳಿಂದ ಸರ್ಕಾರಕ್ಕೆ ಪ್ರವಾಹ ಪರಿಹಾರ ನಿಧಿಯಾಗಿ ಸಾವಿರಾರು ಕೋಟಿ ರೂಪಾಯಿಗಳು ಹರಿದುಬಂದವು. ಆ ದುಡ್ಡು ಹೇಗೆ ಉಪಯೋಗವಾಯಿತು ಎಂಬುದನ್ನು ಬಲ್ಲವರಿಗೆ ಮಾಧ್ಯಮಗಳ ಇಂತಹ ಸುದ್ದಿಯ ಲಾಭ ಪಡೆದವರಾರು ಎಂಬುದು ತಿಳಿಯುತ್ತದೆ. ಅದೇ ರೀತಿಯಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಭೂಮಿಯಲ್ಲಿ ಕೊಂಚ ಭಾಗವನ್ನು ಪ್ರವಾಸೋದ್ಯಮಕ್ಕೆ ಕೊಡುವ ತೀರ್ಮಾನವಾದಾಗಲೂ ಮಾಧ್ಯಮಗಳ ಸಹಾಯದಿಂದ ನಾಡಿನ ಬುದ್ಧಿಜೀವಿಗಳು ಎಚ್ಚೆತ್ತುಕೊಂಡದ್ದನ್ನು ನಾವು ನೋಡಿದ್ದೇವೆ. ಇದರಿಂದಾಗಿ ಸರ್ಕಾರ ತನ್ನ ನಿರ್ಧಾರ ಬದಲಿಸಿದ್ದನ್ನೂ ನೋಡಿದ್ದೇವೆ. ಇಂತಹ ವಿವರಗಳಲ್ಲದೆ ಅವೇ ವಾಹಿನಿಗಳಲ್ಲಿ ಯಾವುದೋ ವಿಗ್ರಹವು ಹಾಲು ಕುಡಿಯುತ್ತಿದೆ ಎಂಬ ಸುದ್ದಿ, ಇನ್ಯಾವುದೋ ದೇವರ ವಿಗ್ರಹ ಕಣ್ಣುಬಿಟ್ಟ ಸುದ್ದಿ ಕೂಡ ಪ್ರಸಾರವಾಗಿದ್ದಿದೆ. ಇಂತಹ ಸುದ್ದಿಗಳ 'ಲಾಭ' ಆಯಾ ಬಾತ್ಮೀದಾರರಿಗೆ ಹಾಗೂ ಮಾಹಿತಿದಾರರಿಗೆ ಆಗಿದ್ದನ್ನೂ ನಾವು ನೋಡಿದ್ದೇವೆ. ಈ ಟೆಲಿವಿಷನ್ ವಾಹಿನಿಗಳ ಹಾಗೆ ಕೆಲವು ಮುದ್ರಣ ಮಾಧ್ಯಮದ ಪತ್ರಿಕೆಗಳೂ ಸಹ ತಮ್ಮ ಬರಹದಿಂದಲೇ ಸರ್ಕಾರದ ತೀರ್ಮಾನಗಳು ಬದಲಾಗುವ ಹಾಗೆ ಮಾಡಿರುವ ಉದಾಹರಣೆಯೂ ಇದೆ. ರಸ್ತೆಗಳ ದುರವಸ್ಥೆಯ ಬಗ್ಗೆ ಮತ್ತೆ ಮತ್ತೆ ಹೇಳುತ್ತಾ ಹೆದ್ದಾರಿಗಳು ಸರಿಹೋಗಿದ್ದನ್ನು ಹಾಗೂ ಕೆಲವೊಮ್ಮೆ ಸರ್ಕಾರದ ದಿವ್ಯ ನಿರ್ಲಕ್ಷ್ಯವನ್ನು ಸಹ ನಾವು ಕಂಡಿದ್ದೇವೆ. ಅನೇಕ ಭ್ರಷ್ಟಾಚಾರಿಗಳನ್ನು ಬಯಲಿಗೆಳೆಯುವಲ್ಲಿ ಮಾಧ್ಯಮದ ಪಾತ್ರ ದೊಡ್ಡದು. ಅಮೆರಿಕಾದಲ್ಲಿ ನಿಕ್ಸನ್ ಅಧ್ಯಕ್ಷನಾಗಿದ್ದ ಕಾಲದ ಹಗರಣ 'ವಾಟರ್ ಗೇಟ್ ಹಗರಣ' ಎಂದೇ ಪ್ರಸಿದ್ಧವಾಗಿದೆ. ಅಂತಹ ಅನೇಕ ಪ್ರಕರಣಗಳನ್ನು ನಮ್ಮ ನೆಲದಲ್ಲಿಯೂ ಉದಾಹರಿಸಬಹುದು. ಲಂಕೇಶರು ಪ್ರಜಾವಾಣಿ ಪತ್ರಿಕೆಗೆ ಬರೆಯುತ್ತಿದ್ದ ಕಾಲಂ ಒಂದರಿಂದಾಗಿ ನಮ್ಮ ರಾಜಕೀಯ ನಾಯಕರೆಲ್ಲರೂ ಜಾಗೃತರಾಗಿದ್ದನ್ನು ಕಂಡಿದ್ದೇವೆ. ಇನ್ನೂ ಅನೇಕ ಪತ್ರಕರ್ತರು ಕೇವಲ ತಮ್ಮ ಬರಹದ ಶಕ್ತಿಯಿಂದಲೇ ಸರ್ಕಾರಗಳನ್ನು ಇಳಿಸಿದ್ದನ್ನು, ಬೆಳೆಸಿದ್ದನ್ನು ನೋಡಿದ್ದೇವೆ. ಆದರೆ ಕೆಲವು ಆರ್ಥಿಕ ತಜ್ಞರು ಮತ್ತು ಮಾಧ್ಯಮ ವಿಶ್ಲೇಷಕರು ಮಾಧ್ಯಮದಿಂದ ಇಂತಹ ಬದಲಾವಣೆ ಆಗಿದೆ ಎಂದು ಒಪ್ಪುವುದಿಲ್ಲ. ವಾರೆನ್ ಸ್ಟೋರಬೆಲ್ ಮತ್ತು ಸೂಸನ್ ಕಾರುತರ್ಸ್ ಅವರು ಮಾಧ್ಯಮಗಳಿಂದ ಸರ್ಕಾರದಲ್ಲಿ ಬದಲಾವಣೆ ಆಗುವ ಬದಲಿಗೆ ಸರ್ಕಾರಗಳು ತಮಗೆ ಬೇಕಾದಂತೆ ಮಾಧ್ಯಮಗಳನ್ನು ಬಳಸಿಕೊಂಡು, ತಮಗೆ ಬೇಕಾದಂತಹ ಮಸೂದೆಗಳನ್ನು,

ಬಿ. ಸುರೇಶ

ಕಾನೂನುಗಳನ್ನು ಜಾರಿಗೆ ತರಲು ದಾರಿ ಮಾಡಿಕೊಳ್ಳುತ್ತಿವೆ ಎನ್ನುತ್ತಾರೆ. ಇದು ಭಾರತೀಯ ಸಂದರ್ಭದಲ್ಲಿಯೂ ಹಲವು ಬಾರಿ ಸತ್ಯವಾಗಿದೆ. ಒಂದು ಧರ್ಮದ ಹೆಸರಿನಲ್ಲಿ ಪ್ರಚಾರ ಮಾಡಿ ಅಧಿಕಾರ ಹಿಡಿಯಲು ಹೊರಟ ಪಕ್ಷಗಳು ಕೆಲವು ಮಾಧ್ಯಮಗಳನ್ನು ತಮಗೆ ಬೇಕಾದಂತೆ ಬಳಸಿಕೊಳ್ಳುತ್ತಿರುವುದನ್ನು ನಾವು ನೋಡುತ್ತಾ ಇದ್ದೇವೆ. ಅದರಿಂದಾಗಿ ಅನೇಕ ಮಸೂದೆಗಳು, ನಿಷೇಧಗಳು ಜಾರಿಗೆ ಬಂದಿರುವುದೂ ಉಂಟು. ಈ ಮತಧರ್ಮೀಯ ಶಕ್ತಿಗಳು ಕೇವಲ ಮಾಧ್ಯಮಗಳ ಮೇಲೆ ಹಿಡಿತ ಸಾಧಿಸಿರುವುದಲ್ಲದೆ ನಮ್ಮ ಮಕ್ಕಳ ಪಠ್ಯಪುಸ್ತಕಗಳಲ್ಲಿಯೂ ಮೆಲ್ಲಗೆ ನುಸುಳಿರುವ ಪರಿಣಾಮವಾಗಿ ಯಾರು ಯಾರನ್ನೋ ಮಹಾನ್ ದೇಶಭಕ್ತರು ಎಂದು ಹೊಗಳಿ, ಮಕ್ಕಳ ಮನಸ್ಸನ್ನೂ ತಿರುಚುವ ಪಠ್ಯಗಳೂ ಸೇರಿರುವುದು ಸಹ ವಿಷಾದದ ಸಂಗತಿ.

ಈ ಮಾಧ್ಯಮದ ಪರಿಣಾಮಕ್ಕೆ ಮತ್ತೊಂದು ಅಪರೂಪದ ಉದಾಹರಣೆಯಿದೆ. ವಾಹಿನಿಯೊಂದರಲ್ಲಿ ಪ್ರಸಾರವಾಗುತ್ತಿದ್ದ ಅಪರಾಧಗಳನ್ನು ಕುರಿತ ದೈನಿಕ ಕಾರ್ಯಕ್ರಮವೊಂದರಲ್ಲಿ ಶಾಲೆ ಹುಡುಗಿಯೊಬ್ಬಳ ಆತ್ಮಹತ್ಯೆಯ ವಿಷಯ ಕತೆಯಾಗಿ ಬರುತ್ತದೆ. ಆ ಹುಡುಗಿಯು ತಾನು ತೀರಿಕೊಳ್ಳುವಾಗ ಬರೆದ ಪತ್ರವನ್ನು ಈ ಕಾರ್ಯಕ್ರಮದವರು ಆ ಹುಡುಗಿ ತೀರಿಕೊಂಡ ದಿನದ ರಾತ್ರಿಯೇ ತೋರಿಸುತ್ತಾರೆ. ಆ ಪತ್ರದಲ್ಲಿ ಆ ಬಾಲಕಿಯು ತನ್ನ ಸಾವಿಗೆ ತನ್ನ ಮೇಷ್ಟರು ಕಾರಣ ಎಂದು ಬರೆದಿದ್ದುದನ್ನು ಪ್ರಧಾನ ವಿಷಯ ಮಾಡಿ ಕಾರ್ಯಕ್ರಮ ಪ್ರಸಾರವಾಗುತ್ತದೆ. ಅದರಿಂದಾಗಿ ಆ ಶಾಲೆಯವರು ಸದರಿ ಮೇಷ್ಟರನ್ನು ಕೆಲಸದಿಂದ ತೆಗೆಯಬೇಕೆ ಎಂಬ ನಿರ್ಧಾರಕ್ಕೆ ಬರುವುದರಲ್ಲಿ ಇರುತ್ತಾರೆ. ಅದೇ ವೇಳೆಗೆ ಆ ಶಾಲೆಯು ಇದ್ದ ಬಡಾವಣೆಯ ಜನ ಸದರಿ ಮೇಷ್ಟರನ್ನು ಆತನ ಮನೆಯಿಂದ ಶಾಲೆಯವರೆಗೂ ಬರಲಾಗದಂತೆ ಅವಮಾನಿಸಿ, ತಡೆಹಿಡಿಯುತ್ತಾರೆ. ವಾಸ್ತವವಾಗಿ ಆ ಹುಡುಗಿಗೆ ಆ ಮೇಷ್ಟರ ಬಗ್ಗೆ ಅತೀವ ಪ್ರೀತಿ ಇರುತ್ತದೆ. ಆ ಮಾತನ್ನು ಆ ಬಾಲಕಿ ಮೇಷ್ಟರ ಬಳಿ ಹೇಳಿದಾಗ ಸದರಿ ಮೇಷ್ಟರು ಬಾಲಕಿಗೆ ಬೈದಿರುತ್ತಾರೆ. ಅದೇ ಕಾರಣವಾಗಿ ಬಾಲಕಿ ಆತ್ಮಹತ್ಯೆಯನ್ನೂ ಮಾಡಿಕೊಂಡಿರುತ್ತಾಳೆ. ಆದರೆ ಮಾಧ್ಯಮದ ವರದಿಗಳಲ್ಲಿದ್ದ ದೃಷ್ಟಿಕೋನದಲ್ಲಿ ಖಳನಾಗಿದ್ದ ಸದರಿ ಮೇಷ್ಟರನ್ನು ಸುತ್ತಲ ಸಮಾಜ ತಾನೇ ಬಹಿಷ್ಕರಿಸಿದಂತೆ ಆಡುತ್ತದೆ. ಇದೆಲ್ಲದರಿಂದಾದ ಅವಮಾನ ತಾಳಲಾರದೆ ಆ ಮೇಷ್ಟರು ಸಹ ತನ್ನ ಕುಟುಂಬವರ್ಗದವರ ಜೊತೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಹೀಗೆ ಮಾಧ್ಯಮ ಒಂದು ತಪ್ಪು ದೃಷ್ಟಿಕೋನದಿಂದ ಆಡಿದ ಮಾತಿನಿಂದಾಗಿ ಅಮಾಯಕನೊಬ್ಬ ತನ್ನ ಪ್ರಾಣ ಕಳೆದುಕೊಂಡಿರುವುದೂ ಉಂಟು.

ಹಾಗೆಯೇ ಈಚೆಗೆ ತಮಿಳುನಾಡಿನ ಪೊಲೀಸ್ ಒಬ್ಬಾತ ತೀರಿಕೊಂಡಾಗ ಮಾಧ್ಯಮದವರು ತೋರಿಸಿದ ದೃಶ್ಯ ನೋಡಿದ ಜನ ನಮ್ಮ ಪೊಲೀಸ್ ವ್ಯವಸ್ಥೆಯ ಬಗ್ಗೆಯೇ ಅಸಹ್ಯಪಟ್ಟುಕೊಳ್ಳುವಂತೆ ಆದದ್ದೂ ಉಂಟು. ಇಂತಹ ಅನೇಕ ಉದಾಹರಣೆಗಳಿವೆ. ಮುದ್ರಣ ಮಾಧ್ಯಮದಲ್ಲಿಯಂತೂ ಅಪರೂಪದ ಸ್ಟೋರಿಗಳಿಂದ ಕೆಟ್ಟ ರಸ್ತೆಗಳು ಸರಿಯಾಗಿದ್ದಿದೆ. ಆಸ್ಪತ್ರೆ ಇಲ್ಲದ ಊರಿಗೆ ಹೊಸ ದವಾಖಾನೆ ಬಂದದ್ದಿದೆ. ಹಾಗೆಯೇ ಅನೇಕ ಚಾರಿತ್ರಿಕ ಮೌಲ್ಯದ ವಿವರಗಳು ಉಳಿಯಲು ಸಹ ಮಾಧ್ಯಮಗಳು ಕಾರಣವಾಗಿರುವುದನ್ನು ನೋಡಿದ್ದೇವೆ.

ಅಂತರ್ಜಾಲ ಮತ್ತು ಸಂಚಾರಿ ದೂರವಾಣಿಯ ಮಾಧ್ಯಮಗಳಿಂದಾಗಿಯೂ ಇಂತಹ ಅನೇಕ ಒಳಿತು ಮತ್ತು ಕೆಡುಕುಗಳು ಆಗಿರುವುದುಂಟು. ಸಂಚಾರಿ ದೂರವಾಣಿಯಲ್ಲಂತೂ ಯಾವುಯಾವುದೋ ಎಂಎಂಎಸ್ ವಿಡಿಯೋದಿಂದ ಯಾರ ಯಾರದೋ ಮರ್ಯಾದೆ ಹೋಗಿರುವುದುಂಟು. ಅಂತರ್ಜಾಲ ಪತ್ರಿಕೆಗಳಿಂದ ಸಹ ಇಂತಹ ಅಪರೂಪದ ಸ್ಟೋರಿಗಳು ಪ್ರತಿದಿನ ಹೊರಬೀಳುತ್ತಾ ಇರುತ್ತವೆ. ಹಾಗಾಗಿ ಈ ಎಲ್ಲ ಮಾಧ್ಯಮಗಳು ಅಂತಿಮವಾಗಿ ಅತ್ಯಂತ ಪ್ರಬಲ ಹಾಗೂ ಪರಿಣಾಮಕಾರಿಯಾದವು ಎಂಬುದಂತೂ ಸತ್ಯ.

ಆದರೆ ಇಂತಹ ಎಲ್ಲಾ ಸುದ್ದಿ (ಸ್ಟೋರಿ) ಗಳ ಹಿಂದೆ ಬೃಹತ್ ಹುನ್ನಾರಗಳೂ ಇರುತ್ತವೆ. ಯಾರನ್ನಾದರೂ ಗೆಲ್ಲಿಸಲು, ಸೋಲಿಸಲು, ಹಣಿಯಲು ಅಥವಾ ಮುಗಿಸಲು ಸಹ ಮಾಧ್ಯಮಗಳು ಬಳಕೆಯಾಗಿವೆ, ಆಗುತ್ತಿವೆ. ಇನ್ನು ನಮ್ಮ ಸಂಚಾರಿ ದೂರವಾಣಿಯ ತಮಾಷೆಗಳನ್ನಂತೂ ನಾವು ನಿತ್ಯ ಅನುಭವಿಸುತ್ತಾ ಇದ್ದೇವೆ. ಯಾವುದೋ ತಾರೀಖು ಯಾವುದೋ ದೇವರ ಬರ್ತ್‌ಡೇ ಎಂತಲೂ ಆ ಸಂದೇಶವನ್ನು ಪಡೆದವರು ಕನಿಷ್ಠ ಏಳು ಜನರಿಗೆ ಅದನ್ನು ಫಾರ್ವರ್ಡ್ ಮಾಡದಿದ್ದಲ್ಲಿ ರೌರವ ನರಕ ಕಾದಿದೆ ಎಂತಲೂ ಸಂದೇಶ ಬಂದುಬಿಡುತ್ತದೆ. ಇದರ ಹಿಂದೆ ಪ್ರತಿ ಸಂದೇಶಕ್ಕೆ ಇಂತಿಷ್ಟು ಎಂದು ಹಣ ಸಂಪಾದಿಸುವ ಮೊಬೈಲ್ ಕಂಪನಿಗಳು ಇರುತ್ತವೆ ಎಂಬುದನ್ನು ತಿಳಿಯದ ಅಮಾಯಕ ಜನ, ದೈವಭಕ್ತಿಯಿಂದ ನೂರಾರು ಜನಕ್ಕೆ ಅದೇ ಸಂದೇಶ ಕಳಿಸುತ್ತಾರೆ. ಈ ಮೂಲಕ ಒಂದು ಮಾಧ್ಯಮದ ಮಾಲೀಕ ಸದ್ದೇ ಇಲ್ಲದೆ ದುಡ್ಡನ್ನು ಜೇಬಿಗೆ ಇಳಿಸುತ್ತಾ ಇರುತ್ತಾನೆ.

ನಾವು ಗಮನಿಸಿರುವಂತೆ ಸರ್ಕಾರವೊಂದು ಭಾರೀ ಇಕ್ಕಟ್ಟಿನಲ್ಲಿ ಇರುವಾಗ, ಸರ್ಕಾರವನ್ನು ಬಚಾವ್ ಮಾಡಲೆಂಬಂತೆ ಹೊಸದೊಂದು ಸೆನ್ಸೇಷನ್ ಅನ್ನು ಮಾಧ್ಯಮಗಳ ಮೂಲಕ ಹೊರತೆಗೆಯಲಾಗುತ್ತದೆ. ಹಾಗಾಗಿ ಸರ್ಕಾರದಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದವರು ಮಾಡಿದ ದೊಡ್ಡ ತಪ್ಪುಗಳು ಮುಚ್ಚಿಹೋಗುತ್ತವೆ. ಜನ ಹೊಸ ಸೆನ್ಸೇಷನ್ ಹಿಂದೆ ಬಿದ್ದು ತಮ್ಮ ಬುಡಕ್ಕೆ ಬಾಂಬ್ ಇಟ್ಟವರನ್ನು ಮರೆತುಬಿಡುತ್ತಾರೆ. ಹೀಗೆ ಜನರನ್ನು ಒಂದು ವಿಷಯದಿಂದಲೇ ವಿಮುಖರನ್ನಾಗಿಸುವುದು ಮಾಧ್ಯಮದ ಶಕ್ತಿಯೂ ಹೌದು, ದೌರ್ಬಲ್ಯವೂ ಹೌದು.

ಇದೇ ಮಾಧ್ಯಮಗಳಲ್ಲಿ ಬಿತ್ತರವಾಗುವ ಅನೇಕ ಜಾಹೀರಾತುಗಳು ನೋಡುಗರ/ಕೇಳುಗರ/ಓದುಗರ ಮೇಲೆ ಮೂಡಿಸುವ ಪರಿಣಾಮದ ಫಲವಾಗಿ ಇಂದು ದೇಶದ ಬಹುತೇಕ ಪಟ್ಟಣಗಳಲ್ಲಿ ಮಲ್ಟಿಪ್ಲೆಕ್ಸ್ ಎಂಬ ಹೊಸ ಸಂಸ್ಕೃತಿ ಆರಂಭವಾಗಿದೆ. ಜನರ ಕೊಳ್ಳುಬಾಕತನ ಹೆಚ್ಚಾಗುತ್ತಿದೆ. ಸಾಮಾನ್ಯ ಜನ ಕೊಳ್ಳಲು ಬೇಕಾದಷ್ಟು ಆದಾಯ ಇಲ್ಲದೆ, ಆದರೆ ಮಾಧ್ಯಮಗಳ ಮೂಲಕ ಇಂತಹುದನ್ನು ಕೊಳ್ಳಲೇಬೇಕೆಂಬ ಒತ್ತಾಯಕ್ಕೆ ಬಿದ್ದು ಸಂಕಟಪಡುತ್ತಾರೆ. ಕಡೆಗೆ ಒತ್ತಡ ನಿವಾರಣೆಗಾಗಿ ಭ್ರಷ್ಟರೂ ಆಗುತ್ತಾರೆ. ಈ ದಿಶೆಯಲ್ಲಿ ಈಚೆಗೆ ನಾಡಿನಾದ್ಯಂತ ಹಬ್ಬಲಾದ ಜ್ವರವೊಂದರ ವಿವರವನ್ನು ಗಮನಿಸಬಹುದು. ಆ ಜ್ವರದ ಬಗ್ಗೆ ಮಾಧ್ಯಮಗಳು ಅದೆಂತಹ ಭೀತಿಯನ್ನು ಹುಟ್ಟಿಸಿದ್ದವೆಂದರೆ ಸಣ್ಣ ಜ್ವರ ಬಂದವನು ಸಹ ಭಯದಿಂದಲೇ ತೀರಿಕೊಳ್ಳಬಹುದಿತ್ತು. ಇದು ಔಷಧಿ ತಯಾರಕರ ಉದ್ಯಮವೇ ಸೃಷ್ಟಿಸಿದ 'ಸ್ಟೋರಿ' ಎಂಬುದು ತಿಳಿಯುವ ಹೊತ್ತಿಗೆ ಬಹುಕಾಲ ಆಗಿಹೋಗಿತ್ತು. ಇಂತಹ ಹಲವು ಉದಾಹರಣೆಗಳನ್ನು ನೀಡಬಹುದು. ಇಂತಲ್ಲಿ ಮಾಧ್ಯಮಗಳಿಗೆ ಎಚ್ಚರಿಕೆಯನ್ನು ಹೇಳುವುದಕ್ಕಿಂತ ಆ ಮಾಧ್ಯಮಗಳ ಅಫೀಮಿಗೆ ಸೋಲುತ್ತಿರುವ ಸಾಮಾನ್ಯ ಜನರನ್ನು ಎಚ್ಚರಿಸುವ ಜವಾಬ್ದಾರಿ ಇನ್ನಿತರ ಮಾಧ್ಯಮಗಳ ಮೇಲೆ ಇರುತ್ತದೆ. ಸುದ್ದಿಯನ್ನು ಮಾಧ್ಯಮದವರು ಕತೆ ಎನ್ನುತ್ತಾರೆ ಮತ್ತು ಆ ಎಲ್ಲಾ ಕತೆಗಳೂ ಸಹ ನಿಮ್ಮ ಆತಂಕ ಮಾತ್ರ ಹೆಚ್ಚಿಸುತ್ತವೆ ಎಂಬ ತಿಳುವಳಿಕೆ ಈ ನಾಡಿಗೆ ಬೇಗ ಸಿಗಬೇಕಿದೆ.

ಇದೆಲ್ಲದರ ಕಾರಣವಾಗಿ ಇಂದು ಮಾಧ್ಯಮ ಎಂಬ ಉದ್ಯಮದಲ್ಲಿ ಹಣ ಹೂಡುವವರ ಸಂಖ್ಯೆಯೂ ಜಾಸ್ತಿಯಾಗಿದೆ. ಆ ಉದ್ಯಮದಲ್ಲಿ ದುಡಿಯಲೆಂದು ಬರುತ್ತಿರುವ ಹೊಸ ತಲೆಮಾರಿನ ಸಂಖ್ಯೆಯೂ ದೊಡ್ಡದಿದೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಮಾಧ್ಯಮವನ್ನು ಕುರಿತ ತರಬೇತಿ ನೀಡುವ ಸಂಸ್ಥೆಗಳು ಎಷ್ಟು ಆರಂಭವಾಗಿವೆ ಎಂಬುದನ್ನು ಗಮನಿಸಿದರೆ ಮಾಧ್ಯಮದ ಪರಿಣಾಮ ನಾಡಿನ ಮೇಲೆ ಎಷ್ಟಾಗಿದೆ ಎಂಬುದು ತಿಳಿಯುತ್ತದೆ. ಅನೇಕ ವಿಶ್ವವಿದ್ಯಾಲಯಗಳೂ ಮಾಧ್ಯಮ ತರಬೇತಿಗಾಗಿ ವಿಭಾಗಗಳನ್ನು ತೆರೆದಿವೆ. ಈ ವಿಭಾಗಗಳಲ್ಲಿ ಸಿಬ್ಬಂದಿ ಮತ್ತು ಉಪನ್ಯಾಸಕರ ಕೊರತೆ ಇರಬಹುದು. ಆದರೆ ವಿದ್ಯಾರ್ಥಿಗಳ ಕೊರತೆ ಇಲ್ಲ. ಭಾರತದಲ್ಲಂತೂ ಸಂಪರ್ಕ ವಿಜ್ಞಾನ ಮತ್ತು ಗಣಕ



# ಮರವಾಗುವ :



**ನೆ**ತ್ತಿ ಮೇಲೆ, ಒತ್ತಿ! ಬೆಂಕಿ ಸುರಿಸಿ,
ಸುಡುವಾಗಲೂ ಸಿಂಬೆ ಸೆರಗ ಮುಚ್ಚಿ
ಸುಳಿಯ ರಕ್ಷಿಸಿ ಉಳಿಯುತ್ತೇನೆ
ನಿನ್ನ ಕಿಡಿಗಳ ಹೀರಿ ಬೆಳೆಯುತ್ತೇನೆ;
ನೀನು ಸುಟ್ಟಷ್ಟು ಚಿಗುರಿ;
ಹಕ್ಕಿಗೆ ಹಾಡಾಗಿ
ಜೀವಿಗೆ ನಲಿವಾಗಿ
ಗಾಳಿಗೆ ತಂಪಾಗಿ
ಹಣ್ಣಿಗೆ ರಸವಾಗಿ
ಬರಿಗೈ ಬೆತ್ತಲಾದರೂ
ಸುರಿಯದೆ ಬಿಡೆನು.
ಅಳಿದೆನೆಂದು ತಿಳಿವುದುಂಟೇ ?
ತಂಪಾಗಲಾರೆಯಾದರೆ
ಸವಾಲಾಗದೆ ಬಿಡೆನು.
ನಾ ಸವಾಲಾಗುವುದು ಬಿಡುವುದಿಲ್ಲ!
ನಾ ಇಲ್ಲದೆ ನಿನಗೆ ಸುಳಿಯಿಲ್ಲ; ನೆಲವಿಲ್ಲ;
ಬೀಜವೂ ಬರೀ ಭ್ರಮೆ !
ಚಿಮ್ಮುತ್ತೇನೆ ಆಕಾಶ ಭೂಮಿ
ಒಂದಾಗಿಸುವಂತೆ ಎಂಬ ಭ್ರಾಂತೇಕೆ ?
ಏಳು ಬಣ್ಣಗಳಿಗೆ ಬೆಲೆಯಿಲ್ಲ ನಾನಿಲ್ಲದೆ !
ನೀ ತೂರೆದರೆ ಹಮ್ಮು ಬಿಮ್ಮು
ಈಗಲೂ ತಾವಿದೆ ?
ಸೇರಬಹುದು, ಬೇವು ಬೆಲ್ಲದ ಮಿಳಿತ !
ಆರೋಗ್ಯಕ್ಕೆ ಹಿತವೆಂಬ ಮಾತು !
ನಾನು ನೀನೆಂಬುವುದರಲ್ಲಿ
ಪೂರ್ಣವಾಗುವ ಬನಿಯಿದೆಯಾ ! ಮತ್ತೇಕೆ ?
ನಾವಾಗುವ ಕ್ರಿಯೆಗೆ
ಬೇರಾಗುವ, ಮರವಾಗುವ
ಜೀವಜಾಲದ ಹಿತಕ್ಕೆ ಸೆಲೆಯಾಗುವ.

**ಆರ್. ಸುನಂದಮ್ಮ**
ಮಹಿಳಾ ಅಧ್ಯಯನ ವಿಭಾಗ, ಬಿಜಾಪುರ ಮಹಿಳಾ ವಿಶ್ವವಿದ್ಯಾಲಯ
ಬಿಜಾಪುರ - ೫೮೬ ೧೦೧

ತಂತ್ರಜ್ಞಾನ ಕುರಿತ ಜ್ಞಾನ ಶಾಖೆಗಳ ನಂತರ ಅತಿ ಹೆಚ್ಚು ವಿದ್ಯಾರ್ಥಿಗಳು ಸೇರುತ್ತಿರುವ ವಿಭಾಗ ಮಾಧ್ಯಮದ್ದು.

ಇದೇ ಸಮಯದಲ್ಲಿ ಮಾಧ್ಯಮದ ಪರಿಣಾಮವಾಗಿಯೇ ಅನೇಕ ರಾಜಕಾರಣಿಗಳು ಸಹ ತಮ್ಮದೇ ವಾಹಿನಿಗಳನ್ನು ಮತ್ತು ಪತ್ರಿಕೆಗಳನ್ನು ಆರಂಭಿಸಿದ್ದಾರೆ. ಇದು ಆಯಾ ರಾಜಕಾರಣಿಗಳು ಸಮೂಹದ ಮೇಲೆ ತನ್ನ ಪ್ರಭಾವ ಬೀರಬೇಕು ಅಥವಾ ತಮ್ಮ ಪಕ್ಷದ ಸಿದ್ಧಾಂತವು ಪ್ರಚಾರವಾಗಬೇಕು ಎಂದು ಆರಂಭಮಾಡಿದ್ದರೂ ಆಯಾ ಮಾಧ್ಯಮಗಳ ಪ್ರಭಾವವೂ ಭಿನ್ನವಾಗಿದೆ. ಸಮಾಜವು ಇಂತಹ ಪ್ರಚಾರವನ್ನು ನೇರವಾಗಿ ತಿರಸ್ಕರಿಸಿರುವುದೂ ಉಂಟು. ಕೆಲವೆಡೆಗಳಲ್ಲಿ ರಾಜಕೀಯ ನಾಯಕರ ಪ್ರಯತ್ನಕ್ಕೆ ಬೆಂಬಲ ದೊರಕಿರುವ ಉದಾಹರಣೆಯೂ ಉಂಟು. ಇನ್ನೂ ಕೆಲವು ಉದಾಹರಣೆಗಳಲ್ಲಿ ರಾಜಕೀಯ ನಾಯಕರು ನೇರವಾಗಿ ತಾವೇ ತೊಡಗಿಸಿಕೊಳ್ಳದೆ ತಮ್ಮ ಅಧಿಕಾರವನ್ನು ಮಾಧ್ಯಮಗಳ ಮೇಲೆ ಹೇರಿ ಅವುಗಳನ್ನು ನಡೆಸುತ್ತಿರುವುದೂ ಉಂಟು. ಕೆಲವು ಪಕ್ಷಗಳಂತೂ ಜನಪ್ರಿಯ ದೈನಿಕಗಳನ್ನೇ ತಮ್ಮ ತೆಕ್ಕೆಗೆ ತೆಗೆದುಕೊಂಡಿರುವುದೂ ಉಂಟು. ಇಂತಹ ಎಲ್ಲಾ ಪ್ರಯತ್ನಗಳ ಹಿಂದೆ ಮಾಧ್ಯಮದ ಶಕ್ತಿಯನ್ನು ಅರಿತ ಮಂದಿಯೇ ಇರುತ್ತಾರೆ. ಇದರಿಂದಾಗಿ ಮಾಹಿತಿ ಎಂಬುದು ಸಮೂಹಕ್ಕೆ ತಲುಪುವ ಮುನ್ನವೇ ಸಿದ್ಧಾಂತಗಳ ಪೋಷಾಕು ತೊಟ್ಟಿರುತ್ತದೆ. ಇದು ಮಾಧ್ಯಮ ಎಂಬ ಉದ್ಯಮದ ಮೇಲೆ ಮಾಡಿರುವ ಪರಿಣಾಮದಿಂದಾಗಿ ಇಂದು ಸುದ್ದಿ ಎಂಬುದನ್ನು ಕುರಿತು ಜನ ನಂಬಿಕೆ ಕಳೆದುಕೊಂಡಿರುವ ಸ್ಥಿತಿಯು ಸಹ ಬಂದಿದೆ.

ಮತ್ತೊಂದು ಪ್ರಮುಖ ಅಂಶವನ್ನು ಇಲ್ಲಿ ಹೇಳಬೇಕು. ಈ ನಾಡಿನ ಆರ್ಥಿಕ ಸಿದ್ಧಾಂತಗಳು ಬದಲಾಗುತ್ತಾ ಹೋದಂತೆ, ಕಳೆದ ಎರಡು ದಶಕಗಳಲ್ಲಿ ಹೋರಾಟಗಳು ಮತ್ತು ಸಂಘಟನೆಗಳ ಶಕ್ತಿಯೂ ಕಡಿಮೆಯಾಗುತ್ತಾ ಇದೆ. ಇದಕ್ಕೆ ಖಾಸಗೀಕರಣದ ಬೆನ್ನಲ್ಲೇ ಬಂದ ಗುತ್ತಿಗೆ ಆಧಾರಿತ ನೇಮಕಾತಿ ಪ್ರಮುಖ ಕಾರಣ. ಈ ಹಿನ್ನೆಲೆಯಲ್ಲಿ ಈ ನಾಡಿನಲ್ಲಿ ಆಗುವ ಯಾವುದೇ ಅನ್ಯಾಯವನ್ನು ಕುರಿತು ಮಾತಾಡುವ, ಆ ವಿವರದ ಇತಿಹಾಸ ಮತ್ತು ಮುಂದೆ ಆಗಬೇಕಾದ್ದೇನು ಎಂದು ಹೇಳುವ ಜವಾಬ್ದಾರಿ ಮಾಧ್ಯಮದ ಮೇಲಿದೆ. ಈ ಕೆಲಸವನ್ನು ನಮ್ಮ ಬಹುತೇಕ ಮುದ್ರಣ ಮಾಧ್ಯಮಗಳು ಸಮರ್ಥವಾಗಿಯೇ ನಿರ್ವಹಿಸುತ್ತಿವೆ.

ವಿದ್ಯುನ್ಮಾನ ಮಾಧ್ಯಮಗಳು ಈ ದಿಕ್ಕಲ್ಲಿ ಹಿಂದೆಬಿದ್ದಿಲ್ಲ. ಆದರೆ ಒಂದು ಸಮಸ್ಯೆಯ ವಿಶ್ಲೇಷಣೆಯ ದೃಷ್ಟಿಯಿಂದ ಮುದ್ರಣ ಮಾಧ್ಯಮದಲ್ಲಿ ದೊರೆಯುವ ಖಾಚಿತ್ಯ ವಿದ್ಯುನ್ಮಾನ ಮಾಧ್ಯಮದಲ್ಲಿ ದೊರೆಯುವುದು ಕಷ್ಟ. ಹೀಗಾಗಿ ನಮ್ಮಲ್ಲಿನ (ವಿಶೇಷವಾಗಿ ಕನ್ನಡದ) ಅನೇಕ ದೈನಿಕಗಳು ಮತ್ತು ಸಾಪ್ತಾಹಿಕಗಳು ಸಮಾಜ ಕಟ್ಟುವ ಹಾಗೂ ಕಾಪಾಡುವ ಕೆಲಸಗಳನ್ನು ಮಾಡುತ್ತಿವೆ. ಸರ್ಕಾರಗಳು ಮಾಡುವ ತಪ್ಪುಗಳನ್ನು, ಅವಘಡಗಳನ್ನು ಮಾತ್ರವೇ ಅಲ್ಲದೆ, ಸಾಮಾನ್ಯ ಜನರಿಗೆ ಎಚ್ಚರಿಕೆಗಳನ್ನು ನೀಡುವ ಹಿನ್ನೆಲೆಯಲ್ಲೂ ಸಾಕಷ್ಟು ಕೆಲಸಗಳನ್ನು ಮಾಧ್ಯಮಗಳು ಮಾಡುತ್ತಿವೆ. ಹೀಗಾಗಿ ನಾವು ಈ ಮಾಧ್ಯಮಗಳ ಋಣಾತ್ಮಕ-ಧನಾತ್ಮಕ ಅಂಶಗಳನ್ನು ಎಷ್ಟೇ ಹೇಳಿದರೂ ಸಧ್ಯಕ್ಕೆ ನಮ್ಮೆಲ್ಲರಿಗೂ ಹೋರಾಡಲು, ನಮ್ಮ ಸಮಸ್ಯೆಗಳಿಗೆ ಧ್ವನಿಯಾಗಲು ಇರುವ ಏಕೈಕ ಮಾರ್ಗ ಈ ಸಮೂಹ ಮಾಧ್ಯಮಗಳೇ ಆಗಿವೆ. ಈ ಮಾಧ್ಯಮಗಳ ಮೂಲಕ ಸಾಮಗ್ರಿ ಮಾರುವ ಅನೇಕ ಬಂಡವಾಳಶಾಹಿಗಳ ಜೊತೆಗೆ ನಾವೂ ನಮ್ಮ ಹಕ್ಕುಗಳನ್ನು-ಬೇಡಿಕೆಗಳನ್ನು-ಸಮಸ್ಯೆಗಳನ್ನು ಹೇಳಲು ಇರುವ ಪ್ರಬಲ ವೇದಿಕೆ ಮಾಧ್ಯಮವೇ ಆಗಿದೆ.

**ಮಾಧ್ಯಮದ ಸೈದ್ಧಾಂತಿಕ ನೆಲೆಗಳು ಮತ್ತು ಹೊಸ ಸಾಧ್ಯತೆಗಳು**

ಸುದ್ದಿ ಮಾಧ್ಯಮವನ್ನು ಕುರಿತ ಯಾವುದೇ ಮಾತು ಆ ಮಾಧ್ಯಮದ ಸಾಮಾಜಿಕ ಜವಾಬ್ದಾರಿ ಮತ್ತು ಅದರ ಉದ್ದಿಶ್ಯವನ್ನು ಕುರಿತೇ ಆಗಿರುತ್ತದೆ. ಯಾವುದೇ ಸಮಾಜ ಈ ಸುದ್ದಿ ಮಾಧ್ಯಮವು ವಸ್ತುನಿಷ್ಠವಾಗಿರಬೇಕೆಂದು ಬಯಸುವುದು ಸಹ ಸಹಜವೇ ಆಗಿದೆ. ಬಹುತೇಕ ಜನ ಸುದ್ದಿ ಎನ್ನುವುದು ವಸ್ತುನಿಷ್ಠವಾಗಿಯೇ ತಮ್ಮನ್ನು ತಲುಪುತ್ತದೆ ಎಂದು ಭಾವಿಸುತ್ತಾರಾದರೂ ಅದು ಹಾಗಿರುವುದಿಲ್ಲ ಎಂಬುದು ವಾಸ್ತವ. ಸುದ್ದಿ ರಚನೆಯಲ್ಲಿ ಮತ್ತು ಹಂಚಿಕೆಯಲ್ಲಿ ವಸ್ತುನಿಷ್ಠತೆ ಇರಬೇಕೆಂಬುದು ನಿರಂತರವಾಗಿ ಚರ್ಚೆಯಾಗುತ್ತಿರುವ ವಿಷಯವೂ ಹೌದು. ಸೂಸನ್ ಕಾರುತರ್ ಎಂಬ ಪ್ರಖ್ಯಾತ ಮಾಧ್ಯಮ ವಿಶ್ಲೇಷಕಿ ಈ ವಿಷಯ ಕುರಿತು ಮಾತಾಡುತ್ತಾ, ಸುದ್ದಿ ಎಂಬುದು ಯಾವತ್ತಿಗೂ ಮೌಲ್ಯರಹಿತವಾಗಿ ಹೊರಬರುವುದಿಲ್ಲ ಮತ್ತು ಆ ಸುದ್ದಿಯು ಯಾವುದೋ ಒಬ್ಬ ವ್ಯಕ್ತಿಯ ದೃಷ್ಟಿಕೋನದಿಂದಲೇ ರಚನೆಯಾಗುತ್ತದೆ. ಅದನ್ನು ಎಂದಿಗೂ ತಪ್ಪಿಸಲಾಗದು ಎನ್ನುತ್ತಾಳೆ. ಈ ವಿಷಯವೇ ಇಂದು ಜಗತ್ತಿನ ಎಲ್ಲಾ ಮಾಧ್ಯಮ ವಿಶ್ಲೇಷಕರನ್ನು ಮತ್ತು ಉಪನ್ಯಾಸಕರನ್ನು ಕಾಡುತ್ತಿದೆ.

ಯಾವುದು ಸುದ್ದಿಯಾಗಬೇಕು, ಹೇಗೆ ಸುದ್ದಿಯಾಗಬೇಕು ಮತ್ತು ಏಕೆ ಸುದ್ದಿಯಾಗಬೇಕು ಎಂಬ ತೀರ್ಮಾನವೇ ಮೌಲ್ಯಾಧಾರಿತವಾದುದು. ಸುದ್ದಿ ತಯಾರಕರ ಬಳಗದ ನಡುವೆಯಂತೂ ಸುದ್ದಿ ಎಂಬುದು ದೈನಂದಿನ ಬದುಕಿಗಿಂತ ಭಿನ್ನವಾದುದು ಎಂಬ ನಂಬಿಕೆ ಇದೆ. ಆ ಸುದ್ದಿಯು ಒಬ್ಬ ಸಾಮಾನ್ಯನ ಹುಬ್ಬೇರಿಸುವಂತೆ, ಆತ ಚಿಂತಿಸುವಂತೆ, ತನ್ನ ದೈನಂದಿನ ಬದುಕುವ ರೀತಿಗೆ ಹೊಸ ಬದಲಾವಣೆ ತರುವಂತೆ, ತನಗೆ ಅಗತ್ಯವಾದುದನ್ನು ಆಯ್ದುಕೊಳ್ಳುವಂತೆ ಇರಬೇಕು ಎಂಬ ಮಾತಿದೆ. ಹೀಗಾಗಿಯೇ ಎರಡು ದೇಶಗಳ ನಡುವಣ ಯುದ್ಧಕ್ಕೆ ಸುದ್ದಿಯಾಗಿ ಸಿಗುವ ಪ್ರಾಮುಖ್ಯ ಎರಡು ಬಣಗಳ ನಡುವಣ ಬೀದಿ ಜಗಳಕ್ಕೆ ಸಿಗುವುದಿಲ್ಲ. ಎರಡು ಕೋಮುಗಳ ನಡುವಣ ಗಲಭೆಗೆ ಸಿಗುವ ಪ್ರಾಮುಖ್ಯವು ಎರಡು ಬೀದಿ ಗುಂಪಿನ ಕಿತ್ತಾಟಕ್ಕೆ ಸಿಗುವುದಿಲ್ಲ. ಹೀಗಾಗಿಯೇ ಸುದ್ದಿ ರಚಿಸುವಾತ ಒಂದು ಸುದ್ದಿಯನ್ನು ಆಯ್ಕೆ ಮಾಡಿಕೊಳ್ಳುವಾಗ ಈ ಕೆಲವು ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಾನೆ. ಆ ಜಗಳ / ಯುದ್ಧ / ಕಿತ್ತಾಟದಲ್ಲಿ ನಮ್ಮವರು ಇದ್ದಾರೆಯೇ ? ಅವರಲ್ಲಿ ಎಷ್ಟು ಜನ ತೀರಿಕೊಂಡಿದ್ದಾರೆ ? ಆ ಸುದ್ದಿಯ ಸ್ಥಿರಚಿತ್ರ ಇದೆಯೆ ? ಸ್ಥಿರಚಿತ್ರ ತೆಗೆಯುವವರು ತೀರಿಕೊಂಡವರ ಫೋಟೋ ಸರಿಯಾಗಿ ತೆಗೆದಿದ್ದಾರೆಯೇ ? ವರದಿಗಾರರಿಗೆ ಆ ಘಟನೆಯ ಸಂಪೂರ್ಣ ಮಾಹಿತಿ ಸಿಕ್ಕಿದೆಯೇ? ಆ ವರದಿಗಾರನಿಗೂ 'ನಮ್ಮ' ಜಗಳನಿರತ ಗುಂಪಿಗೂ ಇರುವ ಸಂಬಂಧ ಎಷ್ಟು ದೂರದ್ದು?... ಹೀಗೇ ಇನ್ನೂ ಅನೇಕ ಪ್ರಶ್ನೆಗಳಿವೆ.




ಒಟ್ಟಾರೆಯಾಗಿ ಈ ಸುದ್ದಿಗಳು ಘಟನೆಗಳನ್ನು ಮಾತ್ರ ತಿಳಿಸುತ್ತವೆ. ಆ ಘಟನೆಯ ಹುಟ್ಟಿಗೆ ಕಾರಣವಾದ 'ಪ್ರಾಸೆಸ್' ಸುದ್ದಿ ಬರೆಯುವವನಿಗೆ ಮುಖ್ಯವಲ್ಲ. ಇಂತಹ ವರದಿಗಾರಿಕೆಯಿಂದಾಗಿಯೇ ಅನೇಕ ಬಾರಿ ವಿನಾಕಾರಣ ನಡೆದ ಸಣ್ಣಪುಟ್ಟ ಘಟನೆಗಳು ಕೇವಲ ಉತ್ತಮ ಫೋಟೋ/ಉತ್ತಮ ವಿಷುಯಲ್ಸ್ ಇದೆ ಎಂಬ ಕಾರಣಕ್ಕೆ ಸುದ್ದಿಯಾಗಿರುವುದೂ ಉಂಟು. ಈ ಹಿನ್ನೆಲೆಯಲ್ಲಿ ಜಾಗತಿಕವಾಗಿ ಸುದ್ದಿ ಮಾಧ್ಯಮಗಳು ಹೇಗಿರಬೇಕು, ಹೇಗೆ ಕೆಲಸ ಮಾಡಬೇಕು ಎಂಬ ಹೊಸ ವಾದ ಆರಂಭವಾಗಿದೆ. ಅವುಗಳಲ್ಲಿ ಎರಡು ವಾದಗಳು ವಿಶಿಷ್ಟವಾದುವು. ಒಂದು : ಶಾಂತಿಗಾಗಿ ಮಾಧ್ಯಮ. ಮತ್ತೊಂದು : ಸಾರ್ವಜನಿಕರ ಹಿತಕ್ಕಾಗಿ ಮಾಧ್ಯಮ. ಶಾಂತಿಗಾಗಿ ಮಾಧ್ಯಮ ಎನ್ನುವವರು ಆ ಮಾಧ್ಯಮವು ತನ್ನೆಲ್ಲಾ ಸುದ್ದಿ ರಚನೆಯನ್ನು ಜಾಗತಿಕವಾಗಿ ಶಾಂತಿಗಾಗಿಯೇ ರಚಿಸಬೇಕು ಮತ್ತು ಎರಡು ಬಣಗಳ ನಡುವಿನ ಭಿನ್ನಾಭಿಪ್ರಾಯವನ್ನು ಸ್ವತಃ ಮಾಧ್ಯಮದಲ್ಲಿ ತೊಡಗಿದವರೇ ಪರಿಹರಿಸಲು ಯತ್ನಿಸಬೇಕು ಎನ್ನುತ್ತದೆ. ಹೀಗಾಗಿ ಈ ಬಗೆಯ ಸುದ್ದಿ ಮಾಧ್ಯಮವು ಘಟನೆಯ ವರದಿಯಲ್ಲಿ ಮಾತ್ರ ತೊಡಗದೆ ಅವಘಡವನ್ನು ತಪ್ಪಿಸುವುದಕ್ಕೂ ಕಾರಣವಾಗಬೇಕಾಗುತ್ತದೆ. ಅಂತಹದೊಂದು ವಸ್ತುನಿಷ್ಠ ಸ್ಥಿತಿಯು ಆ 'ರಾಮರಾಜ್ಯ'ದಲ್ಲಿಯೂ ಸಾಧ್ಯವಿಲ್ಲ ಎಂಬುದು ಗೊತ್ತಿರುವುದರಿಂದ ಇಂತಹ ಮಾಧ್ಯಮ ಹುಟ್ಟಿದರೂ ಬಹುಕಾಲ ಬದುಕದು.

ಇನ್ನು 'ಸಾರ್ವಜನಿಕರ ಹಿತಕ್ಕಾಗಿ ಮಾಧ್ಯಮ'. ಇಲ್ಲಿ ಸುದ್ದಿ ಮಾಧ್ಯಮವು ಒಂದು ಸಮಾಜದ ಹಿತಕ್ಕಾಗಿಯೇ ದುಡಿಯುತ್ತಾ, ಸಮಾಜದ ಅಗತ್ಯವನ್ನು ಪೂರೈಸಲು ಬೇಕಾದ ವಿವರಗಳನ್ನು ಗಮನಿಸುತ್ತಾ, ಅಂತಹ ಸಾಮಾಜಿಕ ಕೆಲಸಗಳ ಆರಂಭದಿಂದ ಅಂತ್ಯದವರೆಗೆ ಅವುಗಳ ಜೊತೆಗಿದ್ದು, ಸಾರ್ವಜನಿಕರಿಗೆ ಆ ಕೆಲಸದ ಲೆಕ್ಕವನ್ನು ನೀಡುವಂತಹದು. ಇಂತಹ ಮಾಧ್ಯಮವು ಭಾಗಶಃ ನಮ್ಮಲ್ಲಿದೆ. ಒಂದು ಹೊಸ ಯೋಜನೆಯನ್ನು ಥಟ್ಟನೆ ವರದಿ ಮಾಡಲಾಗುತ್ತದೆ. ಅಲ್ಲಿ ಆಗಿರಬಹುದಾದ ಅವ್ಯವಸ್ಥೆಯನ್ನೂ ಥಟ್ಟನೆ ವರದಿ ಮಾಡಲಾಗುತ್ತದೆ. ಆದರೆ ಅಲ್ಲಿ ಭ್ರಷ್ಟತೆ ಹೇಗಾಯಿತು, ಅದಕ್ಕೆ ಕಾರಣರಾರು ಎಂಬ ವಿವರ ನಮ್ಮ ಮಾಧ್ಯಮ ಪ್ರತಿನಿಧಿಗಳು ಅದಾಗಲೇ ನಾವು ಪಟ್ಟಿ ಮಾಡಿಕೊಂಡ ಪ್ರಶ್ನೆಗಳ ಅಡಿಯಲ್ಲಿ ಬರುವುದಿಲ್ಲವಾದ್ದರಿಂದ, 'ಸೇತುವೆ ಬಿರುಕು ಬಿಟ್ಟಿದೆ' ಎಂಬ ವರದಿಯಲ್ಲಿ ಆ ಬಿರುಕಿಗೆ ಕಾರಣವಾದ ವ್ಯಕ್ತಿ ಮತ್ತು ವ್ಯವಸ್ಥೆಯ ವಿವರ ಬರುವುದಿಲ್ಲ. ಇದು ಆಗಬೇಕಾದ ಕೆಲಸ ಎಂದು ಸಾರ್ವಜನಿಕ ಹಿತಕ್ಕಾಗಿ ಮಾಧ್ಯಮ ಎಂದು ಹೇಳುವವರು ಬಯಸುತ್ತಾರೆ. ಆದರೆ ಅಂತಹದೊಂದು ಮಾಧ್ಯಮವು ಬಹುಕಾಲ ವಸ್ತುನಿಷ್ಠವಾಗಿ ಇರುವುದಿಲ್ಲ ಎಂಬುದು ಅದಾಗಲೇ ಸಾಬೀತಾಗಿದೆ. ಏಕೆಂದರೆ ಈ ನಮ್ಮ ಸಮಕಾಲೀನ ಸಮಾಜ ಎಂಬುದು ಸಣ್ಣ ಬುದ್ಧಿವಂತರ ಮತ್ತು ಬಂಡವಾಳಶಾಹಿಗಳ ಗುಂಪು ಬೃಹತ್ತಾದ ಜನಮಾನಸದ ಮೇಲೆ ನಡೆಸುವ ಅಧಿಕಾರ. ಇಂತಲ್ಲಿ ಆ ಸಣ್ಣ ಬುದ್ಧಿವಂತರ ಗುಂಪು ತನ್ನ ಹಿತವನ್ನಷ್ಟೇ ಕಾಯುತ್ತದೆಯೇ ಹೊರತು ಸಾರ್ವಜನಿಕರಿಗೆಲ್ಲಾ ಹಿತವಾಗುವುದು ಅದಕ್ಕೆ ಬೇಕಾಗಿಯೇ ಇಲ್ಲ. ಹೀಗಾಗಿ 'ಸಾರ್ವಜನಿಕರ ಹಿತಕ್ಕಾಗಿ ಸುದ್ದಿ ಮಾಧ್ಯಮ' ಎನ್ನುವುದು ಸಹ ಕನಸಿನಲ್ಲಿ ಮಾತ್ರ ಇರುವಂತಹದು.

ಮಾಧ್ಯಮದ ಮೂಲಭೂತ ಕೆಲಸ ಏನು ಎಂಬುದನ್ನು ಗುರುತಿಸುತ್ತಾ ಜೋ ಕಿಂಗ್‌ಸ್ಲೇ ಹೀಗೆ ಒಂದು ಪಟ್ಟಿಯನ್ನು ಮಾಡುತ್ತಾನೆ : (೧) ಒಂದು ಪರಿಸರದ ಕಾವಲು, (೨) ಸಾಮುದಾಯಿಕ ಸಂಬಂಧಗಳನ್ನು ಗುರುತಿಸುವುದು, (೩) ಆ ಪರಿಸರಕ್ಕೂ ನಮ್ಮ ಸನಾತನೀಯ ವಿವರಗಳಿಗೂ ಇರುವ ಕೊಂಡಿಗಳನ್ನು ತಿಳಿಸುವುದು, (೪) ಸಮುದಾಯಕ್ಕೆ ಆ ಎಲ್ಲಾ ವಿವರಗಳನ್ನು ಕುರಿತು ತಿಳಿಸುವುದು ಮತ್ತು ಸಮಾಜವನ್ನು ಮಾಹಿತಿಯುಳ್ಳವರ ಘಟಕವಾಗಿ ಮಾಡುವುದು, (೫) ಮಾಹಿತಿಯನ್ನು ಮನರಂಜನಾತ್ಮಕವಾಗಿ ನೀಡುವುದು, (೬) ಸಮಾಜವನ್ನು ಒಂದು ಚಿಂತನೆಯ ಸಮುದಾಯವಾಗಿ ಸಂಘಟಿಸುವುದು. ಕಿಂಗ್‌ಸ್ಲೇನ ಈ ಎಲ್ಲಾ ಮಾತುಗಳನ್ನು ಬಹುತೇಕ ನಮ್ಮ ಮಾಧ್ಯಮಗಳು ಮಾಡುತ್ತಲೆ ಇವೆಯಾದರೂ ಇದೇ ವಿವರಗಳನ್ನು ತಮ್ಮ ತಮ್ಮ ರಾಜಕೀಯ ಅಜೆಂಡಾಗಳಿಗೆ ಆಯಾ ಮಾಧ್ಯಮ ನಡೆಸುವ ಉದ್ಯಮಪತಿಗಳು ಬಳಸಿಕೊಳ್ಳುತ್ತಿದ್ದಾರೆ ಎಂಬುದಂತೂ ಸತ್ಯ. ಹೀಗಾಗಿ ಸುದ್ದಿ ಮಾಧ್ಯಮಗಳು ಎಂಬುವು ಮೇಲ್ನೋಟಕ್ಕೆ ವಸ್ತುನಿಷ್ಠವಾಗಿ ಮತ್ತು ಪಕ್ಷಾತೀತವಾಗಿ ಕಂಡರೂ ಎಲ್ಲಾ ಮಾಧ್ಯಮಗಳಿಗೂ ತಮ್ಮದೇ ಹಿಡನ್ ಅಜೆಂಡಾಗಳಿವೆ. ಈ ಹಿನ್ನೆಲೆಯಲ್ಲಿ ನೋಮ್ ಚೋಮ್‌ಸ್ಕಿ ತನ್ನ 'ವಾಟ್ ಮೇಕ್ಸ್ ಮೇನ್‌ಸ್ಟ್ರೀಮ್ ಮೀಡಿಯ ಮೇನ್‌ಸ್ಟ್ರೀಮ್ ?' ಎಂಬ ಲೇಖನದಲ್ಲಿ ಚರ್ಚಿಸುವಾಗ ಸಾಮಾಜವನ್ನು ಸದಾಕಾಲ ಅಧಿಕಾರ ನಡೆಸುವವರತ್ತ ಮುಖ ಮಾಡಿದ ನಿಷ್ಕ್ರಿಯ ವೀಕ್ಷಕರನ್ನಾಗಿಸುವ ಮತ್ತು ಸಮಾಜವು ಎಂದಿಗೂ ಆ ಅಧಿಕಾರಸ್ಥರ ಪಕ್ಕಕ್ಕೆ ಹಾರದ ಹಾಗೆ ನೋಡಿಕೊಳ್ಳುವುದೇ ಇಂದಿನ ಮಾಧ್ಯಮಗಳ ಕೆಲಸವಾಗಿದೆ ಎಂಬ ಮಾತು ನಮ್ಮೆಲ್ಲರನ್ನು ಎಚ್ಚರಗೊಳಿಸಬೇಕಿದೆ. ಜಗತ್ತಿನಾದ್ಯಂತ ಇರುವ ಕುಟುಂಬ ಮತ್ತು ಬಣಗಳ ನಡುವೆ ಅಧಿಕಾರ ಉಳಿಯಬೇಕೆಂಬ ರಾಜಕಾರಣವನ್ನೇ ನಾವು ತಪ್ಪಿಸಿ, ಹೊಸದೊಂದು ಸಮುದಾಯದ ಪಾಲುದಾರಿಕೆಯುಳ್ಳ ಮಾಧ್ಯಮವನ್ನು ರೂಪಿಸುವವರೆಗೆ ನಾವು ಬಯಸುವ ಆದರ್ಶಮಯವಾದ ಮಾಧ್ಯಮ ದೊರೆಯುವುದಿಲ್ಲ. ಅಕಸ್ಮಾತ್ ನಾವು ಗೆದ್ದು ನಮಗೆ ಬೇಕಾದ್ದನ್ನು ರೂಪಿಸಿದರೂ ಈ 'ನಾವು' ಎನ್ನುವ ಶಕ್ತಿ ಎಷ್ಟು ಕಾಲ ಭ್ರಷ್ಟವಾಗದೆ ಉಳಿಯುತ್ತದೆ ಎಂಬುದು ಕೂಡ ನಮ್ಮೆದುರಿಗಿರುವ ಬೃಹತ್ ಪ್ರಶ್ನೆ.

ಕಳೆದ ಎರಡು ದಶಕದಲ್ಲಿ ನಾವು ಆದರ್ಶ ವ್ಯಕ್ತಿತ್ವ ಎಂದುಕೊಂಡಿದ್ದವರೆಲ್ಲರನ್ನೂ ಆ ಅಧಿಕಾರದ ಬಣವು ಕೊಂಡುಕೊಂಡಿದೆ ಮತ್ತು ನಮ್ಮೆದುರಿಗೆ ನಮ್ಮ ಆದರ್ಶಗಳು ಕೇವಲ ಆದರ್ಶವಾಗಿ ಮಾತ್ರ ಉಳಿದುದನ್ನು ನಾವು ನೋಡಿದ್ದೇವೆ. ನಮ್ಮ ನಾಯಕರು ಸಹ ಆತ್ಮಸಾಕ್ಷಿಗಳನ್ನು ಕೊಂದುಕೊಂಡು ಅಧಿಕಾರದಲ್ಲಿ ಉಳಿಯುವ ಪ್ರಯತ್ನವನ್ನು ಮಾಡುತ್ತಲೇ ಹುಚ್ಚರಂತಾಡುತ್ತಿರುವುದನ್ನೂ ನಾವು ನೋಡುತ್ತಿದ್ದೇವೆ. ಈ ಹಿನ್ನೆಲೆಯಲ್ಲಿ 'ಸಮಾಜ ಮತ್ತು ಸಮೂಹ ಮಾಧ್ಯಮ' ಎಂಬುದು ನಾವು ಬಯಸಿದಂತೆ ಇಲ್ಲ ಎಂಬುದು ಸತ್ಯವಾದರೂ ನಮ್ಮ ಬಯಕೆಯಂತೆ ಅದನ್ನು ರೂಪಿಸುವುದು ಮತ್ತು ಹಾಗೆಯೇ ಅದನ್ನು ಉಳಿಸಿಕೊಳ್ಳುವುದು ಕಷ್ಟ. ಹೀಗಾಗಿ ನಾವು ಆಶಾದಾಯಕರಾಗಿ ಉಳಿಯೋಣ. ನಮ್ಮ ಆಸೆಗಳು ಈಡೇರುವುದಿಲ್ಲ ಎಂಬುದು ತಿಳಿದಿದ್ದರೂ ಕನಸುವುದನ್ನು ನಿಲ್ಲಿಸದೆ ಉಳಿಯೋಣ. ಕನಸುಗಳತ್ತಲೇ ಬದುಕೋಣ.

ಬಿ. ಸುರೇಶ
ನಂ. ೧೧೬೨, ೨೨ನೇ ಅಡ್ಡರಸ್ತೆ, ೨೩ನೇ ಮುಖ್ಯರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ಎಂ. ಡಿ. ಗೋಗೇರಿ



# ಹೊಳಿಯಾಗ ಹುಣಸಿ ಹಣ್ಣು ತೊಳದಂಗಾತು

"ರೀ, ಏನ ಮಾಡಲಿಕ್ಕೆ ಹತ್ತೀರಿ? ಪ್ರತಿದಿನ ಫೋಟೋ ಹೊಂದಿಸಿಡೋದು, ಅದರ ಬುಡಕ್ಕ ಏನೇನೊ ಬರೀತಾ ಇರೋದು ಮಾಡ್ತಿರಲ್ಲ, ನಾನೂ ನೋಡಲಿಕ್ಕೆ ಹತ್ತಿ ಒಂದು ತಿಂಗಳಾತು. ಯಾವುದೇ ಒಂದು ವಿಷಯ ತಲಿಗೆ ಬಹಳ ಹಚ್ಚಿಕೊಬಾರದು ಅಂತಾ ಡಾಕ್ಟರು ಹೇಳಿದ್ದು ಮರುತ್ತಬಿಟ್ರೇನು? ಅದರಾಗ ಈ ನವ್ಹಂಬರ ತಿಂಗಳು ಯಾಕ ಬರುತ್ತೋ ಅಂತೀನಿ."

"ಹಾಗೆ ವಿಚಾರಿಸಬೇಡ ಗಂಗು, ಪ್ರಶಸ್ತಿಯ ಗುಂಗು ಹೊಕ್ರೆ ಆಗೋದೆ ಹೀಗೆ. ಅದಕ್ಕೇ ಒಬ್ಬ ಕವಿ ಕನಕದಾಸರನ್ನು ಸ್ಮರಿಸಿ ಹೀಗೆ ಹಾಡ್ತಾನೆ :

*ಎಲ್ಲಾರು ಮಾಡುವದು ಮಾಲೆಗಾಗಿ ಮತ್ತೆ ಶಾಲಿಗಾಗಿ*
*ನಾನು ಇದಕೆ ಹೊರತಾಗಿಲ್ಲ ಯಾರೂ ಇದಕೆ*
*ಹೊರತಾಗಿಲ್ಲ*
*ಪ್ರಶಸ್ತಿಯ ಹುಚ್ಚು ಹೊಕ್ರೆ ಹೀಗೆ ಎಲ್ಲ ನಡೆಯೋದು*
*ಹೀಗೆ ಎಲ್ಲ"*

"ಅಲ್ರಿ, ನಿಮಗ ಪ್ರಶಸ್ತಿಯ ಹುಚ್ಚು ಯಾಕೆ ಇಷ್ಟೊಂದು ಹೊಕ್ಕಿತೊ ಏನೊ! ಓಣಿಯೊಳಗ ಗಣೇಶ ಸಮಿತಿಯವರ ದುಂಬಾಲುಬಿದ್ದು ಓಣಿ ಪ್ರಶಸ್ತಿ ಪಡೆದಿರಿ. ತಾಲೂಕಾ ಸಮಿತಿಯವರ ಕೈಕಾಲು ಕಟ್ಟಿ ತಾಲೂಕಾ ಪ್ರಶಸ್ತಿ ಪಡೆದಿರಿ. ಜಿಲ್ಲಾ ಸಮಿತಿಯವರ ಎಲ್ಲಾ ಚಟಗಳಿಗೂ ಸಾವಿರಾರು ರೂಪಾಯಿ ಖರ್ಚು ಮಾಡಿ ಹಾರ ಹಾಕಿಸಿಕೊಂಡು ಪ್ರಶಸ್ತಿ ವಿಜೇತ ಅಂತಾ ಪೇಪರಿನೊಳಗ ಜಾಹೀರಾತು ಹಾಕಿಸಿಕೊಂಡಿರಿ. ಇನ್ನೂ ನಿಮಗ ಪ್ರಶಸ್ತಿ ಹುಚ್ಚು ಬಿಡತಾ ಇಲ್ಲವಲ್ಲ ಅಂತೀನಿ."

"ಗಂಗು, ಪ್ರಶಸ್ತಿ ರುಚಿ ನೀನು ಕಂಡಿಲ್ಲ. ಸಾವಿರಾರು ಜನರ ಸಭಾದಾಗ ನಮ್ಮನ್ನ ಕರೆದು ಮಹಾರಾಜಾ ಕುರ್ಚಿ ಮೇಲೆ ಕೂಡ್ರಿಸಿ ಮಾಲೆ ಹಾಕ್ತಾರೆ. ಶಾಲು ಹೊದಿಸ್ತಾರೆ. ನಾವು ಮಾಡಿದ ಅಲ್ಪ ಸ್ವಲ್ಪ ಸಾಧನೆಗಳನ್ನು ಉಪ್ಪು ಕಾರ ಹಚ್ಚಿ ಮೈಕಿನಲ್ಲಿ ಹೊಗಳಿ ಹೊಗಳಿ ಹಿಮಾಲಯ ಕಿತ್ತಿಟ್ಟ ಮಹಾನುಭಾವ, ಮಹಾ ಚೇತನ ಅಂತಾ ಕೊಂಡಾಡ್ತಾರೆ. ಕೈಗೆ ಹಣ್ಣಿನ ಬುಟ್ಟಿ ತಾಟು ಕೊಡ್ತಾರೆ. ಆಗ ನಮ್ಮ ಮುಂದೆ ಟಿ.ವ್ಹಿ. ಅವರು ಪೇಪರಿನವರು ಮುಗಿಬಿದ್ದು ಫೋಟೋ ತೊಕ್ಕೊಳ್ತಾರೆ. ಸತ್ಕಾರ ಮಾಡಲಿಕ್ಕೆ ಮಂತ್ರಿಗಳನ್ನು ಕರೆಸ್ತಾರೆ. ಸ್ವಾಮಿಗಳು ಸಾನ್ನಿಧ್ಯ ವಹಿಸಿರ್ತಾರೆ. ನಮ್ಮನ್ನ ಹೊಗಳುವುದನ್ನು ಕೇಳಿ ಸ್ವಾಮೀಜಿಯವರು ತಮ್ಮ ಮಠದಲ್ಲಿ ಸನ್ಮಾನ ಮಾಡುವುದಕ್ಕೆ ಆಮಂತ್ರಿಸಲು ತಮ್ಮ ಸೇವಕರಿಗೆ ನಮ್ಮ ಫೋನು ನಂಬರು ಬರೆದುಕೊಳ್ಳಲು ಸನ್ನೆ ಮಾಡಿ ತಿಳಿಸುತ್ತಾರೆ. ಇಂಥ ಭಾಗ್ಯ ಎಲ್ಲರಿಗೂ ಬರೋದಿಲ್ಲ. ಅದಕ್ಕ ನಮ್ಮ ಪ್ರಯತ್ನಾನೂ ಬೇಕು. ಅದಕ್ಕೇನೆ ಕವಿ ಹಾಡ್ತಾನೆ:

*ಪ್ರಶಸ್ತಿ ಕೊಡೊ ವ್ಯಕ್ತಿ ಕರೆಸಿ ತಂತ್ರ ಹೂಡಿ ಮಂತ್ರ ಹಾಕಿ*
*ಜಂತರ ಲಾಗ ಒಗೆಯೋದು ಮಾಲೆಗಾಗಿ ಮತ್ತೆ*
*ಶಾಲಿಗಾಗಿ*
*ಸಿಕ್ಕಾಪಟ್ಟೆ ಹೊಗಳೋದು ಸ್ವಾಭಿಮಾನ ಬಿಡೋದು*
*ಬಿಲ್ಲಿನಂತೆ ಮಣಿಯೋದು ಮಾಲೆಗಾಗಿ ಪ್ರಶಸ್ತಿ*
*ಪಡೆಯೊಕಾಗಿ.*

"ಗಂಗು, ಈ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಗ್ಯಾರಂಟಿ ಬರ್ತಿತ್ತು. ಹಾಗೆ ಪ್ರಯತ್ನ ಮಾಡಿದ್ದೆ. ಆದರೆ ಏನು ಮಾಡೋದು, ನೆರೆಹಾವಳಿ ಬಂದು ಹೊಳಿಯಾಗ ಹುಣಸಿ ಹಣ್ಣು ತೊಳದಂಗಾತು." "ನೋಡ್ರಿ, ನಾನು ನಿಮಗ ಒಂದು ಸೀಕ್ರೆಟ್ ಸಂಗತಿ ಹೇಳ್ತೀನಿ. ನನ್ನ ಕಿವಿ ತನಕ ನಿಮ್ಮ ಪ್ರಶಸ್ತಿ ಪ್ರಕರಣದ ಸುದ್ದಿ ಮುಟ್ಟಲಿಕ್ಕೆ ಹತ್ಯಾವು. ಮೊನ್ನೆ ನೀವು ಯಾವುದೊ ಸಭೆಯಲ್ಲಿ "ನನಗ ಪ್ರಶಸ್ತಿ ಸಿಕ್ಕಿದ್ದು ನನ್ನ ಪುಣ್ಯ" ಅಂದಿರಂತೆ. ಆಗ ಹಿಂದೆ ಕುಳಿತ ಒಬ್ಬ ವ್ಯಕ್ತಿ ಯಾರು ಕಳೆದುಕೊಂಡಿದ್ದು ಆ ಪ್ರಶಸ್ತಿ ಅಂತಾ ಸಣ್ಣ ಧ್ವನಿಯಲ್ಲಿ ಪ್ರಶ್ನೆ ಮಾಡಿದರಂತೆ. ಮರ್ಯಾದೆ ಉಳಿತೇನು?"

"ನಿಮ್ಮನ್ನು ಪರಿಚಯ ಮಾಡೊ ನಿರೂಪಕರು 'ಪ್ರಶಸ್ತಿ ವಿಜೇತರು' ಎಂದಾಗ ಹಿಂದೆ ಕುಳಿತವನೊಬ್ಬ ಅಲ್ಲ ಸ್ವಾಮಿ, 'ಪ್ರಶಸ್ತಿ ದೋಚಿತರು' ಅಂತಾ ಹೇಳಿ ಎಂದು ಕೂಗಿದರಂತೆ. ಅದಕ್ಕೆ ನೀವು ನನ್ನ ಮರ್ಯಾದಿನೂ ಕಳೀತರಲ್ಲಾ."

"ಗಂಗು ಇವತ್ತು ಇಡೀ ಜಗತ್ತೇ ಪ್ರಶಸ್ತಿಗಾಗಿ ಬಾಯಿ ಬಾಯಿ ಬಿಡುತ್ತಿದೆ. ರಾಜ್ಯ ಪ್ರಶಸ್ತಿ, ರಾಷ್ಟ್ರ ಪ್ರಶಸ್ತಿ, ಪದ್ಮಭೂಷಣ, ಪದ್ಮವಿಭೂಷಣ, ಭಾರತರತ್ನ, ಕರ್ನಾಟಕರತ್ನ, ಬೂಕರ, ಜೋಕರ ಇನ್ನೂ ಎಂತೆಂಥವೊ ಏನೊ! ಪ್ರಶಸ್ತಿ ಕೊಡುತ್ತಾ ಉತ್ಪನ್ನದ ಹಾದಿ ಮಾಡಿಕೊಂಡಿದ್ದಾರೆ. ದೊಡ್ಡ ಸಾಹಿತಿಗಳ ಹೆಸರಿನಲ್ಲಿ ಪ್ರಶಸ್ತಿ ಕೊಡುವ ಸಂಘಟಕರು ವರ್ಷಕ್ಕೆ ಲಕ್ಷಾನುಲಕ್ಷ ಇನ್‌ಕಮ್ ಕೆಬರಿಕೊಳ್ಳುತ್ತಾರೆ. ಮೂವತ್ತು ರೂಪಾಯಿ ಶಾಲು, ಇಪ್ಪತ್ತು ರೂಪಾಯಿ ತಾಟು, ಹತ್ತು ರೂಪಾಯಿ ಮಾಲೆ, ನಾಲ್ಕಾರು ಹಣ್ಣು ಇಟ್ಟು ಫೋಟೋ ತೆಗೆಸಿ ಸತ್ಕಾರ ಮಾಡುತ್ತಾರೆ. ಒಂದು ರೂಪಾಯಿ ಪ್ರಿಂಟೆಡ್ ಪ್ರಶಸ್ತಿ ಪತ್ರ ಹಿಡಿದು ಫೋಜು ಕೊಡುತ್ತಾರೆ. ಹಿಂದುಗಡೆ ಅಥವಾ ಮೊದಲೆ ಎರಡು ಸಾವಿರ, ಐದು, ಹತ್ತು ಸಾವಿರ ದುಡ್ಡು ವಸೂಲಿ ಮಾಡ್ತಾರೆ. ಇದು ನಡೆದ ಪ್ರಶಸ್ತಿಯ ಪ್ರಹಸನ. ಅಂತೆಯೇ ಈ ಕವನದ ಸಾಲು ಕೇಳು :

*ಪ್ರಶಸ್ತಿಯ ಜಾಹೀರಾತು ಪತ್ರಿಕೆಯಲ್ಲಿ ಬಂದರಂತು*
*ಪರ್ಸೇಂಟೇಜು ಪೀಕುವದು ಮಾಲೆಗಾಗಿ ಮತ್ತೆ*
*ಶಾಲಿಗಾಗಿ*
*ಮಾಲೆ ಹಾಕಿ ಶಾಲು ಹೊದಿಸಿ ಪ್ರಶಸ್ತಿ ಕೊಡ್ರೊಯಪ್ಪ*
*ಅಂತಾ*
*ಒಳಗ ಒಳಗ ದೇಣಿಗೆ ಕೊಡೋದು ಮಾಲೆಗಾಗಿ*
*ಪ್ರಶಸ್ತಿ ಪಡೆಯೊಕಾಗಿ"*

"ಅಲ್ಲ ಮಹರಾಯರೆ, ನೀವು ಮತ್ತೆ ನಿಮದೇ ಹೇಳ್ತಿರಲ್ಲ. ಈ ಪ್ರಶಸ್ತಿಗಳು ತಾವಾಗಿಯೆ ಬಂದರೆ ಅವುಗಳಿಗೆ ಬೆಲೆ ಇರುತ್ತೆ. ಬೆನ್ನು ಹತ್ತಿ ಕಿತ್ತುಕೊಳ್ಳೋದರಲ್ಲಿ ಇದ್ದ ಮರ್ಯಾದೇನೂ ಹೋಗುತ್ತೆ. ಮೊನ್ನೆ ಸಪ್ಟಂಬರ ಐದರಂದು ಒಬ್ಬ ಶಿಕ್ಷಕರಿಗೆ ರಾಷ್ಟ್ರ ಪ್ರಶಸ್ತಿ ಕೊಟ್ಟರಂತೆ. ಆ ಮಾಸ್ತರು ಸಂಘ ಕಟ್ಟಿಕೊಂಡು ಅಧಿಕಾರಿಗಳ ಹಿಂದೆ ತಿರಗತಾ ಇದ್ದನಂತೆ. ಅವ ಹೆಚ್ಚು ಮಾತಾಡಿದ್ದು ಬಾರಿನಲ್ಲೇ ಅಂತಾ ಜನ ಮಾತಾಡಿಕೊಳ್ಳತಾ ಇದ್ರು."

"ಅಯ್ಯೊ ಅದೊಂದು ದೊಡ್ಡ ಕಥೆ ಗಂಗು. ಬಹಳಷ್ಟು ಶಿಕ್ಷಕರು ಇಂಥದೇ ಧಂಧೆ ಮಾಡಿಕೊಂಡು ಪ್ರಶಸ್ತಿ ಪಡೀತಾರೆ. ಮತ್ತೆ ಅವರು ಎಲ್ಲಾರು ಕೂಡಿಕೊಂಡು ಸಂಘ ಕಟ್ಟಿಕೊಂಡು ನಮಗೆ ರೇಲವೆ ಪುಕ್ಕಟೆ ರಿಜರ್ವೇಶನ್ ಕೊಡಬೇಕು, ಹೆಚ್ಚಿನ ಪೆನನ್ ಹಣ ಕೊಡಬೇಕು, ಮನೆ ಸೈಟ್ ಕೊಡಬೇಕು ಅಂತಾ ಹೋರಾಟ ಮಾಡ್ತಿದ್ದಾರೆ. ಅವರಿಗೆ ಪ್ರಶಸ್ತಿ ಕೊಡಲು ಶಿಫಾರಸು ಮಾಡಿದ ಆಫೀಸರುಗಳು ಈಗ ಕೈ ಕೈ ಹಿಚಿಗಿಕೊಳ್ತಾ ಇದ್ದಾರೆ. ಅರ್ಹರು ಮೂಲೆ ಹಿಡಿದಿದ್ದಾರೆ.

ಅನರ್ಹರು ಮಾಲೆ ಧರಿಸಿ ಗಾಂಧಿ ಟೋಪಿ ಚೂಪು ಮಾಡಿಕೊಳ್ಳುತ್ತ ಮೀಸೆ ಮೇಲೆ ಕೈ ಹಾಕಿ ತಿರುಗಾಡ್ತಾರೆ.''

''ನೋಡ್ರಿ, ನನಗಂತೂ ಇದು ನಾಚಿಕೆ ಬರುವಂತಾಗೇತಿ. ಪ್ರಶಸ್ತಿ ಕೊಡ್ರಿ ಅಂತಾ ರಾಜಕಾರಣಿಗಳ ಮುಂದೆ, ಮಂತ್ರಿಗಳ ಮನೆಗಳ ಬಾಗಿಲ ಮುಂದೆ ಜೀ, ಜೀ ಅಂತಾ ಸುತ್ತಾಡೋದು ಯಾವ ಹೇಳ್ಯಾನ್ರಿ ? ಯಾರದೂ ಶಿಫಾರಸು ಇಲ್ಲದ ಸ್ವಂತ ಸಾಧನೆ ನೋಡಿ ಪ್ರಶಸ್ತಿ ಕೊಡಬೇಕು ಮತ್ತು ಪಡೀಬೇಕು. ಅದಕ್ಕ ಅಂತಾರ ಪ್ರಶಸ್ತಿ ವಿಜೇತ, ಅಂತಾ.''

''ಅಲೆ ಇವಳ, ನೀನು ನನಕಿಂತಲೂ ಹೆಚ್ಚು ಅನುಭವ ಪಡಕೊಂಡಬಿಟ್ಟೀದಿ ಅಂತ ಅಂದಂಗಾತು.''

''ನನ್ನ ಗೆಳತಿ ಸುಮಾ ಇದ್ದಾಳಲ್ಲ, ಆಕಿ ಗಂಡನೂ ಈ ಪ್ರಶಸ್ತಿ ಸಲುವಾಗಿ ಬಹಳ ಒದ್ದಾಡತಿರ್ತಾರ. ಹೋದ ವರ್ಷ ಜಿಲ್ಲಾ ಪ್ರಶಸ್ತಿ ಪಡೀಬೇಕಾದರೆ ಬಹಳ ದುಡ್ಡು ಕೈ ಬಿಟ್ಟಿತು ಅಂತಾ ಹೇಳತಾ ಇದ್ದಳು. ಟಿ.ವ್ಹಿ.ಯಲ್ಲಿ ಪತ್ರಿಕೆಯಲ್ಲಿ ಸಂದರ್ಶನ ಮಾಡಿದಾಗ ''ನನಗೆ ಹುಡುಕಿ ಕೊಟ್ಟಾರೆ. ಬಹಳ ಸಂತೋಷ ಆಗೇತಿ'' ಅಂತಾ ಹೇಳಿದ್ದು ನಾನು ಕೇಳಿದ್ದೆ. ಆಗ ನನ್ನ ಗೆಳತಿಗೆ ಫೋನು ಮಾಡಿ ಕೇಳಿದಾಗ ಆಕಿ ಹಣಿ ಹಣಿ ಬಡಿದುಕೊಂಡು, ''ಇಲ್ಲವ್ವ ಗಂಗು, ಅದೊಂದು ದೊಡ್ಡ ಗದ್ದಲ ಆಗಿಹೋತು. ಆ ಪ್ರಶಸ್ತಿ ಪಡೀಲಿಕ್ಕೆ ಏಳೆಂಟು ಮಂದಿ ಪೈಪೋಟಿ ನಡಿಸಿದ್ದರು. ತಿಂಗಳ ತನಕಾ ತಿರುಗಾಡಿ ತಿರುಗಾಡಿ ಕಾಲಿನ ಚಪ್ಪಲು ಸವೆದುಹೋದವು. ಏನಾರ ಸಾಹಿತ್ಯ ಬರ್ದಿದ್ರೆ ಕೊಡ್ರಿ ಅಂದ್ರು. ರೊಕ್ಕ ಕೊಟ್ಟು ಬರೆಸಿದರು, ಪಾರ್ಟಿ ಗೀರ್ಟಿ ಕೊಡ್ತಾನೆ ಇದ್ರು. ಮತ್ತೇನು ಮಾಡುದಕ್ಕ, ಮರ್ಯಾದಿ ಮುಚ್ಚಿಕೊಳ್ಳುದಕ 'ಗುರುತಿಸಿಕೊಟ್ರು' '' ಅಂತಾ ಸಂದರ್ಶನದಾಗ ಹೇಳಿದ್ರು. ಅವರು ಗುರುತಿಸಿದ್ದು ಪಾರ್ಟಿ ಮತ್ತು ದುಡ್ಡು. ಪ್ರಶಸ್ತಿ ಬಂದಮ್ಯಾಲೆ ನಾಲ್ಕಾರು ಸಂಘ ಸಂಸ್ಥಾದವರು ಸತ್ಕಾರ ಮಾಡಿದ್ರು. ಅವೇ ಐದಾರು ಶಾಲು ಬಂದಾವು. ಅಷ್ಟೇ ನೋಡವ್ವಾ ಗಂಗು ಲಾಭ. ಚಿಕ್ಕ ಹುಡುಗರು, ಕೂಸು, ಕುನ್ನಿ ಒಂದಕ್ಕ ಮಾಡಿದಾಗ ಬದಲಿ ಮಾಡಾಕ ಅನುಕೂಲ ಆಗ್ಯಾವ ಅಂತಾ ಹೇಳಿದಳು.''

''ಗಂಗು, ಅದೇನರ ಇರಲಿ, ಸತ್ತಮ್ಯಾಗ ಇಂಥ ಪ್ರಶಸ್ತಿ ವಿಜೇತ ಅಂತಾ ಬರಿತಾರ ನೋಡು. ಅದೇ ನಮಗ ಸ್ವರ್ಗ ಸಿಕ್ಕಂತೆ. ತಿಳಿತಿಲ್ಲೊ''

ಎಂ. ಡಿ. ಗೋಗೇರಿ
ನವ ಅಯೋಧ್ಯಾ ನಗರ, ಹುಬ್ಬಳ್ಳಿ - ೫೮೦ ೦೨೪

# ಚಂದಿರನ ಜೊತೆಗಾರರು



ನನ್ನ ದೇವರ ಪೂಜೆಗೆ
ಯಾರ ಮಧ್ಯಸ್ಥಿಕೆಯೂ ಬೇಡ
ದೇವ ನನ್ನವನಾದರೆ
ಪೂಜೆ ಸ್ವೀಕರಿಸಲಿ
ನೇರ ನನ್ನ ಕೂಡೆ.

ಈ ಸಮಾಜದಿ
ಬದುಕಲು ಬರುವ ನನಗೆ
ಪೂಜಿಸಲು ಬಾರದೆ !

ನನ್ನ ಹಿತ್ತಲ ಸುರಗಿ ಕಡಿದು
ಕೆತ್ತಿ ಮೂರ್ತಿಯ ರೂಪ ಕೊಟ್ಟು
ಗರ್ಭ ಗುಡಿಯೊಳಗೆ
ಚಿಗುರದಂತೆ ನೆಟ್ಟು
ನೀರೆರೆಯುವುದಿಲ್ಲ ; ನಿತ್ಯ
ಬೆಂಕಿ ತೋರಿಸಿ ಬೆದರಿಸುತ್ತಾರೆ ?
ನನ್ನ ಪೌಳಿಯಾಚೆಗೆ ನಿಲಿಸಿ !

ಪೌಳಿಯಾಚೆಗೆ ನಿಲ್ಲುವುದಕ್ಕೆ
ನಮ್ಮ ಹಿರಿಯರು ಸುರಗಿ ಬೆಳೆಸಿದ್ದಲ್ಲ !

ಹರಗೆ ಸುರಗಿ ಮಾಲೆಯ ಸುರಿದು
ಸುರಿ ಸುರಿವ ಬೆವರ ಮುದ್ದೆಯಾಗಿಯೇ
ನಡೆದರು ಕೈಲಾಸಕ್ಕೆ
ಹಾದಿಯಲ್ಲಿ ಚುಕ್ಕಿಗಳಾಗಿ
ಜೊತೆಯಾದರು ಚಂದಿರಗೆ
ನನ್ನ ಹಿರಿಯರು.

ದಿನವೂ ಇರುಳಲ್ಲಿ ನಡೆಯುತ್ತಾರೆ
ಗುಂಪು ಗುಂಪಾಗಿ ; ಚಂದಿರನ ಮುಂದೆ ಬಿಟ್ಟು
ಅವನಂತೆ ಬೆಳಕ ಎರವಲು
ಪಡೆಯುವುದಿಲ್ಲ ; ತಾವೇ ಮಿನುಗುತ್ತಾರೆ.

ನನ್ನ ದೇವರ ಮನೆಯಲ್ಲಿ
ಅನ್ನ ದೇವರ ಪೂಜೆ
ನಿತ್ಯ ನಡೆಯುವುದಿಲ್ಲ
ಅಪರೂಪಕ್ಕೆ ನಡೆವಾಗ
ಮ್ಯಾಲೆ ಸೂರಿನಲ್ಲಿ
ಚಂದಿರನ ಜೊತೆಗಾರರು
ತಿರುಗಿ ನೋಡುತ್ತಾರೆ
ಚಿಕ್ಕ ಚಿಕ್ಕ ತೂತುಗಳಲ್ಲಿ
ನೆರೆಯುತ್ತಾರೆ ಮಿನುಗುತ್ತಾರೆ
ನನ್ನ ಹರಸುತ್ತಾರೆ.

ಚಂದಿರನ ಜೊತೆಗಾರರು
ಗರ್ಭಗುಡಿಯ ದೇವರಿಗೆ
ಬೆನ್ನು ಮಾಡಿ ಹೊರಟವರು
ಹರನೂರಿಗೆ ನಡೆಯುತ್ತಾರೆ
ನಾನಾಗ ಪೂಜೆ ಮಾಡುತ್ತೇನೆ
ಅನ್ನ ದೇವರಿಗೆ ಬಾಡಿನ ನೈವೇದ್ಯವಿಟ್ಟು.

ನಾನು ಸಲ್ಲಿಸುವ ಪೂಜೆ
ಚಂದಿರನ ಜೊತೆಗಾರರಿಗೆ
ಅದಕ್ಯಾರ ಮಧ್ಯಸ್ಥಿಕೆಯೂ
ಬೇಡ... ಬೇಡ... ಬೇಡ.

ಸಂತೋಷ ಗುಡ್ಡಿಯಂಗಡಿ
ನಾಟಕ ಅಧ್ಯಾಪಕ, ಸರ್ಕಾರಿ ಪದವಿಪೂರ್ವ ಕಾಲೇಜು, ಹೆಮ್ಮರಗಾಲ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ



# ಪರಿಸರ ಪ್ರಜ್ಞೆ ಮತ್ತು ಆಧುನಿಕ ಬದುಕು

ಬಿ. ಆರ್. ಶಶಿಧರ

ಅನಾದಿ ಕಾಲದಿಂದಲೂ ಮಾನವನು ಭೂಮಿಯೊಂದಿಗೆ ಹೊಂದಿರುವ ಭಾವನಾತ್ಮಕ ಸಂಬಂಧ ವಿಶಿಷ್ಟವಾದದ್ದು. ಅದರಲ್ಲೂ ಭಾರತದಲ್ಲಿ ಭೂಮಿಯನ್ನು ಮಾತೃಸಮಾನವಾಗಿ ಪರಿಗಣಿಸಿ ಆರಾಧಿಸುವ ವಿಶಿಷ್ಟ ಸಂಸ್ಕೃತಿ ಇರುವುದು ಗಮನಾರ್ಹ. ಭಾರತೀಯರು ಭೂಮಿಯೊಂದಿಗೆ ಕೇವಲ ಪೂಜ್ಯ ಭಾವನೆಯನ್ನು ಹೊಂದಿರುವುದು ಮಾತ್ರವಲ್ಲ. ಭೂಮಿಯೊಂದಿಗಿನ ಅವರ ಬಾಂಧವ್ಯ ಹಾಗೂ ಬದುಕು ಪ್ರತ್ಯೇಕಿಸಲಾರದಷ್ಟು ಹತ್ತಿರದ ಸಂಬಂಧ ಹೊಂದಿವೆ. ಅಥರ್ವವೇದದ ಪೃಥ್ವಿ ಸೂಕ್ತದಲ್ಲಿ (೧೨.೩೫) ಈ ಬಗ್ಗೆ ಹೀಗೆ ಹೇಳಿದೆ :

*ಯತ್ ತೇ ಭೂಮೇ ವಿಖನಾಮಿ ಕ್ಷಿಪ್ರಂ ತದಪಿ*
*ರೋಹತು ।*
*ಮಾ ತೇ ಮರ್ಮ ವಿಮೃಗ್ವರಿ ಮಾ ತೇ ಹೃದಯ*
*ಮರ್ಪಿಪಮ್ ॥*

– ಎಲೈ ಭೂಮಿಯೇ, ನಿನ್ನಿಂದ ಅಗೆದು ತೆಗೆದ ಔಷಧಿಗಳು, ವೃಕ್ಷಗಳು ಪುನಃ ಹುಟ್ಟಲಿ; ನಮ್ಮನ್ನು ಶುದ್ಧಗೊಳಿಸುವ ತಾಯೇ, ನಾನು ನಿನ್ನ ಮರ್ಮಸ್ಥಾನ ಹಾಗೂ ಹೃದಯಕ್ಕೆ ಗಾಯವನ್ನುಂಟು ಮಾಡದಿರಲಿ (ಮಾಡುವುದಿಲ್ಲ).

ಬಿತ್ತನೆಯ ಸಮಯದಲ್ಲಿ ಭೂಮಿಯನ್ನು ಉಳುವಾಗ ರೈತರು ಭೂತಾಯಿಯ ಕ್ಷಮೆ ಕೇಳಿ ಕೆಲಸ ಪ್ರಾರಂಭಿಸುವ ಪದ್ಧತಿಯ ಹಿನ್ನೆಲೆಯಲ್ಲಿ ಪರಿಸರ ರಕ್ಷಣೆಯ ಕಾಳಜಿ ಇರುವುದನ್ನು ನಾವು ಗಮನಿಸಬಹುದು. ಏಕೆಂದರೆ ಉಳುಮೆಯ ಸಮಯದಲ್ಲಿ ಭೂಮಿಯಲ್ಲಿರುವ ಎರೆಹುಳುಗಳಂತಹ ಅನೇಕ ಉಪಯುಕ್ತ ಜೀವಿಗಳು ನೇಗಿಲು, ಗುದ್ದಲಿ ಇತ್ಯಾದಿ ಕೃಷಿ ಪರಿಕರಗಳಿಗೆ ಸಿಕ್ಕಿ ಸಾಯುವುದು ಅನಿವಾರ್ಯ. ಆದರೆ ಅದೇ ಎರೆಹುಳುಗಳು ಭೂಮಿಯ ಸತ್ವ ಕಾಪಾಡುವಲ್ಲಿ ಅತ್ಯಂತ ಮಹತ್ವದ ಪಾತ್ರ ವಹಿಸುವ ಬಗ್ಗೆ ನಮ್ಮ ಪ್ರಾಚೀನರಲ್ಲಿ ತಿಳುವಳಿಕೆ ಇದ್ದಿತು. ಕೇವಲ ತಮ್ಮ ಸ್ವಾರ್ಥಕ್ಕಾಗಿ ಅಂತಹ ಉಪಯುಕ್ತ ಜೀವಿಗಳನ್ನು ಕೊಲ್ಲಬೇಕಾದ ಅನಿವಾರ್ಯತೆಗೆ ಅವರು ಕ್ಷಮೆ ಕೇಳುತ್ತಿದ್ದರು. ಭಾರತದ ಅತ್ಯಂತ ಪ್ರಾಚೀನ ಸಾಹಿತ್ಯಕೃತಿಗಳಾದ ವೇದಗಳಲ್ಲಿನ ಪರಿಸರ ಪ್ರಜ್ಞೆ ಹಾಗೂ ಪರಿಸರಕ್ಕೆ ಮಾನವ ಹೊಂದಿಕೊಂಡು ಹೋಗಬೇಕಾದ ಅಗತ್ಯದ ಕುರಿತು ಅದ್ಭುತ ಚಿಂತನೆಗಳಿವೆ. ಋಗ್ವೇದದಲ್ಲಿ ಪರಿಸರದ ವಿವರಣೆ ಹಾಗೂ ಅವುಗಳ ರಕ್ಷಣೆಯ ಅಗತ್ಯದ ಬಗೆಗಿನ ಮಂತ್ರಗಳಿದ್ದರೆ ಅಥರ್ವವೇದದಲ್ಲಿ ಪರಿಸರ ರಕ್ಷಣೆಯ ವಿಧಾನಗಳನ್ನು ವಾಸ್ತವ ಬದುಕಿನಲ್ಲಿ ಅಳವಡಿಸಿಕೊಳ್ಳುವ ಮಾರ್ಗಗಳ ಬಗ್ಗೆ ಸ್ಪಷ್ಟ ಸೂಚನೆಗಳಿವೆ.

ಮಾನವ ಈ ಪ್ರಕೃತಿಯ ಒಂದು ಅವಿಭಾಜ್ಯ ಅಂಗ. ಆತ ತನ್ನ ಅಸಾಧಾರಣ ಬುದ್ಧಿವಂತಿಕೆಯಿಂದ ತನ್ನ ಸುತ್ತಲಿನ ಸಹಜೀವಿಗಳ ಮೇಲೆ ಮಾತ್ರವಲ್ಲದೆ, ಇಡೀ ಪರಿಸರದ ಮೇಲೆ ಹಂತಹಂತವಾಗಿ ಹತೋಟಿ ಸಾಧಿಸುತ್ತಾ ಬಂದಿದ್ದಾನೆ. ೧೮ನೇ ಶತಮಾನದವರೆಗೆ ಮಾನವ ಮತ್ತು ಪ್ರಕೃತಿಯ ನಡುವಣ ಸಂಘರ್ಷಗಳಿಗೆ ಒಂದು ಮಿತಿ ಇತ್ತು. ಮಾನವನು ಪರಿಸರದ ಮೇಲೆ ಮಾಡುತ್ತಿದ್ದ ದೌರ್ಜನ್ಯಗಳನ್ನು ಸಹಿಸಿಕೊಂಡು ತನ್ನನ್ನು ಸ್ವಯಂ ದುರಸ್ತಿ ಮಾಡಿಕೊಳ್ಳುವ ಸಾಮರ್ಥ್ಯ ಪ್ರಕೃತಿಗೆ ಇದ್ದಿತು. ಆದರೆ ಇಂಗ್ಲೆಂಡಿನಲ್ಲಿ ಸಂಭವಿಸಿದ ಕೈಗಾರಿಕಾ ಕ್ರಾಂತಿ ಹಾಗೂ ಅದನ್ನು ಅನುಸರಿಸಿ ಬೆಳವಣಿಗೆಯಾದ ವಿಜ್ಞಾನ, ತಂತ್ರಜ್ಞಾನಗಳ ವೇಗದ ಬೆಳವಣಿಗೆ ಮಾನವ, ಪ್ರಕೃತಿಯ ನಡುವಿನ ಘರ್ಷಣೆಗಳನ್ನು ತೀವ್ರಗೊಳಿಸಿತು. ಮಾತ್ರವಲ್ಲ, ಇದುವರೆಗಿನ ತಿಳುವಳಿಕೆಯ ಪ್ರಕಾರ ಸೌರವ್ಯೂಹದಲ್ಲೇ ವಾಸಯೋಗ್ಯವಾಗಿರುವ ಭೂಮಿಯ ಜೀವಿರಾಶಿಯ ಅಸ್ತಿತ್ವಕ್ಕೆ ಗಂಭೀರ ಸವಾಲುಗಳನ್ನು ಒಡ್ಡಿದೆ. ಆಧುನಿಕ ಮಾನವ ತಾನು ಹೆಮ್ಮೆಯಿಂದ ಸಾಧಿಸಿದ್ದೇನೆಂದು ಹೇಳಿಕೊಳ್ಳುವ ಭೌತಿಕ ಪ್ರಗತಿ ಎಂಬುದು ತನ್ನ ಗೋರಿಯೇ ಆಗಬಲ್ಲದು ಎಂಬ ಎಚ್ಚರ ಎಷ್ಟು ಬೇಗ ಮೂಡಿದರೆ ಅಷ್ಟು ಒಳ್ಳೆಯದು ಎನಿಸುತ್ತದೆ. ಏಕೆಂದರೆ ಅಭಿವೃದ್ಧಿಯ ಬಗೆಗಿನ ವಿಕೃತ ಪರಿಕಲ್ಪನೆಗಳು ಮಾನವನ ಬದುಕಿನ ಪ್ರಶ್ನೆ ಮಾತ್ರವಾಗಿರದೆ ಈ ಸುಂದರ ಪೃಥ್ವಿಯ ಅಳಿವು ಉಳಿವಿನ ಪ್ರಶ್ನೆಯೂ ಆಗಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಸಹಜವಾಗಿಯೇ ಪ್ರಕೃತಿ ತತ್ವಗಳ ನಡುವೆ ಸಮತೋಲನ ಇರಬೇಕು. ಹಾಗಿದ್ದಾಗ ಮಾತ್ರ ಈ ಭೂಮಂಡಲದ ಜೀವರಾಶಿಗಳ ಅಸ್ತಿತ್ವ ನಿರಾತಂಕವಾಗಿ ಮುಂದುವರಿಯುತ್ತದೆ. ಆದರೆ ಈಗ ಆಗುತ್ತಿರುವುದೇನು ? ಇಡೀ ಜಗತ್ತಿನಲ್ಲಿ ಗಾಬರಿ ಹುಟ್ಟಿಸುವಷ್ಟರ ಮಟ್ಟಿಗೆ ಹೆಚ್ಚುತ್ತಿರುವ ಪರಿಸರ ಮಾಲಿನ್ಯ, ಅದಕ್ಕೆ ಮೂಲ ಕಾರಣವಾಗಿರುವ ಕೆಲವು ದೇಶಗಳ ಮಿತಿಮೀರಿದ ಜನಸಂಖ್ಯಾ ಹೆಚ್ಚಳ, ನಗರೀಕರಣ, ಬೃಹತ್ ಪ್ರಮಾಣದ



ಅರಣ್ಯನಾಶ, ಪ್ರಗತಿಯ ಹೆಸರಿನಲ್ಲಿ ಜೀವಿಗಳ ಸ್ವಾಭಾವಿಕ ನೆಲೆಗಳ ಮೇಲಿನ ಒತ್ತಡ, ಎಗ್ಗಿಲ್ಲದೆ ಪರಿಸರದ ಮೇಲೆ ನಡೆಯುತ್ತಿರುವ ದೌರ್ಜನ್ಯ, ಹೆಚ್ಚುತ್ತಿರುವ ದಾರಿದ್ರ್ಯ, ಹಸಿವು, ರೋಗರುಜಿನಗಳಿಂದ ಈ ಭೂಮಿಯಲ್ಲಿ ಮಾನವನ ಭವಿಷ್ಯ ಭಯಾನಕವಾಗಿದೆಯೇನೋ ಅನಿಸುತ್ತಿದೆ.

ಆಧುನಿಕ ಜಗತ್ತು ಭೌತಿಕ ಸಂಪತ್ತಿನ ಹೆಚ್ಚಳ ಮತ್ತು ಸಂಗ್ರಹವನ್ನೇ ಪ್ರಗತಿಯ ಮಾನದಂಡವಾಗಿ ಪರಿಗಣಿಸಿರುವುದು ವಿವೇಚನೆಯ ಕ್ರಮವಲ್ಲ. ಭೌತಿಕ ಸಂಪತ್ತಿನ ಸೃಷ್ಟಿ ಮತ್ತು ಸಂಗ್ರಹ ಆಧುನಿಕ ಕಾಲದಲ್ಲಿ ಅನಿವಾರ್ಯವೆನಿಸಿದರೂ ಅದು ಪರಿಸರಕ್ಕೆ ಪೂರಕವಾಗಿರಬೇಕು. ಇಲ್ಲವಾದರೆ ಇಂತಹ ಕ್ರಮ ಪರಿಸರದ ಸರ್ವನಾಶಕ್ಕೆ ಕಾರಣವಾಗಬಹುದು. ಹಾಗೇನಾದರೂ ಆದರೆ ಅದರೊಂದಿಗೆ ಈ ಭೂಮಿಯ ಸಕಲಜೀವಿಗಳ ಅಸ್ತಿತ್ವವೂ ಕೊನೆಗೊಳ್ಳುವುದರಲ್ಲಿ ಸಂಶಯವಿಲ್ಲ.

ಕಳೆದ ಶತಮಾನದ ಮತ್ತು ಈಗಿನ ೨೧ನೇ ಶತಮಾನದ ಪರಿಸರ ತಜ್ಞರ, ಪ್ರಸ್ತುತ ಬದುಕಿನ ಆಗುಹೋಗುಗಳ ಬಗ್ಗೆ ಆಳವಾದ ಜ್ಞಾನ ಇರುವ ಕೆಲವೇ ಕೆಲವು ಪ್ರಜ್ಞಾವಂತರ ನೈಜ ಪರಿಸರ ರಕ್ಷಣೆಯ ಕಾಳಜಿಗಳು ಹಾಗೂ ಆತಂಕಗಳನ್ನು ಆಧುನಿಕ ಜಗತ್ತು ಗಣನೆಗೇ ತೆಗೆದುಕೊಳ್ಳುತ್ತಿಲ್ಲ. ಹೆಚ್ಚಿನ ಪರಿಸರ ಹೋರಾಟಗಳು ಕ್ರಮೇಣ ಹಣ ಮಾಡುವ ಧಂಧೆಗಳಾಗಿ ಪರಿವರ್ತನೆಗೊಂಡು ದುರ್ಬಲವಾಗುತ್ತಿರುವುದರ ಹಿಂದೆ ಬಂಡವಾಳಶಾಹಿ ಎಂಬ ರಾಕ್ಷಸ ಶಕ್ತಿಯ ಕೈವಾಡಗಳಿರುವುದು ರಹಸ್ಯವೇನಲ್ಲ. ಏಕೆಂದರೆ ಬಂಡವಾಳಶಾಹಿ ಸಿದ್ಧಾಂತ ಈ ಭೂಮಂಡಲದ ಸಮಸ್ತ ಸಂಪತ್ತನ್ನು ದೋಚಿ ಅನುಭವಿಸುವುದೊಂದನ್ನೇ ತನ್ನ ಮುಖ್ಯ ಗುರಿಯನ್ನಾಗಿರಿಸಿಕೊಂಡಿದೆ. ಪರಿಸರ ರಕ್ಷಣೆ, ಪರಿಸರಸ್ನೇಹಿ ಕೃಷಿ ಇತ್ಯಾದಿ ಚಟುವಟಿಕೆಗಳು, ಮಿತ ಬಳಕೆ ಇತ್ಯಾದಿಗಳೆಲ್ಲ ತೃತೀಯ ಜಗತ್ತಿನ ರಾಷ್ಟ್ರಗಳು ಅನುಸರಿಸಬೇಕಾದ ಕ್ರಮಗಳು ಎಂಬುದಾಗಿ ಬಂಡವಾಳಶಾಹಿ ಜಗತ್ತು ಭಾವಿಸುತ್ತದೆ.

ಒಟ್ಟಿನಲ್ಲಿ, ಹೆಚ್ಚುತ್ತಿರುವ ಪರಿಸರನಾಶದ ಪರಿಣಾಮವಾಗಿ ಇಡೀ ಜಗತ್ತೇ ಇಂದು ತಲ್ಲಣಗೊಂಡಿರುವುದು ಸರ್ವವಿದಿತ. ಭೂ, ಜಲ, ವಾಯುಮಾಲಿನ್ಯಗಳೇ ಅಲ್ಲದೆ



ಇನ್ನಿತರ ಅನೇಕ ಅಗೋಚರ ಮಾಲಿನ್ಯಗಳು ಪರಿಸರದ ಸಹಜ ಆರೋಗ್ಯವನ್ನು ಹದಗೆಡಿಸುತ್ತಿವೆ. ಜಗತ್ತಿನ ನಾನಾ ಕಡೆ ಸಂಭವಿಸುತ್ತಿರುವ ಭೀಕರ ಪ್ರವಾಹಗಳು, ಕ್ಷಾಮಡಾಮರಗಳು, ಹವಾಮಾನ ವೈಪರೀತ್ಯ, ಭೂಕಂಪ, ಸುನಾಮಿ, ತೃತೀಯ ಜಗತ್ತಿನ ಭೀಕರ ದಾರಿದ್ರ್ಯ ಹಾಗೂ ಹಸಿವು, ಅದರಿಂದ ಉಂಟಾಗುತ್ತಿರುವ ಸಾವುನೋವು ಇತ್ಯಾದಿಗಳು ಮಾನವನು ಪ್ರಕೃತಿಯ ಮೇಲೆ ಅವ್ಯಾಹತವಾಗಿ ನಡೆಸುತ್ತಿರುವ ಅತ್ಯಾಚಾರಗಳ ಫಲಗಳೆಂಬ ಭಾವನೆ ಸಾರ್ವತ್ರಿಕವಾಗಿ ಹರಡಿದೆ. ಇವೆಲ್ಲದರ ಪರಿಣಾಮವಾಗಿ ನಾವು ನಮ್ಮ ಮುಂದಿನ ಜನಾಂಗಕ್ಕೆ ಎಂತಹ ಜಗತ್ತನ್ನು ಬಿಟ್ಟುಹೋಗುತ್ತಿದ್ದೇವೆ ಎಂದು ನೆನೆದಾಗ ತೀವ್ರ ವಿಷಾದ ಹಾಗೂ ಆತಂಕ ಉಂಟಾಗುತ್ತವೆ.

ಆಧುನಿಕ ಮಾನವನ ಬದುಕಿನ ಗುರಿ ಎತ್ತ ಸಾಗಿದೆ ಎಂಬುದು ಕುತೂಹಲಕಾರಿ ವಿಷಯ. ಭೋಗ ಲಾಲಸೆಯಿಂದ ಐಹಿಕ ಸುಖಕ್ಕಾಗಿ ನಿರಂತರವಾಗಿ ಹಾತೊರೆಯುತ್ತಿರುವ ಆತ ಹೆಚ್ಚುಹೆಚ್ಚು ಸ್ವಾರ್ಥಿಯಾಗುತ್ತಿದ್ದಾನೆ. ಮಾನವನ ಸಮಷ್ಟಿಪ್ರಜ್ಞೆ ನಾಶವಾಗುತ್ತಿದೆ. ಸಾಮಾಜಿಕ ಕಲ್ಯಾಣದ ಆದರ್ಶ ಮೂಲೆಗುಂಪಾಗುತ್ತಿದೆ. ಧರ್ಮ, ಜಾತಿ, ಪಂಗಡಗಳ ನಡುವಿನ ತಾರತಮ್ಯ ಹೆಚ್ಚುತ್ತಿದೆ. ಆಧುನಿಕ ಮಾನವನಲ್ಲಿ ಯಾವುದೇ ಸಾಮಾಜಿಕ ಕಾಳಜಿಯುಳ್ಳ ಆದರ್ಶವೂ ಕಾಣಸುತ್ತಿಲ್ಲ. ಸತ್ಯ, ಧರ್ಮ, ಪ್ರಾಮಾಣಿಕತೆ, ನಿಸ್ವಾರ್ಥ ಸೇವೆಗಳು ಸವಕಲು ನಾಣ್ಯಗಳಾಗಿವೆ. ಇದಕ್ಕಿಂತಲೂ ಭಯಾನಕ ಸಂಗತಿ



ಎಂದರೆ ಆಧುನಿಕ ಮಾನವ ದೈಹಿಕವಾಗಿ ಮಾತ್ರವಲ್ಲ ಮಾನಸಿಕವಾಗಿ, ಅಂದರೆ ತನ್ನ ಆತ್ಮಸ್ಥೈರ್ಯವನ್ನೇ ಕಳೆದುಕೊಂಡು ದುರ್ಬಲನಾಗುತ್ತಿದ್ದಾನೆಯೇ ಎಂಬ ಸಂಶಯ ಮೂಡುತ್ತಿದೆ. ಹಿಂದಿನ ತಲೆಮಾರಿಗೆ ಹೋಲಿಸಿದರೆ ವ್ಯಾವಹಾರಿಕವಾಗಿ ಈಗಿನ ಜನಾಂಗ ಹೆಚ್ಚು ಬುದ್ಧಿವಂತ ಜನಾಂಗವಾಗಿರಬಹುದು, ಆದರೆ ಭಾವನಾರಹಿತ ಮನಃಸ್ಥಿತಿ ಆತನನ್ನು ಆವರಿಸಿದೆಯೇ ಎಂಬ ಪ್ರಶ್ನೆಗಳೂ ಸಹ ಮೂಡತೊಡಗಿವೆ. ಇದಕ್ಕೆಲ್ಲಾ ಕಾರಣ ಆಧುನಿಕ ಮಾನವನ ಬದುಕು ಹಿಂದೆಂದಿಗಿಂತಲೂ ಹೆಚ್ಚು ಯಾಂತ್ರೀಕರಣಗೊಂಡಿರುವುದೇ ಆಗಿದೆ.

ವೇಗದ ಬದುಕು ಭೌತಿಕ ಸಂಪತ್ತಿನ ಹೆಚ್ಚಳ ಸಾಧಿಸಿದೆ, ನಿಜ. ಆದರೆ ಅದರಿಂದ ಮಾನವನಿಗಾದ ನಿಜವಾದ ಲಾಭವೇನು ಎಂದು ಚಿಂತಿಸಬೇಕಾಗುತ್ತದೆ. ಏಕೆಂದರೆ, ಕೇವಲ ಭೌತಿಕ ಸಂಪತ್ತಿನಿಂದ ಲಭಿಸುವ ಸುಖ ತಾತ್ಕಾಲಿಕವಾಗಿದ್ದು, ಬೌದ್ಧಿಕ-ಸಾಂಸ್ಕೃತಿಕ ಸಾಧನೆಯಿಂದ ಮಾತ್ರ ಮಾನವ ನೆಮ್ಮದಿಯ ಬದುಕನ್ನು ತನ್ನದಾಗಿಸಿಕೊಂಡು ಸುಖವಾಗಿರಬಲ್ಲ ಎಂಬುದಾಗಿ ಅಥರ್ವವೇದದ ಮಂತ್ರವೊಂದರಲ್ಲಿ ಹೇಳಲಾಗಿದೆ. ಆಧ್ಯಾತ್ಮಿಕ ಸಾಧನೆ ಎಂದ ಮಾತ್ರಕ್ಕೆ ದೈಹಿಕ ದುಡಿಮೆಯನ್ನು ನಿರಾಕರಿಸಿ ಜಪ ತಪಾದಿಗಳಲ್ಲಿ ಮಗ್ನನಾಗುವುದು ಎಂದರ್ಥವಲ್ಲ. ಅದೇ ಅಥರ್ವವೇದದ ಇನ್ನೊಂದು ಮಂತ್ರ ಮನುಷ್ಯ ತನ್ನ ಬದುಕಿನಲ್ಲಿ ಉನ್ನತಿಯನ್ನು ಸಾಧಿಸಬೇಕಾದರೆ ಕ್ರಿಯಾಶೀಲನಾಗಿರಬೇಕೆಂದು ಹೇಳುತ್ತದೆ. ಪುರುಷ-ಪ್ರಯತ್ನವಿಲ್ಲದೆ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಶತ ಹಸ್ತಗಳಿಂದ ದುಡಿದು ಸಂಪಾದಿಸಿರಿ, ಸಹಸ್ರ ಹಸ್ತಗಳಿಂದ ದುಡಿಮೆಯ ಫಲವನ್ನು ಅನುಭವಿಸಿ, ಜಗತ್ತಿಗೆಲ್ಲಾ ಅನ್ನ ದೊರೆಯುವಂತಾಗಲಿ ಎಂಬುದಾಗಿ ಅಥರ್ವವೇದದ ಈ ಕೆಳಗಿನ ಮಂತ್ರ ಸಾರಿದೆ (೩.೨೪.೫):

*ಶತಹಸ್ತ ಸಮಾಹರ ಸಹಸ್ರ ಹಸ್ತ ಸಂ ಕಿರ ।*
*ಕ್ರತಸ್ಯ ಕಾರ್ಯಸ್ಯ ಚೇಹ ಸ್ಫಾತಿಂ ಸಮಾವಹ ॥*

ಆದರೆ ಮಾನವನ ಎಲ್ಲ ಚಟುವಟಿಕೆಗಳೂ ಪರಿಸರಕ್ಕೆ ಪೂರಕವಾಗಿರಬೇಕು. ಏಕೆಂದರೆ ಪ್ರಕೃತಿಯಲ್ಲಿನ ಎಲ್ಲ ಜೀವಿಗಳ ಬದುಕೂ ಪರಸ್ಪರ ಅವಲಂಬನೆಯ ತತ್ವದ ಆಧಾರದ ಮೇಲೆ ನಿಂತಿದೆ. ಮಾನವನೂ ಅದಕ್ಕೆ ಹೊರತಲ್ಲ. ಇಲ್ಲಿ ಪರಿಸರ ರಕ್ಷಣೆ ಎಂದರೆ ಮಾನವ ತನ್ನ ಸಹಜೀವಿಗಳಾದ ಪ್ರಾಣಿ ಪಕ್ಷಿ ಕ್ರಿಮಿಕೀಟಗಳಿಗೆ ಮಾಡುವ ಮಹದುಪಕಾರ ಎಂದು ಬೀಗಬೇಕಿಲ್ಲ. ಪರಿಸರ ರಕ್ಷಣೆಯ ಮೂಲಕ ತಾನೂ ಬದುಕಿ ಉಳಿದ ಜೀವಿಗಳನ್ನೂ ನಿಶ್ಚಿಂತೆಯಿಂದ ಬದುಕಲು ಬಿಡುವುದು ಅವನ ಕರ್ತವ್ಯವೂ ಹೌದು. ಚಂದ್ರ, ಮಂಗಳ ಮುಂತಾದ ಗ್ರಹಗಳಲ್ಲಿ ನೀರಿನ ಅಸ್ತಿತ್ವವನ್ನು ಹುಡುಕಹೊರಟಿರುವ ಮಾನವ ಭೂಮಂಡಲದ ಜಲ, ಜಲಮೂಲಗಳನ್ನು ಕಲುಷಿತಗೊಳಿಸುತ್ತಿರುವುದನ್ನು ಯಾವ ತರ್ಕದಿಂದ ಸಮರ್ಥಿಸಿಕೊಳ್ಳೋಣ ? ಮನೆಗೆ ಬೆಂಕಿ ಬಿದ್ದಾಗ ಬಾವಿ ತೋಡಿ ನೀರನ್ನು ಸಂಗ್ರಹಿಸುವ ಅವಿವೇಕಿ ಕ್ರಮಕ್ಕೆ ಮಾನವ ಮುಂದಾಗದಿರಲಿ ಎಂದು ಹಾರೈಸುವುದೇ ನಮಗಿರುವ ಏಕೈಕ ಹಾದಿ ಎನಿಸುತ್ತದೆ.

ಬಿ. ಆರ್. ಶಶಿಧರ
ಇತಿಹಾಸ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಿರಿಯಾಪಟ್ಟಣ, ಮೈಸೂರು ಜಿಲ್ಲೆ

# ಜೋಡಿ ನಳಿಗೆಯ ಈಡು...

ಇಲ್ಲಿ ಚರ್ಚಿಸುವ ವಿಷಯವನ್ನು ವಸ್ತುವಿನ ಒಂದು ರೂಪಕದಲ್ಲಿ ಹೇಳಬಯಸುತ್ತೇನೆ. ಮಲೆನಾಡಿನಲ್ಲಿ ಶಿಕಾರಿ ಒಂದು ಖಯಾಲಿ. ಅದು ಹೊಟ್ಟೆಪಾಡಿನ ಕಾಯಕದಿಂದ ಆರಂಭಗೊಂಡು ಈಗ ಉಳ್ಳವರು ತಮ್ಮ ಶ್ರೀಮಂತಿಕೆಯ ಶೋಕಿಗಾಗಿ ರೂಪಿಸಿಕೊಂಡದ್ದಾಗಿದೆ. ಇದು ಅವರಿಗೆ ಏಕಾಏಕಿಯಾಗಿ ಹುಟ್ಟಿದ ಪ್ರವೃತ್ತಿಯಲ್ಲ. ಮಲೆನಾಡಿನ ಶ್ರೀಮಂತ ನೈಸರ್ಗಿಕ ವಲಯಗಳಲ್ಲಿ ಬೀಡುಬಿಟ್ಟಿದ್ದ ಆಂಗ್ಲರು ತಮ್ಮೊಂದಿಗೆ ತಕರಾರು ಎತ್ತದ ಅಮಾಯಕರಿಗೆ ತೋರಿಸುತ್ತಿದ್ದ ಕೋವಿಯ ಗುಂಡೇಟು. ಅವರ ಕೈಕೆಳಗೆ ಕೆಲಸಕ್ಕಿದ್ದ ಅನೇಕ ಮೇಲ್ಜಾತಿ ಶೂದ್ರರಿಗೆ ಅವಮಾನವಾಗಲಿ, ದೌರ್ಜನ್ಯ ಅಂತಾಗಲಿ ಅನ್ನಿಸಿದೆ, ಅದೊಂದು ಹಕ್ಕು ಸ್ಥಾಪಿಸುವ ಮತ್ತು ಆಳುವವರ ಅಧಿಕಾರ ಎಂದೇ ಭಾವಿಸಿದ್ದರು. ಕ್ರಮೇಣ ಆಂಗ್ಲರ ನಿರ್ಗಮನದ ನಂತರ ಆ ಜಾಗದಲ್ಲಿ ಕೂತುಕೊಂಡ ಮಲೆನಾಡಿನ ಮಧ್ಯಮಜಾತಿ ಸಮುದಾಯವೂ ಕೋವಿಯನ್ನು ಆಯುಧ ಮಾಡಿಕೊಂಡು ಪ್ರಾಣಿ ಹಾಗೂ ಜನಬೇಟೆಯನ್ನು ಅಭ್ಯಾಸ ಮಾಡಿಕೊಂಡಿತು. ಇದ್ಯಾವುದನ್ನು ನೇರವಾಗಿ ಕರಾರುವಾಕ್ಕಾಗಿ ನಿರ್ವಹಿಸದೇ ಹೋದರೂ ಪುರೋಹಿತ ಸಮುದಾಯವು ಈ ಶ್ರೀಮಂತ ಶೂದ್ರ ಸಮುದಾಯವನ್ನು ಬೌದ್ಧಿಕ ನಿಯಂತ್ರಣದಲ್ಲಿಡುವ ಅಕ್ಷರದ ನೆಲೆಗೆ ತಳ್ಳಿತು.

ಈ ಹೊತ್ತಿನ ಭಾರತೀಯ ಸಮಾಜಶಾಸ್ತ್ರ ಮತ್ತು ಇತಿಹಾಸ ಹಾಗೂ ರಾಜಕೀಯ ಮೀಮಾಂಸೆಯನ್ನು ಪುನರ್ ಮೌಲ್ಯೀಕರಣಕ್ಕೆ ಒಳಗುಮಾಡುವುದಾದರೆ ಅದು ಗಾಯಗೊಂಡ ದಲಿತರ ಎದೆಯ ಮಾತಾಗಿ ರೂಪುಗೊಳ್ಳುತ್ತದೆ. ಈ ಸಮಾಜದ ಕಟ್ಟಕಡೆಯ ಹಂತದಲ್ಲಿರುವ ಅಸ್ಪೃಶ್ಯ ಸಮುದಾಯವು ತಮಗರಿವಿಲ್ಲದೆ ಜೋಡಿನಳಿಗೆಯ ಈಡಿಗೆ ಬಲಿಯಾಗುತ್ತಿದ್ದಾರೆ. ಒಂದು ನಳಿಗೆ ಪುರೋಹಿತಶಾಹಿಯದ್ದಾದ ಹಳೆಯ ನೆಲೆಯದು, ಮತ್ತೊಂದು ನಳಿಗೆ ಇದೇ ಪುರೋಹಿತಶಾಹಿ ರೂಪಿಸುವ ವಿಭುತ್ವದ್ದಾಗಿರುತ್ತದೆ. ದುರಂತವೆಂದರೆ ಈ ಭಾರವಾದ ಜೋಡಿ ನಳಿಗೆಯನ್ನು ದಲಿತಕೇರಿಯ ನವಬ್ರಾಹ್ಮಣರ ಹೆಗಲಮೇಲಿಟ್ಟು ಅಮಾಯಕರ ಎದೆಗೆ ಗುರಿಯಿಟ್ಟು ಉಡಾಯಿಸುವ ತಂತ್ರವನ್ನು ವಿಭುತ್ವ ಮತ್ತು ಪುರೋಹಿತಶಾಹಿ ವರ್ಗವು ನಿರಂತರವಾಗಿ ನಿರ್ವಹಿಸುತ್ತಲೇ ಇರುತ್ತದೆ. ಇಂತಹ ತಂತ್ರವು ಅಕ್ಷರ, ಅಧಿಕಾರ, ಮೀಸಲಾತಿ, ರಾಜಕಾರಣ, ಜಾತಿಕಾರಣ, ಹಿಂದುತ್ವ, ದೇವಾಲಯ, ಭಾರತಮಾತೆ, ಕುಂಕುಮ, ತ್ರಿಶೂಲ, ಕಾಶ್ಮೀರ ಮುಂತಾದ ಜ್ವಲಂತ ಹಾಗೂ ಭಾವನಾತ್ಮಕ ಸಂಗತಿಗಳಿಗೆ ಸಂವಹಿಸುತ್ತಿರುತ್ತದೆ. ಇದ್ಯಾವುದರ ಅರಿವಿಲ್ಲದ ಅಮಾಯಕ ದಲಿತ ವರ್ಗ ತನ್ನ ಮೈಮೇಲಾದ ಶತಮಾನದ ಗಾಯವನ್ನು ನೆಕ್ಕಿಕೊಳ್ಳುತ್ತಲೇ ಇರುತ್ತದೆ. ಇದೇ ಕಾಲದಲ್ಲಿ ಆ ಗಾಯದ ರೂವಾರಿಗಳ ನೆನಪನ್ನು ಅಮಾಯಕವಾಗಿ ಮರೆಯುತ್ತಿರುತ್ತದೆ ಅಥವಾ ಮರೆಯುವಂತಹ ಇತಿಹಾಸವನ್ನು ವಿಭುತ್ವ ರೂಪಿಸುತ್ತಲೇ ವರ್ತಮಾನದ ಸಂಗತಿಗಳಿಂದ ದಲಿತರನ್ನು ಆಚೆಗೊಯ್ದು ಪಲ್ಲಕ್ಕಿ ಹೊರುವ ಕರ್ತವ್ಯಕ್ಕೆ ಹಚ್ಚಿರುತ್ತದೆ.

**ಡಾ|| ಕುಂಸಿ ಉಮೇಶ**

ಇದೊಂದು ಕೇವಲ ಹಮೇಯವಲ್ಲ, ಧರ್ಮ, ಜಾತಿ, ದೇವರು, ಮುಂತಾದುವುಗಳ ಬಗೆಗಿನ ಚರ್ಚೆಯಿಂದ ಶುರುವಾಗಿ ವಾಸ್ತವ ಬದುಕಿನ ನೇರಕ್ಕೂ ಅದು ಏಕಕಾಲಕ್ಕೆ ಬಾಣ ಬಿಡುತ್ತಿರುತ್ತದೆ. ಅಂಬೇಡ್ಕರ್ ಅಂದು ರೂಪಿಸಿದ ಸ್ವಾಭಿಮಾನದ ಚಳುವಳಿಗಳಲ್ಲಿ, ನೀರಿನ ಹಕ್ಕು ಸ್ಥಾಪಿಸುವ, ಮನುಷ್ಯ ನೆಲೆಯ ಹೋರಾಟ ಹಾಗೂ ಸಮಾನತೆಗಾಗಿ ನಡೆದ ಅನೇಕ ಹೋರಾಟಗಳಿಂದ ಆರಂಭಗೊಂಡು ಇಂದಿಗೂ ದಲಿತರು ನಡೆಸುತ್ತಿರುವ ಎಲ್ಲ ಬಗೆಯಲ್ಲಿ ಹೋರಾಟವು ಇಲ್ಲಿ ಸಮಾನತೆಯನ್ನು ತರಲಾಗುತ್ತಿಲ್ಲ. ಕಾರಣ ಈ 'ಜೋಡಿ ನಳಿಗೆ'ಗಳಿಗೆ ಭಾರತದ ಸಾರ್ವಭೌಮತೆ ಹಾಗೂ ಗಣತಂತ್ರವನ್ನು ಸಾರುವ ಜಾತ್ಯತೀತ ಸಂವಿಧಾನವೂ ಅರ್ಥವಾಗಿಲ್ಲ. ಬಿಡಿಕೊಂಡ ಅವರದು ಅರ್ಥವಾಗದ ಜಾಣತನವಾದರೆ, ಬಡ ದಲಿತರ ದಡ್ಡತನವೂ ಇದಕ್ಕೆ ಕಾರಣವಾಗಿದೆ.

ಎಪ್ಪತ್ತು, ಎಂಬತ್ತರ ದಶಕದಲ್ಲಿ ಕರ್ನಾಟಕದ ಸಂದರ್ಭ ಅನೇಕ ಹೋರಾಟಗಳನ್ನು ರೂಪಿಸಿದ ದಶಕವಾಗಿದೆ. ನಿಜವಾಗಿಯೂ ಕರ್ನಾಟಕದ ಚರಿತ್ರೆಯನ್ನು ನಾವು ಈಗಿನಿಂದ ಹಿಂದಕ್ಕೆ ಓದಿಕೊಳ್ಳಬೇಕಾಗಿದೆ. ಏಕೆಂದರೆ ಕಾಲೇಜುಗಳಲ್ಲಿ ಕಲಿಸುತ್ತಿರುವ ಪಠ್ಯಗಳು ೭೦ರ ಹೊತ್ತಿಗೆ ನಿಂತುಬಿಡುತ್ತವೆ. ದಲಿತ, ರೈತ, ಸ್ತ್ರೀ, ಕಾಗೋಡು, ಸಮಾಜವಾದಿ... ಈ ಯಾವೆಲ್ಲ ಹೋರಾಟಗಳಿಗೂ ಅಲ್ಲಿ ಸ್ಥಾನವಿಲ್ಲ. ಹಿಂದುಳಿದ ವರ್ಗದ ಮೀಸಲಾತಿ ಹೋರಾಟಕ್ಕೆ ನಿಂತುಬಿಡುವ ಆ ಪಠ್ಯಗಳು ನಿಜವಾಗಿ ಹಿಂದುಳಿದವರು ನಾಲ್ಕು ಶತಮಾನಗಳಿಂದಲೂ ಹಿಂಗೇಕೆ ಬಾಳುತ್ತಿದ್ದಾರೆ, ೫೦೦೦ ವರ್ಷಗಳಿಂದ ದಲಿತರ ಬದುಕು ಯಾಕೆ ಹೀಗಿದೆ ಎಂದು ದಾಖಲಿಸಿಲ್ಲ.

ಸರ್ಕಾರವೇ ಅಂಕಿಸಂಖ್ಯೆ ನೀಡುವಂತೆ ಪ್ರತಿ ಮೂರು ನಿಮಿಷಕ್ಕೆ ಒಬ್ಬ ದಲಿತ ಮಹಿಳೆಯ ಮೇಲೆ ಯಾಕೆ ದೌರ್ಜನ್ಯ, ಅತ್ಯಾಚಾರ, ಸಾಮಾಜಿಕ ಬಹಿಷ್ಕಾರ ನಡೆಯುತ್ತಿದೆ ಎಂಬ ಚಾರಿತ್ರಿಕ ಪ್ರಶ್ನೆಗಳನ್ನು ಚರಿತ್ರೆಯ ಪುಸ್ತಕಗಳು ಎತ್ತುತ್ತಿಲ್ಲ. ಏಕೆಂದರೆ ವರ್ತಮಾನಕ್ಕೆ ಜೀವವಿಲ್ಲ. ಜೀವವಿರುವ ವರ್ತಮಾನವನ್ನು ರೂಪಿಸಬೇಕಾಗಿದ್ದ 'ವ್ಯವಸ್ಥೆ' ಮತ್ತು 'ಸುಧಾರಕ' ಜೋಡಿ ನಳಿಗೆಗಳು ಮತ್ತೆ ಅದೇ ಹಳೇ ಒಡೆದಾಳುವ ತಂತ್ರವನ್ನು ಹೊಸ ರೂಪದಲ್ಲಿ ರೂಪಿಸುತ್ತಿರುತ್ತವೆ.

ಈ ಬಗೆಯ ಧ್ಯಾನದ ಚಿಂತನೆಯನ್ನು ಕೊಲ್ಲುವ ಆಧುನಿಕ ಶಿಕ್ಷಣ ಪದ್ಧತಿಯಿಂದ ದಲಿತರಿಗೆ ಮೋಕ್ಷವಿಲ್ಲ. ಸಾಂಪ್ರದಾಯಿಕ ಶಿಕ್ಷಣದಾಚೆಗೆ ಅವರ ಹೆಜ್ಜೆಗಳು, ಹಟ್ಟಿಯ ಕೇರಿಯ ಊರಿನ, ಅವಮಾನದ ಅಸ್ಪೃಶ್ಯತೆಯ ನೆಲೆಯಿಂದ ರೂಪುಗೊಳ್ಳಬೇಕು. ಅಲ್ಲಿಂದ ಹೆದ್ದಾರಿಗೆ ಬಂದ 'ದಲಿತ ಪ್ರಜ್ಞೆ' ಮತ್ತೆ ತನ್ನೂರಿನ, ಕೇರಿಯ, ಹಟ್ಟಿಯ, ಅಸ್ಪೃಶ್ಯತೆಯ ಅವಮಾನಕ್ಕೆ ಮರಳಬೇಕಾಗಿದೆ. ಇಲ್ಲದಿದ್ದರೆ ಈ ಜೋಡಿ ನಳಿಗೆಯ ಈಡುಗಳು ರೂಪಿಸುವ ಸಮಾಜವಾದಿ ಸುಧಾರಣಾನೆಲೆಯ ಚಿಂತನೆಗಳು ಅಥವಾ ಗಾಂಧಿ – ಲೋಹಿಯಾ ಪ್ರಣೀತ ಲಿಬರಲ್ ಚಿಂತನೆಗಳು ದಲಿತರನ್ನು ಮುಖ್ಯವಾಹಿನಿಯಿಂದ ದೂರವಿಡುವ ಹುನ್ನಾರಗಳಾಗಿ ರೂಪುಗೊಂಡು ಶ್ರೀಮಂತ ಶೂದ್ರ, ವೈದಿಕ, ಅಧಿಕಾರಸ್ಥ ಸಮುದಾಯದ ಅಸ್ತ್ರವಾಗುತ್ತಾರೆ.

ಈ ಹಿನ್ನೆಲೆಯಲ್ಲಿ ಭಾರತೀಯ ಸಂಸ್ಕೃತಿಯನ್ನು, ಬದುಕುವ ಮಾರ್ಗವನ್ನು, ಸಮಾನತಾಭಾವನೆಯನ್ನು ಆರ್ಥಿಕ ನೀತಿಯನ್ನು ನ್ಯಾಯಿಕ ವಿಧಾನವನ್ನು ಅಂಬೇಡ್ಕರ್‌ರವರ ಚಿಂತನೆಗಳಿಂದ ರೂಪಿಸಿಕೊಳ್ಳ



ಬೇಕಾಗಿದೆ. ದುರಂತವೆಂದರೆ, ಜಗತ್ತಿಗೆ 'ಜ್ಞಾನದ ಬೆಳಕಾದ' ಅಂಬೇಡ್ಕರ್ ಇಂಡಿಯಾದಲ್ಲಿ ಏಕಕಾಲಕ್ಕೆ ದಲಿತರಿಗೆ 'ದೇವರಾಗಿ' ಮೇಲ್ವರ್ಗದವರಿಗೆ ಓಟಿನ ಟ್ರಂಪ್‌ಕಾರ್ಡ್ ಆಗಿ ಪರಿವರ್ತಿತರಾಗುತ್ತಿದ್ದಾರೆ. ಇಂತಹ ಸ್ಥಿತಿಯಲ್ಲಿ ಪುರೋಹಿತಶಾಹಿ ಮತ್ತು ಪ್ರಭುತ್ವವು ಅಂಬೇಡ್ಕರ್‌ರವರ ಹೆಗಲಮೇಲೆ ಕೋವಿಯನ್ನಿಟ್ಟು ದಲಿತಕೇರಿಗಳನ್ನು ಉಡಾಯಿಸುತ್ತಿದೆ. ಪ್ರಜ್ಞಾವಂತ ಸಮಾಜವೇ ತಲೆತಗ್ಗಿಸುವಂತಹ ಅನೇಕ ಘಟನೆಗಳು ಈ ದೇಶದಾದ್ಯಂತ ನಿತ್ಯವೂ ನಡೆಯುತ್ತಿದ್ದರೆ ಅದೇ ಸಂವಿಧಾನದ ಹೆಸರಿನಲ್ಲಿರುವ ಪಾರ್ಲಿಮೆಂಟ್, ವಿಧಾನಸೌಧಗಳು, ಕೋರ್ಟ್, ಪೊಲೀಸ್ ಠಾಣೆಗಳು ದಲಿತರ ಕೇರಿಗಳಿಂದ ಗಾವುದ ದೂರ ಉಳಿದಿರುವುದು ಏನನ್ನು ಸೂಚಿಸುತ್ತದೆ? ಆದ್ದರಿಂದ ದಲಿತರು ಈಗಿರುವ ರಾಜಕೀಯ - ಸಾಮಾಜಿಕ-ಆರ್ಥಿಕ ವಾಂಛೆಗಳಿಗಿಂತ ತಮ್ಮ ಬದುಕನ್ನು ರೂಪಿಸಿಕೊಳ್ಳುವ ಶಾಶ್ವತ ಸ್ಥಿತಿಯನ್ನು ಧ್ಯಾನಿಸಬೇಕು. ಅದಾಗಲು ಅಂಬೇಡ್ಕರ್ 'ಹೆಗಲ ಮೇಲಿರುವ' ಆ ಮೂಲಕ ದಲಿತ ಕೇರಿಯ ಕಡೆ ಗುರಿಮಾಡಿಕೊಂಡ 'ಜೋಡಿ ನಳಿಗೆಗಳನ್ನು' ಅರ್ಥ ಮಾಡಿಕೊಳ್ಳಬೇಕಾಗಿದೆ. ಆದರೆ ದಲಿತರಿಗೆ ಅಂಬೇಡ್ಕರ್ ಅವರನ್ನು ಅರ್ಥ ಮಾಡಿಸುತ್ತಿರುವ ವ್ಯವಸ್ಥೆ ಯಾವ ಬಗೆಯದು ?



**ಬಳಸುದಾರಿ**

ನಾವಿಂದು ಓದುತ್ತಿರುವ ಅಂಬೇಡ್ಕರ್, ಗಾಂಧಿಯ ಚಿಂತನೆಗಳಿಗಾಗಿ, ಲೋಹಿಯಾವಾದದ ಸಮರ್ಥನೆಗಾಗಿ ಮತ್ತು ಸ್ವಾತಂತ್ರ್ಯ ಚಳವಳಿಯ ಘಟನಾವಳಿಯ ಪುನರ್ ರೂಪಕವಾಗಿದ್ದಾರೆ. ಸ್ವತಂತ್ರವಾಗಿ ಅಂಬೇಡ್ಕರ್‌ರವರ ಪ್ರಖರ ಚಿಂತನಾಕ್ರಮವನ್ನು ಅರ್ಥೈಸಲಾರದೆ ಸಂವಿಧಾನವನ್ನು ನಿರ್ವಹಿಸಲು ಸಾಧ್ಯವಿಲ್ಲ. ಆದರೆ ಇಂದು ನಮ್ಮ ಕಣ್ಣಮುಂದಿರುವ ಚುನಾವಣಾ ವ್ಯವಸ್ಥೆ ಮತ್ತು ಅದು ರೂಪಿಸಿ ಕಳುಹಿಸಿಕೊಡುವ ಪ್ರತಿನಿಧಿಗಳ ಜ್ಞಾನದ ಮಟ್ಟ ಹಾಗೂ ಪರಿಸ್ಥಿತಿಯ ಕೈಗೊಂಬೆಯಾದ ಅಥವಾ ಜಾತಿಪ್ರತಿನಿಧೀಕರಣದ ಅವರ ದನಿಯಿಂದ 'ನಿಜದ ಅಂಬೇಡ್ಕರ್' ರೂಪುಗೊಳ್ಳಲು ಸಾಧ್ಯವೇ ಎಂಬ ಪ್ರಶ್ನೆ ನಮ್ಮನ್ನು ಕಾಡುತ್ತದೆ. ಹೀಗಾದಾಗ ನಮ್ಮ ಕಣ್ಣ ಮುಂದಿನ ಅನೇಕ ಘಟನಾವಳಿಗಳಿಗೆ ಮೂಕಸಾಕ್ಷಿಗಳಾಗಿ ನಾವು ನಿಲ್ಲಬೇಕಾಗಿದೆ. ಇಡಿ ಇಂಡಿಯಾದ ದಲಿತ ಚರಿತ್ರೆಯೇ ರಕ್ತಸಿಕ್ತವಾದುದು. ಒಂದು ದಿನವೂ ದಲಿತರ ಮೇಲಾಗುವ ದೌರ್ಜನ್ಯಕ್ಕೆ ವಿರಾಮವಿಲ್ಲ. ಬೆಲ್ಚಿ, ಬದನವಾಳು, ತತ್ತೂರು, ಚುಂಡಿಗೇರಿ, ಕ್ಯಾಸನಕೆರೆ, ಕಂಬಾಲಪಲ್ಲಿ, ಸೂಗೂರು, ಭದ್ರಕ್‌ನಗರ, ಖೈರ್ಲಾಂಜಿಯಲ್ಲಿ ನಡೆದ ಅಮಾನುಷ, ಬರ್ಬರ ಕೊಲೆ, ಅತ್ಯಾಚಾರ, ಸಾಮಾಜಿಕ ಬಹಿಷ್ಕಾರಗಳೂ ಭಾರತದ ಚರಿತ್ರೆಯಲ್ಲಿ ಯಾವ ರೂಪದಲ್ಲಿ ದಾಖಲಾಗಿವೆ ಮತ್ತು ಅವುಗಳನ್ನು ಕುರಿತು ಬರೆಯುತ್ತಿರುವ ಉದಾರವಾದಿ ವೈದಿಕ ಮತ್ತು ದಲಿತ ನವಬ್ರಾಹ್ಮಣರ ಬರಹಗಳು ಕೂಡ, ಭಾರತದ ಚರಿತ್ರೆಯಲ್ಲಿ ದಲಿತರ ವಿರುದ್ಧ ನೇರವಾಗಿ ವೈದಿಕರು ಭಾಗವಹಿಸಿಲ್ಲ. ಅದೇನಿದ್ದರೂ ಶೂದ್ರ ಸಮುದಾಯದಿಂದ ನಡೆದದ್ದು ಎಂಬ ಧ್ವನಿಯಲ್ಲಿ ಮಾತನಾಡುತ್ತಿದ್ದಾರೆ. ಮುಂದೊಂದು ದಿನ ಇದೇ ನಿಜವಾದ ಚರಿತ್ರೆಯಾಗಿ ರೂಪುಗೊಂಡಾಗ, ಶೂದ್ರರು ದಲಿತರ ನೇರ ಶತ್ರುಗಳಾಗಿ ನಿಂತಿರುತ್ತಾರೆ. ಮತ್ತೊಮ್ಮೆ ವೈದಿಕ ವರ್ಗವು ತನ್ನೊಳಗಿನ ಮುಚ್ಚಿಟ್ಟುಕೊಂಡ ಅಜೆಂಡಾವನ್ನು ಹೊಸ ರೂಪದಲ್ಲಿ, ಹೊಸ ಜಾಗದಲ್ಲಿ ತೆರೆಯುತ್ತದೆ. ಅಲ್ಲಿ ದಲಿತರು ಸಂಪೂರ್ಣ ನವಬ್ರಾಹ್ಮಣರಾಗಿ ಪರಿವರ್ತನೆಗೊಂಡು ತಮ್ಮ ಹೆಗಲ ಮೇಲೆ 'ಅವರಿಟ್ಟ' 'ಜೋಡಿ ನಳಿಗೆ'ಯನ್ನು ಹೇರಿಕೊಂಡು ಮತ್ತೊಂದು ಅಮಾಯಕ ದಲಿತಕೇರಿ ಕಡೆ ಗುರಿಯಿಟ್ಟು ಉಡಾಯಿಸುತ್ತಾರೆ. ಅದಕ್ಕಾಗಿಯೇ ಇಲ್ಲಿ 'ಅಂಬೇಡ್ಕರ್' ಚಿಂತನೆಗಳೆಲ್ಲ ಸವಕಲಾಗುತ್ತಾ ಸಾಗುತ್ತಿವೆ. ಪ್ರಜ್ಞೆಯನ್ನು ರೂಪಿಸಬೇಕಾದ ಅಂಬೇಡ್ಕರ್ ಶಕ್ತಿಯು ಪೂಜೆಯ ಕಡೆ ಸರಿಯುತ್ತಿದೆ. ಮನುಷ್ಯನ ಬಿಡುಗಡೆಯ ಸಂಕೇತವಾದ ಬುದ್ಧ ಅವತಾರವಾಗಿ ರಥಾಗುತ್ತಿದ್ದಾನೆ. ಸಮಗ್ರ ಶೋಷಿತರ ದನಿಯಾಗಿದ್ದ ಅಂಬೇಡ್ಕರ್ ಕೇವಲ ದಲಿತರ ಕೇರಿಯ ದೇವರಾಗಿ ಮಾರ್ಪಾಡಾಗುತ್ತಿದ್ದಾರೆ. ಇದು ಆಧುನಿಕ ಚರಿತ್ರೆಯಾಗಿ ರೂಪುಗೊಳ್ಳುತ್ತಾ ಸಾಗಿದಾಗ ಅಲ್ಲಿ ಚಿಂತನೆಗಳ ಜಾಗದಲ್ಲಿ ಪ್ರತಿಮೆಗಳಿರುತ್ತವೆ (ಮೂರ್ತಿ). ಸಂವಿಧಾನಾತ್ಮಕ ಹಕ್ಕೊತ್ತಾಯಗಳು, ಸರ್ಕಾರ ನೀಡುವ ಋಣಭಾರವಾಗುತ್ತವೆ. ಜಾತಿಗೊಂದು ಪ್ರಾಧಿಕಾರ ರಚಿಸುತ್ತಾ ಸಾಂಘಿಕಶಕ್ತಿಯನ್ನು ಒಡೆದು ದಲಿತರನ್ನು ಅಸಂಘಟಿತರನ್ನಾಗಿಸುವ ಹುನ್ನಾರು ಸಾಗುತ್ತಲೇ ಇರುತ್ತದೆ. ಆಗಲೂ ದಲಿತರ ಹೆಗಲ ಮೇಲೆ ಸಂವಿಧಾನವಿರುವುದಿಲ್ಲ, ಬದಲಿಗೆ ಪ್ರಭುತ್ವ-ಪುರೋಹಿತಶಾಹಿ ಹೇರಿದ 'ಜೋಡಿನಳಿಗೆಯ ಕೋವಿ' ಇರುತ್ತದೆ. ಮತ್ತದು ದಲಿತರ ಎದೆಗೆ ಗುರಿಯಿಟ್ಟು ಕಾದಿರುತ್ತದೆ.

**ದಾರಿಯಿಂದ**

ಇದು ವರ್ತಮಾನದ ತಳಮಳವಾದರೂ ಇದಕ್ಕೆ ದಾರಿ, ದೂರದಿಂದಲೇ ಸಾಗಿಬಂದಿದೆ. ಭೂಮಿ ಹುಟ್ಟಿದಾಗಿನಿಂದ ಭೂಮಿಯೊಂದಿಗಿದ್ದ ದಲಿತರು ಇಂದು ಅದರಿಂದ ವಂಚಿತರಾಗಿ ಬೇರೆಯವರು ನೋಡಿ ಕನಿಕರ ಪಡುವ ದೈನೇಸಿ ಸ್ಥಿತಿ ತಲುಪಿದ್ದಾರೆ. ದೇವರು, ಮೂಢನಂಬಿಕೆ, ಜಾತಿ, ಅಂಧಶ್ರದ್ಧೆ ಹೆಸರಿನಲ್ಲಿ ಕಾಳಜಿವಹಿಸುವಂತೆ ನಾಟಕವಾಡಿದ 'ಉಳ್ಳವರ' ಸಮಾಜ, ಸುಧಾರಣೆಯ ಹೆಸರಿನಲ್ಲಿ ಇಡೀ ಸಮುದಾಯವನ್ನು ನಿರ್ಗತಿಕರನ್ನಾಗಿಸುತ್ತಿದೆ. ಬುದ್ಧನೊಂದಿಗಿದ್ದ ನೊಂದವರನ್ನು ಹಾಗೇ ಇಟ್ಟುಕೊಂಡು ಬುದ್ಧನನ್ನು ದೇವರನ್ನಾಗಿಸಿದ ಈ ವ್ಯವಸ್ಥೆ ಕಳೆದ ಆರು ದಶಕಗಳಲ್ಲಿ ಅನೇಕ ದೀರ್ಘಯೋಜನೆಗಳನ್ನು ಹೆಣೆಯುತ್ತಲೇ ದೈನೇಸಿ ಸ್ಥಿತಿಯನ್ನಷ್ಟೇ ದೀರ್ಘವಾಗಿಸಿದೆಯೇ ಹೊರತು ಅಂಬೇಡ್ಕರ್ ಕಂಡ ಕನಸು ಹಾಗೂ ಪ್ರಯೋಗಗಳನ್ನು ನನಸು ಮಾಡಲು ಅಶಕ್ತವಾಗಿದೆ. ಈ ದೃಷ್ಟಿಯಿಂದ ಮೀಸಲಾತಿಗೆ ಸಂಚಕಾರವೂ ಈಗ ನಡೆಯುತ್ತಿದೆ. ೬೦ ವರ್ಷಗಳಿಂದ ಕೆಲವೇ ಅಸ್ಪೃಶ್ಯ ಜಾತಿಗಳಿಗೆ ಮೀಸಲಾಗಿದ್ದ ಶೇಕಡ ೧೫ರಷ್ಟು ಅವಕಾಶಗಳಿಗೆ ಕಾಲಕಾಲಕ್ಕೆ ರಾಜಕೀಯ ಲಾಭಕ್ಕೆ ಹೊಸ-ಹೊಸ ಜಾತಿ ಸಮುದಾಯಗಳನ್ನು ತಂದು ಸೇರಿಸುವ 'ಅಪರಾಧವೂ' ನಡೆಯುತ್ತಿದೆ. ಆದರೆ ಶೇಕಡಾವಾರು ಮಾತ್ರ ಬದಲಾಗುವುದಿಲ್ಲ. ಕಳೆದ ಸಂಸತ್ತಿನಲ್ಲಿದ್ದ 'ಸಾಮಾಜಿಕನ್ಯಾಯ' ಖಾತೆಯ ಮೀರಾಕುಮಾರ್ ಅವರು ಈ ಶೇಕಡಾವಾರು ಮೀಸಲಾತಿಯನ್ನು ಹೆಚ್ಚಿಸುವ ಪ್ರಸ್ತಾಪ ಮಾಡಿದ್ದಾರಾದರೂ ಅದು ಕಾರ್ಯರೂಪಕ್ಕೆ ಬಂದಿಲ್ಲ, ಬರಲ್ಲ!! ಈಗ ಮತ್ತೊಮ್ಮೆ ಅವರೇ ಗೆದ್ದು ಬಂದು ದೇಶದ ಚರಿತ್ರೆಯಲ್ಲೇ ಮೊದಲ ಮಹಿಳಾ ಸ್ಪೀಕರ್ ಆಗಿದ್ದಾರೆ. ಅಂಬೇಡ್ಕರ್ ಅಂದು ಎತ್ತಿದ್ದ 'ಮಹಿಳಾ ಮೀಸಲು' ಮಸೂದೆಗೆ ಈಗ ಜೀವ ಬಂದೀತು!? ಆದರೆ ಅಲ್ಲಿಯೂ ಮತ್ತೊಮ್ಮೆ ಅಸ್ಪೃಶ್ಯರ ಕೋಟಾಗೆ ಸಂಚಕಾರ ಬರುವುದಿಲ್ಲ ಎಂಬುದನ್ನು ಹೇಗೆ ನಂಬುವುದು ?

ಈ ಎಲ್ಲವನ್ನು ದಲಿತರು ಯಾವ ಪರಿಭಾಷೆಯಲ್ಲಿ ಅರ್ಥೈಸಬಹುದೆನ್ನುವದೇ ಜಿಜ್ಞಾಸೆಯಾಗಿದೆ. ಚಳುವಳಿಗಳು ಸತ್ತಿವೆ. ಹೋರಾಟಗಾರರೆಲ್ಲ ಸಕ್ರಿಯ ರಾಜಕೀಯ ಪಕ್ಷಗಳಲ್ಲಿ ಜಮೆಯಾಗುತ್ತಿದ್ದಾರೆ. ಜಾತಿ-ಜಾತಿ ಸಂಘಟನೆಗಳಾಗಿ ಅಸಂಘಟಿತರಾಗಲು ತರಾತುರಿಯಲ್ಲಿದ್ದಾರೆ. ಈ ದೃಷ್ಟಿಯಿಂದ ಅಂಬೇಡ್ಕರ್ ಕಂಡುಕೊಂಡಿದ್ದ ಸಮಗ್ರ ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಎಲ್ಲಾ ಕ್ಷೇತ್ರಗಳಲ್ಲೂ ಕಲ್ಪಿಸದೇ ಹೋದರೆ ದಲಿತರ ಹೆಗಲ ಮೇಲಿರುವ ವ್ಯವಸ್ಥೆಯ ಜೋಡಿ ನಳಿಗೆಯ ಈಡನ್ನು ಹೊಡೆಯುತ್ತಲೇ ಇರುತ್ತದೆ. ಆಧುನಿಕ ಪ್ರಜಾತಂತ್ರದ ಜೀವಂತ ಸಮಾಧಿಗಳು ತತ್ತೂರು, ಬದನವಾಳು, ಬೆಲ್ಚಿ, ಕಂಬಾಲಪಲ್ಲಿ, ಖೈರ್ಲಾಂಜಿಯಾಗಿ ರೂಪುಗೊಳ್ಳುತ್ತಿರುತ್ತವೆ.

**ಡಾ|| ಕುಂಸಿ ಉಮೇಶ**
ಕನ್ನಡ ಅಧ್ಯಾಪಕ, ಸರ್ಕಾರಿ ಡಿಗ್ರಿ ಕಾಲೇಜು, ಹೊಳೆಹೊನ್ನೂರು - ಶಿವಮೊಗ್ಗ

# ಶಿಶುನಾಳ ಶರೀಫ ಮತ್ತು ಶಿಷ್ಟ ಸಾಹಿತ್ಯ

ಡಾ|| ಬಿ. ಜೆ. ಚನ್ನೇಶ್ ಹೊನ್ನಾಳಿ

ಶಿಶುನಾಳ ಶರೀಫ ಕನ್ನಡದ ಸರ್ವಜ್ಞ, ತೆಲುಗಿನ ವೇಮನರಂತೆ ಜನಪದ, ದೇಶಿ ಮೂಲದ ಹಾಡುವ ಕವಿ (ಬಾರ್ಡ್). ಆತನು ಅನುಭಾವ ಮತ್ತು ವಾಕ್ಪರಂಪರೆಯ ಕವಿ ಕೂಡ. ಈತ ಕೋಮು ಸೌಹಾರ್ದತೆಯ ಬಹುದೊಡ್ಡ ಪ್ರತೀಕ. ಮುಸ್ಲಿಮನಾಗಿ ಹುಟ್ಟಿ ಹಿಂದೂ ಗುರುವನ್ನು, ವೀರಶೈವ ಧರ್ಮಕ್ಕೆ ಸೇರಿದ ಶಿಶುನಾಳ ಬಸವಣ್ಣನನ್ನು ಆರಾಧ್ಯ ದೈವವನ್ನಾಗಿ ಮಾಡಿಕೊಂಡಿದ್ದು, ಕನ್ನಡ ಹಾಗೂ ಉರ್ದುವಿನಲ್ಲಿ ಬರೆಯುವ ಮೂಲಕ ಭಾಷಿಕ ಸೌಹಾರ್ದತೆಗೂ ಉದಾಹರಣೆ ಆದದ್ದು ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚರಿತ್ರೆಯಲ್ಲಿ ಒಂದು ವಿಸ್ಮಯ.

ಶರೀಫ ಹಾಗೂ ಅವನ ಒಟ್ಟು ಸಾಹಿತ್ಯ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಕಾರಣಕ್ಕೆ ಇವತ್ತು ಮುಖ್ಯವಾಗುತ್ತಿದೆ. ಕನ್ನಡ ಹಾಗೂ ಉರ್ದು ಭಾಷೆಯ ಅವನ ತತ್ವಪದ ಹಾಗೂ ಇತರ ಸಾಹಿತ್ಯ, ಕನ್ನಡದ ಬಹು ದೊಡ್ಡ ಆಸ್ತಿ. ಆದರೆ ಅದಕ್ಕಿಂತಲೂ ಮುಖ್ಯವಾದದ್ದು ವರ್ತಮಾನದ ನಮ್ಮ ಬೌದ್ಧಿಕ ಚಟುವಟಿಕೆ ಮಾತ್ರ. ಆದ್ದರಿಂದ ಇಲ್ಲಿ ರಾಜಪರ, ಧರ್ಮಪರವಾದ ವಸ್ತು ಇದ್ದು, ಭಾಷೆ ಸಂಸ್ಕೃತ ಭೂಯಿಷ್ಠವಾಗಿರುತ್ತದೆ. ಸಾಮಾನ್ಯರಿಂದ ದೂರವಾಗುವ ಶಿಷ್ಟ ಸಾಹಿತ್ಯ ಬಿಡುವಿನ ವೇಳೆಯ ಸಾವಧಾನದ ರಚನೆ ಆಗಿರುತ್ತದೆ. ಇಲ್ಲಿ ಸಿದ್ಧ ಸೂತ್ರದ ಚೌಕಟ್ಟು ಇದ್ದು, ಭಾಷೆ ಮತ್ತು ಅಲಂಕಾರಗಳು ಮುಖ್ಯವಾಗುತ್ತವೆ. ವ್ಯಕ್ತಿಯ ಸ್ವತಂತ್ರ ಸೃಷ್ಟಿಯಾದ ಶಿಷ್ಟ ಸಾಹಿತ್ಯಕ್ಕೆ ಒಂದು ಪರಂಪರೆಯಿದೆ. ಇಂಥ ಶಿಷ್ಟ ಸಾಹಿತ್ಯ ಪರಂಪರೆಯಲ್ಲಿ ಸರ್ವಜ್ಞ, ದಾಸರು, ಶರೀಫರು ಬರುವರಾದರೂ ಶಿಷ್ಟ ಸಂಸ್ಕೃತಿಗೆ, ಸಾಹಿತ್ಯಕ್ಕೆ ಭಿನ್ನರಾಗಿ ವಿಶಿಷ್ಟರಾಗಿ ಅಭಿವ್ಯಕ್ತಿಸುವ ಕಾರಣದಿಂದ ವಿಶಿಷ್ಟರಾಗಿ, ವಿಶೇಷರಾಗಿ ಕಾಣುತ್ತಾರೆ. ಈ ಕಾರಣದಿಂದ ಇವರು ಜನಪದ, ದೇಸಿ ಕವಿಗಳಾಗುತ್ತಾರೆ.

ಶಿಷ್ಟ ಸಾಹಿತ್ಯಕ್ಕೆ ಪರ್ಯಾಯವಾದ ಜನಪದ ಸಾಹಿತ್ಯ ಜನಪದದಿಂದಲೆ, ಸಾಮಾಜಿಕದಿಂದಲೆ ಕಾವ್ಯವಸ್ತುಗಳನ್ನು ಪಡೆಯುವುದು ವಿಶೇಷ. ಹಾಗಾಗಿ ಇಲ್ಲಿ ಬಹುಸಂಖ್ಯಾತರ ಬದುಕು, ಭಾಷೆ ಬಳಕೆಯಾಗುತ್ತವೆ. ಇಲ್ಲಿ ಬೌದ್ಧಿಕ ಚಟುವಟಿಕೆಯ ಜೊತೆಗೆ 'ಸಾಮಾಜಿಕ ಕ್ರಿಯೆ'ಯೂ ಆಗುತ್ತದೆ. ಇದು ದುಡಿವ ವೇಳೆಯ, ಸಾಂದರ್ಭಿಕ ಸೃಷ್ಟಿಯಾದ ಕಾರಣ ಇದರಲ್ಲಿ ಶ್ರಮಿಕ ವರ್ಗ, ಕೆಳವರ್ಗ ಹೆಚ್ಚಾಗಿದ್ದು ಬೆವರಿನ ವಾಸನೆಯಿರುತ್ತದೆ. ಈ ಕಾರಣ ದಿಂದಲೇ ಇಲ್ಲಿ ಅನುಭವಗಳು, ಘಟನೆಗಳು, ಸಂದರ್ಭಗಳು ಹಾಡು ಅಥವಾ ಪದಗಳ ರೂಪ ಪಡೆಯುತ್ತವೆ. ಹಾಡು, ಪದ ವ್ಯಕ್ತಿಯ ವೈಯಕ್ತಿಕವಾದರೂ ಅದರ ಸೃಷ್ಟಿಕ್ರಮದ ಹಿಂದೆ ಸಮುದಾಯದ ಆಶಯ ಮತ್ತು ಒತ್ತಾಯ ಗಳಿರುತ್ತವೆ. ಗ್ರಾಮ್ಯ, ದೇಸಿ ಪದಗಳೇ ಮುಕ್ಕಾಲು ಪಾಲು ಇಲ್ಲಿದ್ದು ಇಲ್ಲಿಯ ಕವಿಗಳೆಲ್ಲ 'ಆಶುಕವಿ'ಗಳೇ ಆಗಿರುತ್ತಾರೆ. ಅನಂತರ ಲಿಖಿತ ರೂಪಕ್ಕೆ ತಂದರೂ ಆರಂಭದಲ್ಲಿ ಮೌಖಿಕ, ವಾಕ್ ಪರಂಪರೆಯಲ್ಲಿರುತ್ತದೆ. ಈ ದೃಷ್ಟಿಯಿಂದ ಸರ್ವಜ್ಞ, ದಾಸರು, ಶರೀಫ ಮೊದಲಾದ ಅನುಭಾವಿಗಳು ಜನಪದ ಹಾಗೂ ದೇಸಿ ಮೂಲದ ಆಶುಕವಿಗಳಾಗಿದ್ದಾರೆ.

ಬಿಕ್ಕಟ್ಟಿನ ಈ ಸಂದರ್ಭದಲ್ಲಿ ಕೋಮು ಸೌಹಾರ್ದತೆಯ ಬಹು ದೊಡ್ಡ ಥೀಮ್ ಆಗಿ ಆತ ನಮ್ಮ ಮುಂದಿರುವುದು. ಇದಕ್ಕೆ ಕಾರಣ ಚಾರಿತ್ರಿಕ ಬಿಕ್ಕಟ್ಟುಗಳು. ಅದು ಕಾರಣ, ಚಾರಿತ್ರಿಕ ಬಿಕ್ಕಟ್ಟುಗಳೇ ಕವಿಗಳನ್ನು ಹಾಗೂ ದಾರ್ಶನಿಕರನ್ನು ನಮಗೆ ಮುಖ್ಯವಾಗಿಸುತ್ತವೆ. ಈ ಕಾರಣಕ್ಕಾಗಿಯೇ ಇವತ್ತು ಶರೀಫ, ಕುವೆಂಪುರಂಥವರು ಮರುವ್ಯಾಖ್ಯಾನ ಗೊಂಡು ಸಾಹಿತ್ಯಕ್ಕಿಂತ ಸಾಂಸ್ಕೃತಿಕವಾಗಿ ಮುಖ್ಯ ವಾಗುತ್ತಿರುವುದು.

ಸಾಹಿತ್ಯದಲ್ಲಿ ಶಿಷ್ಟ (ಲಿಖಿತ) ಮತ್ತು ಪರಿಶಿಷ್ಟ (ಜನಪದ) ಎಂಬ ವಿಭಜನೆಯೇ ಕೃತಕವೆನಿಸುತ್ತದೆ. ಯಾವುದು ಶಿಷ್ಟ? ಯಾವುದು ಪರಿಶಿಷ್ಟ? ಒಬ್ಬ ಕವಿ ಹಾಡುತ್ತಾನೆ ಅಥವಾ ಹೇಳುತ್ತಾನೆ ಎಂದರೆ ಪರಿಶಿಷ್ಟ, ಜನಪದ. ಅದನ್ನೇ ಆತ ಅಥವಾ ಬೇರೊಬ್ಬರು ಬರೆದರೆ ಶಿಷ್ಟ! ಅಂದರೆ ಅಕ್ಷರ ರೂಪಕ್ಕಿಳಿದದ್ದೆಲ್ಲ ಶಿಷ್ಟ ಎಂದಾಯಿತು. ಈ ಅರ್ಥದಲ್ಲಿ ಸರ್ವಜ್ಞ, ದಾಸರು, ಶರೀಫರಂಥವರು ಜನಪದ ಮತ್ತು ಶಿಷ್ಟ ಕವಿಗಳು. 'ಹಾಡು'ವ ಗುಣವೇ ಇವರ ಕಾವ್ಯದ ಮುಖ್ಯಾಂಶ. ಈ ಕಾರಣಕ್ಕಾಗಿಯೇ ಇವರೆಲ್ಲ ಜನಪ್ರಿಯ, ಜನಸಾಮಾನ್ಯ ಜನಕವಿಗಳಾಗಿದ್ದಾರೆ.

ಹಾಗೆಂದು ಬರೆದದ್ದೆಲ್ಲ ಅಥವಾ ಅಕ್ಷರ ರೂಪಕ್ಕಿಳಿಸಿದ್ದು ಮಾತ್ರವೇ 'ಶಿಷ್ಟ' ಎಂಬುದು ಸರಳೀಕೃತ ವ್ಯಾಖ್ಯಾನವಾಗಿ ಬಿಡುತ್ತದೆ. ಹಾಗಾದರೆ ಒಂದು ಜನಪದ ಹಾಡು, ಶರೀಫನ ಪದ, ಕೇವಲ ಅಕ್ಷರ ರೂಪಕ್ಕೆ ಇಳಿದಷ್ಟರಿಂದಲೆ ಶಿಷ್ಟವಾಗುತ್ತದೆಯೇ? ಅದಕ್ಕೆ ಮೊದಲು ಶಿಷ್ಟ-ಪರಿಶಿಷ್ಟ ಪರಿಕಲ್ಪನೆಗಳನ್ನು ಸ್ಪಷ್ಟಗೊಳಿಸಿಕೊಳ್ಳಬೇಕು. ಶಿಷ್ಟ ಎಂದರೆ ಆಚಾರ, ಸತ್ಸಂಪ್ರದಾಯ. ಶಿಷ್ಟ ಸಂಸ್ಕೃತಿ ಎಂದರೆ ಸಿದ್ಧ ಸಂಸ್ಕೃತಿ. ಶಿಷ್ಟ ಸಾಹಿತ್ಯ ಎಂದರೆ, ಪುರಾಣ ಪುರುಷರ, ತೀರ್ಥಂಕರರ, ರಾಜರು ಮೊದಲಾದವರ ಆಡಂಬರದ ಕಥೆಯನ್ನು ವಿಜೃಂಭಿತ ಶೈಲಿಯಲ್ಲಿ ಹೇಳುವುದು. ಇಲ್ಲಿ ಬಹುಸಂಖ್ಯಾತರ ಭಾಷೆ, ಬದುಕು ಬರುವುದಿಲ್ಲ. ಕೇವಲ ರಾಜರು ಮತ್ತು ಪ್ರಮುಖ ಧರ್ಮಕ್ಕೆ ಸೀಮಿತವಾಗಿರುತ್ತದೆ. ಹಾಗಾಗಿ ಶಿಷ್ಟ ಕವಿಗಳಿಗೆ ಸಾಹಿತ್ಯವೆಂಬುದು ಒಂದು

> ಶರೀಫನ ಸಾಹಿತ್ಯ-ತತ್ವಪದಗಳು ದೇಶ, ಭಾಷೆ, ಗಡಿಯನ್ನು ಮೀರಿದ್ದಾಗಿದ್ದು, ಯಾವತ್ತೂ ವರ್ತಮಾನಕ್ಕೆ ಸ್ಪಂದಿಸುತ್ತಾ ಇರುತ್ತವೆ. ಶಿಷ್ಟ ಸಾಹಿತ್ಯ ಸೃಷ್ಟಿಯನ್ನು ಬಿಟ್ಟು ಜಾನಪದೀಯ, ದೇಸಿ ಸಾಹಿತ್ಯ ಸೃಷ್ಟಿಯ ಕ್ರಮವನ್ನು ಆಯ್ಕೆ ಮಾಡಿಕೊಂಡಿದ್ದರಲ್ಲಿಯೇ ಶರೀಫನ ವೈಶಿಷ್ಟ್ಯತೆಯನ್ನು ಗುರುತಿಸಬಹುದಾಗಿದೆ. ಹಾಗಾಗಿ ಅವನ ಪದಗಳಲ್ಲಿ ಸೂಜಿ, ಕಂಪನಿ ಸರಕಾರ, ಜಿಟ್ಟಿಹುಳು, ಕಾದರಿ, ಇತ್ಯಾದಿ ಲೌಕಿಕದ ಪದಗಳು ಬಂದಹಾಗೆ ಅಧ್ಯಾತ್ಮದ, ಯೋಗ ಪರಿಭಾಷೆಯ ಪದಗಳೂ ಬರುತ್ತವೆ. ಒಂದು ವೇಳೆ ಶಿಷ್ಟ ಭಾಷೆಯನ್ನೇ ಬಳಸಿ, ಶಿಷ್ಟ ಸಾಹಿತ್ಯವನ್ನು ರಚಿಸಿದ್ದರೆ ಶರೀಫನು ಇಂದು ಇಷ್ಟು ಪ್ರಸಿದ್ಧನಾಗಲು ಸಾಧ್ಯವಿರಲಿಲ್ಲ.

ಶಿಶುನಾಳ ಶರೀಫನು ಸ್ವತಃ ಶಿಷ್ಟ ಕಾವ್ಯ ಬರೆಯುವ ಶಕ್ತಿ, ಸಾಮರ್ಥ್ಯಗಳಿದ್ದರೂ ಗ್ರಾಮ್ಯ ಭಾಷೆ ಬಳಸಿ ಜನಪದ, ದೇಸಿ ಕಾವ್ಯ ಹಾಡಿದ್ದಕ್ಕೆ ವಿಶಿಷ್ಟವಾದ ಕಾರಣವಿರಬಹುದೆ? ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಶರೀಫರು ತತ್ವಪದಗಳನ್ನು 'ಬರೆಯಲಿಲ್ಲ'. ಸಾಂದರ್ಭಿಕವಾಗಿ ಕಟ್ಟಿ ಹಾಡಿದ. ಅನಂತರ ಅವುಗಳನ್ನು 'ಬೇರೆ'ಯವರು 'ನೆನಪಿಟ್ಟು' ಬರೆದರು. ಹೀಗಾಗಿ ಒಂದೇ ಪದ ಬೇರೆಬೇರೆ ರೀತಿ ಬಳಕೆ ಆಗಿ, ಪಾಠಾಂತರಗಳೂ, ವ್ಯತ್ಯಾಸಗಳೂ ಕಾಣಬರುತ್ತವೆ. 'ಶಿವಲೋಕದಿಂದ ಒಬ್ಬ ಸಾಧು ಬಂದಾನವ್ವ', 'ಕೋಡಗನ ಕೋಳಿ ನುಂಗಿತ್ತಾ'... ಮೊದಲಾದ ಪದಗಳನ್ನು ಗಮನಿಸಬಹುದಾಗಿದೆ. ಶರೀಫನೇ 'ಬರಕೋ ಪದ ಬರಕೋ' ಅನ್ನುತ್ತಾನೆ. ಇದು ಪದ ಕಟ್ಟಿ ಹಾಡುವುದು; ಇಲ್ಲಿ ಕಟ್ಟುವ ಮತ್ತು ಕಟ್ಟಿದ್ದನ್ನು ಹಾಡುವ ಎರಡು ಕ್ರಿಯೆಗಳೂ ಒಬ್ಬನಿಂದಲೇ ನಡೆಯುತ್ತವೆ. ಹೀಗೆ ಪದ ಕಟ್ಟಿ ಹಾಡುವಾಗ ಜನರ ಗ್ರಾಮ್ಯ ಅಥವಾ ಆಡುಭಾಷೆಯನ್ನೇ ಅನಿವಾರ್ಯವಾಗಿ ಬಳಸಬೇಕಾಗಿತ್ತು. ಹಾಗೆ ನೋಡಿದರೆ ಶರೀಫನಷ್ಟೇ ಅಲ್ಲ, ಮಧ್ಯಕಾಲೀನದ ಬಹುತೇಕ ಕವಿಗಳ ಕಾವ್ಯ ಹಾಡುಗಬ್ಬವಾಗಿದೆ. ವಚನಗಳೂ, ತ್ರಿಪದಿ, ದಾಸರ ಕೀರ್ತನದಲ್ಲಿ ಮತ್ತು ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ತೀರಾ ಇತ್ತೀಚಿನ ತತ್ವಪದಕಾರರ ರಚನೆಗಳೆಲ್ಲವೂ ಹಾಡುಗಬ್ಬಗಳಾಗಿವೆ. ಹಾಡುವ ಗುಣವೇ ಕಾರಣವಾಗಿ ಇವರ ಹಾಡುಗಳಿಗೆ ಜನರ ನಾಲಗೆಗಳೇ ತಾಳೆಗರಿಗಳಾದವು. ಕುಮಾರವ್ಯಾಸ ಭಾರತ, ಪ್ರಭುಲಿಂಗ ಲೀಲೆ, ಜೈಮಿನಿ ಭಾರತದಂಥ ಕಾವ್ಯಗಳೂ ಸ್ವಲ್ಪ ಬಿಗಿ ಬಂಧದ ಷಟ್ಪದಿ ಕಾವ್ಯಗಳಾಗಿವೆ.

ಶರೀಫ, ಸರ್ವಜ್ಞ, ಕನಕದಾಸರಂಥವರು ಯಾವುದೇ ರಾಜಾಶ್ರಯ, ಮಠಮಾನ್ಯಗಳ ಹಂಗಿನಲ್ಲಿರಲಿಲ್ಲ. ಹೀಗಾಗಿ ಅವರಿಗೆ ಯಾವ ರಾಜರನ್ನೂ, ಪಂಡಿತರನ್ನೂ ಮೆಚ್ಚಿಸುವ ಅಥವಾ ಓಲೈಸುವ ಅಗತ್ಯವಿರಲಿಲ್ಲ. ಶರೀಫ

ಸಮುದಾಯದ ನಡುವಿನಿಂದ ಬಂದವನು. ಸಮುದಾಯದ ಒಬ್ಬ ಸದಸ್ಯನಾಗಿ ಬದುಕಿದವನು. ಶಿಶುವಿನಾಳ-ಗುಡಗೇರಿ ಕುಂದಗೋಳ, ಬಂಕಾಪುರ, ಕಳಸ – ಈ ಸಮುದಾಯಗಳ ಮಧ್ಯೆಯೇ ಬದುಕುತ್ತಿದ್ದುದರಿಂದ ಅವರಿಗೆ ಅರ್ಥವಾಗುವ ಹಾಗೆ ಮತ್ತು ಅವರದೇ ಭಾಷೆಯಲ್ಲಿ ಹಾಡಬೇಕಿತ್ತು. ಇವರೆಲ್ಲ ಹೆಚ್ಚಾಗಿ ಅಕ್ಷರ ಕಲಿಯದವರು. ನೂರಾರು ಆಚರಣೆ, ನಂಬಿಕೆಗಳ ನಡುವೆ ಬದುಕುತ್ತಿದ್ದವರು. ಶರೀಫನಿಗೆ ಇಲ್ಲಿನ 'ಸ್ಥಳೀಯ ಜಗತ್ತು' ಮುಖ್ಯವಾಗಿತ್ತು. ಈ ಸ್ಥಳೀಯ ಸಮುದಾಯದ ಜಗತ್ತಿನೊಂದಿಗೆ ಆತ ಅವರದೇ ನುಡಿಗಟ್ಟು, ಭಾಷೆಗಳಲ್ಲಿ ಅವರಿಗರ್ಥವಾಗುವಂತೆ ಹಾಡುವ ಒತ್ತಡವಿದ್ದ ಕಾರಣ ಆತ ಗ್ರಾಮ್ಯ ಭಾಷೆ ಬಳಸಿ ಪದಕಟ್ಟಿ ಹಾಡಿದ. ಶರೀಫ ಮೂಲತಃ ಸಂತ, ಅನುಭಾವಿ. ಸಂತರು, ಸಾಧುಗಳು, ಅನುಭಾವಿಗಳು, ಸಿದ್ಧರಾದವರೆಲ್ಲರಿಗೂ ತಮ್ಮ ಪದಗಳ ಮೂಲಕ ಸಮುದಾಯಗಳ ಜಾಗೃತಿಯನ್ನು ಹೆಚ್ಚಿಸುವುದು ಗುರಿಯಾಗಿರುತ್ತದೆ. ಹೀಗೆ ಸಮುದಾಯಗಳ ಜನಪದರಿಗೆ ಹಾಗೂ ತಮ್ಮ ವೈಯಕ್ತಿಕ ಅಧ್ಯಾತ್ಮ ಸಾಧನೆಗೆ ಪದ ಕಟ್ಟಿ ಹಾಡುವವರಿಗೆ ಶಿಷ್ಟ ಸಾಹಿತ್ಯ ರಚನೆಯ ಅಗತ್ಯವಿರಲಿಲ್ಲ.




ಶರೀಫನ ವ್ಯಕ್ತಿತ್ವವೇ ಜಂಗಮ, ಸಂಚಾರಿ ಸ್ವರೂಪದ್ದು. ಅನುಭಾವಿಗಳು, ಸಂತರ ಮುಖ್ಯ ಲಕ್ಷಣವೇ ಜಂಗಮತ್ವ, ಸದಾ 'ಚಲನ ಸ್ಥಿತಿ'ಯಲ್ಲಿರುವುದು ಅವರ ಗುಣವಾಗಿರುತ್ತದೆ. ಹಾಗೆ ನೋಡಿದರೆ ಅಲ್ಲಮ, ಅಕ್ಕ, ಬಸವಣ್ಣ, ಸರ್ವಜ್ಞ, ದಾಸರು ಎಲ್ಲರೂ ಜಂಗಮರೆ. ಇವರಲ್ಲಿ ಕೆಲವರು ಚಲನೆಯಲ್ಲಿದ್ದು, ಆನಂತರ ಒಂದು ಕಡೆ 'ನೆಲೆ' ನಿಂತವರು. ಸರ್ವಜ್ಞ, ಶರೀಫರು ಕೊನೆಯವರೆಗೂ ಒಂದು ಕಡೆ ಸ್ಥಿರವಾಗಿ ನೆಲೆ ನಿಲ್ಲದಿದ್ದವರು. ಶರೀಫ ಮುಂಬೈ ಮಧ್ಯ ಕರ್ನಾಟಕದ ಸುಮಾರು ಏಳೆಂಟು ಜಿಲ್ಲೆಗಳಲ್ಲಿ ಸದಾ ಸಂಚಾರದಲ್ಲಿದ್ದವನು. ಶಿಶುನಾಳ, ಬಂಕಾಪುರ, (ಹಾವೇರಿ) ಅಂಕಲಗಿ (ಬೆಳಗಾವಿ), ಅಣ್ಣಿಗೇರಿ, ಹುಬ್ಬಳ್ಳಿ (ಧಾರವಾಡ), ಉಳವಿ (ಉತ್ತರ ಕನ್ನಡ) ಬಾತಿ (ದಾವಣಗೆರೆ), ಹಿರೇಹಡಗಲಿ, ಹಂಪಿ (ಬಳ್ಳಾರಿ) ಮೊದಲಾದ ಕಡೆಗಳಲ್ಲಿ ಸರ್ವಜ್ಞನ ಹಾಗೆ ಕಾಲಿಗೆ ಚಕ್ರ ಕಟ್ಟಿಕೊಂಡು ತಿರುಗುವವರಿಗೆ ಕೂತು ಚಂಪೂ ಕಾವ್ಯವನ್ನು, ಗ್ರಾಂಥಿಕ ಕಾವ್ಯವನ್ನು ಬರೆಯಲಿಕ್ಕೆ ಪುರುಸೊತ್ತಾದರೂ ಎಲ್ಲಿ?

ಶರೀಫನು ಸರ್ವಜ್ಞನಂತೆ ಆಶುಕವಿ. ಇಂಥವರಿಗೆ ಕಂಡದ್ದು, ಕೇಳಿದ್ದು, ಅನುಭವಿಸಿದ್ದು, ತಮ್ಮ ಜೀವನದಲ್ಲಾದ ಕೆಲವು ಘಟನೆಗಳಿಗೆ ಹಾಡಿನ ರೂಪ ನೀಡುವುದು ಉಸಿರಾಟದಷ್ಟೇ ಸಹಜವಾದ ಕ್ರಿಯೆಯಾಗಿತ್ತು. ಶರೀಫನ ಅನೇಕ ರಚನೆಗಳು ಅವನ ಜೀವನದಲ್ಲಿ ಪ್ರಾಸಂಗಿಕವಾಗಿ ಬಂದ ಘಟನೆಗಳೊಂದಿಗೆ ಸೇರಿಕೊಂಡಿವೆ. ಹಾಕಿದ ಜನಿವಾರವಾ, ದೊರಕಿದ ಗುರು ದೊರಕಿದಾ, ಬಿದ್ದಿಯಬ್ಬೇ ಮುದುಕಿ, ಏನ್ಕೋಡ ಏನ್ಕೋಡವಾ ಮೊದಲಾದವು ಪ್ರಾಸಂಗಿಕವಾದ ಹುಟ್ಟಿದ ರಚನೆಗಳಾಗಿವೆ. ಆದರೆ ಶರೀಫನ ಇಂಥ ರಚನೆಗಳ ವಿಶೇಷತೆಯೆಂದರೆ ಲೌಕಿಕವಾಗಿ ಹೇಳುತ್ತಲೇ ಪಾರಮಾರ್ಥಿಕದ ಕಡೆಗೆ ಮುಖ ಮಾಡುವುದು. ಬಹಿರಂಗದಲ್ಲಿ ಲೌಕಿಕವಾಗಿ ಕಾಣುವ ಪದ ಅಂತರಂಗದಲ್ಲಿ ಅಲೌಕಿಕದ ಸ್ಪರ್ಶ ಪಡೆದಿರುತ್ತದೆ. ಸರಳವಾಗಿ ಕಾಣುವ ತತ್ವಪದಗಳು ಅಂತರಾರ್ಥದಲ್ಲಿ ಸಂಕೀರ್ಣತೆಯನ್ನು ಒಳಗೊಂಡಿರುತ್ತವೆ. ಆಧ್ಯಾತ್ಮಿಕ ನೆಲೆಯಲ್ಲಿ, ಯೋಗದ ಪರಿಭಾಷೆಯಲ್ಲಿ ಅವುಗಳನ್ನು ಅರ್ಥೈಸಿಕೊಂಡರೆ ಮಾತ್ರ ಅವು ನಮಗೆ ದಕ್ಕುವುದು.

ವೀರಶೈವ ಧರ್ಮದ ಪ್ರಭಾವ ಶರೀಫನ ಮೇಲೆ ದಟ್ಟವಾಗಿ ಆದ ಪರಿಣಾಮವೂ ದೇಸಿಯಲ್ಲಿ ಸರಳವಾಗಿ ಹಾಡಲು ಕಾರಣವಾಗಿದೆ. ಹುಟ್ಟಿದ್ದು ಮುಸ್ಲಿಮನಾಗಿ, ಗುರು – ಹಿಂದೂ ಸ್ಮಾರ್ತ ಬ್ರಾಹ್ಮಣ, ಆರಾಧ್ಯ ದೈವ ಶಿಶುನಾಳದ ಬಸವಣ್ಣ, ನಂಬಿದ್ದು ಪ್ರಭುಲಿಂಗಲೀಲೆ. ಗುರು ಗೋವಿಂದ ಭಟ್ಟರು ದೇವಿ ಉಪಾಸಕರು. ಶರೀಫನೂ ದೇವಿ ಉಪಾಸಕ. ಅವನೇ ಹೇಳಿಕೊಳ್ಳುವಂತೆ ತಲೆಯಲ್ಲಿ ದೇವಿ ಪುರಾಣ, ಹೆಗಲಲ್ಲಿ ಬಸವ ಪುರಾಣ ಹಾಗೂ ಬಗಲಲ್ಲಿ ಸದಾ ಪ್ರಭುಲಿಂಗ ಲೀಲೆ ಇರುತ್ತಿತ್ತಂತೆ. ಅವನ ಹತ್ತಿರ ಇದ್ದದ್ದು ತನ್ನ ಕೈಂಬಾರೆ ಬರೆದುಕೊಂಡ ಪ್ರಭುಲಿಂಗ ಲೀಲೆಯ ಪ್ರತಿ. ವಚನಕಾರರ ದಟ್ಟ ಪ್ರಭಾವವಿದ್ದ ಶರೀಫ ಅವರಂತೆ ಸರಳವಾಗಿ, ದೇಸೀಯವಾಗಿಯೇ ತನ್ನ ತತ್ವ ಪದಗಳನ್ನು ಹಾಡಿದ. ಲಿಂಗದೊಳಗೆ ಮನವಿಲ್ಲದೆ, ಶಿವಲೋಕದಿಂದ ಒಬ್ಬ ಸಾಧು ಬಂದಾನವ್ವ, ಓದುವವಗೆಚ್ಚರವು ಇರಬೇಕೋ, ಪ್ರಭುಲಿಂಗ ಲೀಲಾ ಇತ್ಯಾದಿಗಳನ್ನು ಗಮನಿಸಿದರೆ ಆತನು ಬದುಕಿನುದ್ದಕ್ಕೂ ವೀರಶೈವ ಧರ್ಮವನ್ನಪ್ಪಿಕೊಂಡದ್ದು ತಿಳಿಯುತ್ತದೆ. 'ಸರಿಯ ಕಾಣೆನು ಧರಣಿಯೊಳಗಮ್ಮ', 'ನಾ ಕಂಡೆನೀಗ ಶಾಕಂಬರಿಯಾ', 'ತಂಗಿಯ ನಮಗೆ ಕೊಡಿರೆಂದು ಕೊಟ್ಟಳು' ಮೊದಲಾದವು ದೇವಿಯ ಕುರಿತ ರಚನೆಗಳಾಗಿವೆ.

ಕೀರ್ತಿನಾಥ ಕುರ್ತಕೋಟಿಯವರು ಹೇಳುವಂತೆ ಶರೀಫನಿಗೆ 'ಗ್ರಾಮ್ಯತೆ' ಅವನ ವ್ಯಕ್ತಿತ್ವದಲ್ಲೇ ಇದೆ. ಶರೀಫನಿಗೆ ಗ್ರಾಮ್ಯತೆಯೆಂಬುದು ಉಸಿರಿನಷ್ಟೇ ಸಹಜ. ಹುಟ್ಟಿದ್ದು ಮತ್ತು ಬೆಳೆದಿದ್ದು ಗ್ರಾಮೀಣ ಒಕ್ಕಲು ಮನೆತನದಲ್ಲಿ; ಬೆರೆತದ್ದು ಸಮುದಾಯಗಳ ಹಬ್ಬ, ಉತ್ಸವ, ಜಾತ್ರೆ ಇತ್ಯಾದಿ ಜನಸಂದಣಿಯಿರುವಲ್ಲಿ. ಹೀಗಾಗಿ ಶರೀಫನಿಗೆ ಹೆಚ್ಚಾಗಿ ಶಿಷ್ಟ ಸಂಸರ್ಗ ಬರಲೇ ಇಲ್ಲ. ಅವನ ತತ್ವಪದ ಇತ್ಯಾದಿ ಹಾಡುಗಳಲ್ಲಿ ಕಂಡುಬರುವ ಪದಗಳನ್ನು ನೋಡಿದರೆ ಇದು ಸ್ಪಷ್ಟವಾಗಿ ತಿಳಿಯುತ್ತದೆ. 'ಬಿದ್ದಿಯಬ್ಬೇ ಮುದುಕಿ', 'ತೊಗಲು ಮಲಿಯ ಹಾಲುಂಡು', 'ನಿದ್ದೆಯೆಂಬ ನಿಜ ಹಾದರಗಿತ್ತಿ', 'ಮನಸ್ಸಿಗೆ ಮಚ್ಚಲೊಡೆದು ನಿಲ್ಲಿಸು' ಇತ್ಯಾದಿ. ಮಚ್ಚು, ಮೆಟ್ಟು, ಸೂಳೀಮಗ, ಹಾದರಗಿತ್ತಿ, ಹ್ಯಾಂಗ ಬಳಕೆಮಾಡಬೇಕು ಮೊದಲಾದ ಪದಗಳನ್ನು ಬಳಸಿರುವುದು ಮೇಲಿನ ನನ್ನ ಮಾತಿಗೆ ಪುಷ್ಟಿ ನೀಡುತ್ತದೆ.

ಶರೀಫರಿಗೆ ಕನ್ನಡ ಭಾಷೆಯನ್ನು ಗ್ರಾಮ್ಯ ರೀತಿಯಲ್ಲಿ ಬಳಸಲೇಬೇಕಾದ ಚಾರಿತ್ರಿಕ ಒತ್ತಡವೂ ಇತ್ತು. ಉತ್ತರ ಕರ್ನಾಟಕದಲ್ಲಿ ಅತಿ ಹೆಚ್ಚಿನ ಮುಸ್ಲಿಮರ ಮನೆಮಾತು ಕನ್ನಡ. ಹಿಂದೂ ಸಮುದಾಯಗಳ ಪರಿಸರದಲ್ಲಿ ಬದುಕುತ್ತಿದ್ದ ಅವರಿಗೆ ಕನ್ನಡ ಭಾಷೆ ಪರಕೀಯದ್ದಾಗಿರದೆ ಅವರದೇ ಅನ್ನಿಸಿಬಿಟ್ಟಿತ್ತು. ಕನ್ನಡ ಸಂಸ್ಕೃತಿಯಲ್ಲಿ ಬೆರೆತುಹೋಗಿ, ಕನ್ನಡದವರೇ ಆಗಿದ್ದ ಅವರಿಗೆ ಕನ್ನಡ ಮನೆಮಾತಿನಂತಾಗಿತ್ತು. ಜೊತೆಗೆ ೧೯ನೇ ಶತಮಾನದ ಮಧ್ಯಭಾಗದಲ್ಲಿ ಧಾರವಾಡ, ಬೆಳಗಾವಿ, ಬಿಜಾಪುರ ಮತ್ತು ಉತ್ತರ ಕನ್ನಡದ ಭಾಗಗಳನ್ನು ಮರಾಠಿ ಪೇಶ್ವೆಗಳು ಆಳುತ್ತಿದ್ದರು. ಆನಂತರ ಸವಣೂರಿನ ನವಾಬರು ಆಳ್ವಿಕೆ ನಡೆಸುತ್ತಿದ್ದರು. ಅಲ್ಲದೆ ಮೇಲೆ ತಿಳಿಸಿದ ನಾಲ್ಕು ರಾಜ್ಯಗಳು ಮುಂಬೈ ಪ್ರಾಂತಕ್ಕೆ ಸೇರಿದ್ದು 'ದಕ್ಷಿಣ ಮಹಾರಾಷ್ಟ್ರ' ಎಂದು ಕರೆಸಿಕೊಂಡು ಪೂರ್ತಿಯಾಗಿ ಮರಾಠಿ ವಾತಾವರಣ ಸೃಷ್ಟಿಯಾಗಿತ್ತು. ಧಾರವಾಡದಲ್ಲಿ ೩೦ ಮರಾಠಿ ಶಾಲೆಗಳಿದ್ದರೆ, ಒಂದು ಮಾತ್ರ ಕನ್ನಡ ಶಾಲೆಯಿತ್ತು. ಇನ್ನು ಶಿಶುನಾಳ, ಕಳಸಗಳಂಥ ಹಳ್ಳಿಗಳ ಪಾಡು ಕೇಳುವಂತಿಲ್ಲ.

ಅನಂತರ ಕಂಪನಿ ಸರಕಾರದಿಂದ ಬ್ರಿಟಿಷ್ ಸರ್ಕಾರ ನೇರವಾಗಿ ಭಾರತದ ಆಡಳಿತವನ್ನು ತೆಗೆದುಕೊಂಡ ಮೇಲಂತೂ ಆಂಗ್ಲ ಭಾಷೆಯ ಪ್ರಭಾವ ಸಾಕಷ್ಟಾಯಿತು. ಬ್ರಿಟಿಷರ ಆಡಳಿತದ ವಸಾಹತುಶಾಹಿಯ ಸಂದರ್ಭದಲ್ಲಿ ಇಂಗ್ಲಿಷ್ ಶಾಲೆಗಳು ಹೆಚ್ಚಾಗಿ ಕನ್ನಡದ ವಾತಾವರಣ ತೀರಾ ಹದಗೆಟ್ಟಿತು. ಇದೇ ಸಂದರ್ಭದಲ್ಲಿ ಈ ಭಾಗವನ್ನು ನೋಡಿಕೊಳ್ಳುತ್ತಿದ್ದ ಸವಣೂರಿನ ನವಾಬರು ಉರ್ದು ಭಾಷೆಗೆ ಪ್ರೋತ್ಸಾಹ ಕೊಡುತ್ತಿದ್ದರು. ಹೀಗೆ ಮರಾಠಿ, ಇಂಗ್ಲಿಷ್ ಮತ್ತು ಉರ್ದು ಭಾಷೆಗಳ ಹಾವಳಿಯಲ್ಲಿ ಕನ್ನಡವನ್ನು ಬಳಸಲೇ ಬೇಕಾದ, ಆ ಮೂಲಕ ಕನ್ನಡಿಗರಿಗೆ ಮುಖಾಮುಖಿಯಾಗಬೇಕಾದ ಅನಿವಾರ್ಯ ಸಂದರ್ಭ ಶರೀಫನಿಗೆ ಎದುರಾಗಿತ್ತು. ತೀರಾ ಗ್ರಾಮೀಣ ಭಾಗದಲ್ಲಿದ್ದ, ಅಕ್ಷರ ಕಲಿಯದವರ ಮಧ್ಯೆಯೇ ಶರೀಫನು ಬದುಕುತ್ತಿದ್ದುದರಿಂದ ಗ್ರಾಮ್ಯ ಭಾಷೆ ಬಳಸಲೇಬೇಕಾದ ತುರ್ತು ಇತ್ತು.

ಹೀಗೆ 'ಭಾರತದ ಚೈತನ್ಯ ಜೀವಧಾತು'ಗಳಾದ ಅನುಭಾವಿ (ಇದನ್ನು ಬಳಸಿದ್ದು ಶ್ರೀ ಎಚ್. ಎಸ್. ಶಿವಪ್ರಕಾಶ) ಶರೀಫನು ಪ್ರಧಾನವಾಗಿ ಕವಿಯೇ ಆಗಿದ್ದಾನೆ. ಮರಾಠಿಯ ತುಕಾರಾಮನ ನಂತರ ಬಂದ ಶ್ರೇಷ್ಠ ಕವಿಯೆನಿಸಿದ್ದಾನೆ. ಶರೀಫರ ಸಾಹಿತ್ಯ-ತತ್ವಪದಗಳು ದೇಶ, ಭಾಷೆ, ಗಡಿಯನ್ನು ಮೀರಿದ್ದಾಗಿದ್ದು, ಯಾವತ್ತೂ ವರ್ತಮಾನಕ್ಕೆ ಸ್ಪಂದಿಸುತ್ತಾ ಇರುತ್ತವೆ. ಶಿಷ್ಟ ಸಾಹಿತ್ಯ ಸೃಷ್ಟಿಯನ್ನು ಬಿಟ್ಟು ಜಾನಪದೀಯ, ದೇಸಿ ಸಾಹಿತ್ಯ ಸೃಷ್ಟಿಯ ಕ್ರಮವನ್ನು ಆಯ್ಕೆ ಮಾಡಿಕೊಂಡಿದ್ದರಲ್ಲಿಯೆ ಶರೀಫನ ವೈಶಿಷ್ಟ್ಯತೆಯನ್ನು ಗುರುತಿಸಬಹುದಾಗಿದೆ. ಹಾಗಾಗಿ ಅವನ ಪದಗಳಲ್ಲಿ ಸೂಜಿ, ಕಂಪನಿ ಸರಕಾರ, ಜೆಟ್ಟಿಹುಳು, ಕಾದರಿ, ಇತ್ಯಾದಿ ಲೌಕಿಕದ ಪದಗಳು ಬಂದಹಾಗೆ ಅಧ್ಯಾತ್ಮದ, ಯೋಗ ಪರಿಭಾಷೆಯ ಪದಗಳೂ ಬರುತ್ತವೆ. ಒಂದು ವೇಳೆ ಶಿಷ್ಟ ಭಾಷೆಯನ್ನೇ ಬಳಸಿ, ಶಿಷ್ಟ ಸಾಹಿತ್ಯವನ್ನು ರಚಿಸಿದ್ದರೆ ಶರೀಫನು ಇಂದು ಇಷ್ಟು ಪ್ರಸಿದ್ಧನಾಗಲು ಸಾಧ್ಯವಿರಲಿಲ್ಲ.

**ಡಾ|| ಬಿ. ಜಿ. ಚನ್ನೇಶ್ ಹೊನ್ನಾಳಿ**
ಮುಖ್ಯಸ್ಥರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹಿರೇಕೆರೂರ - ೫೮೧ ೧೧೧, ಹಾವೇರಿ ಜಿಲ್ಲೆ



# ಬಿದ್ರಿ ಕರಕುಶಲ ಕಲೆ

**ಡಾ|| ಮೋಹನ್ ಬಿ. ಪಂಚಾಳ**

**ಕ**ರ್ನಾಟಕ ಅನೇಕ ಲಲಿತಕಲೆ ಮತ್ತು ಕರಕುಶಲ ಕಲೆಗಳ ನಾಡು. ಲಲಿತಕಲೆ ಅನುಕರಣರಹಿತವಾದ ಸೃಜನಶೀಲ ಅಭಿವ್ಯಕ್ತಿಯಾಗಿದೆ. ಸೃಜನಶೀಲ ಕಲಾವಿದ ಸುತ್ತಮುತ್ತಲಿನ ಪರಿಸರದಿಂದ ಸ್ಫೂರ್ತಿಗೊಂಡು ಹೊಸ ರೀತಿಯಲ್ಲಿ ಅಭಿವ್ಯಕ್ತಿ ನೀಡುತ್ತಾನೆ. ಆದರೆ ಕರಕುಶಲ ಕಲಾವಿದನಿಗೆ ಕಲೆ ಎಂಬುದು ವಂಶಪಾರಂಪರಿಕವಾಗಿ ಕರಗತವಾಗಿ ಬಂದಿರುತ್ತದೆ. ಕರ್ನಾಟಕದ ಹಲವು ಭಾಗಗಳಲ್ಲಿ ಕರಕುಶಲ ಕಲೆಗಳು ಬೆಳೆದುಬಂದಿದ್ದು, ತಮ್ಮದೆ ಶೈಲಿಯಿಂದ ವಿಶೇಷವಾಗಿ ಗುರುತಿಸಿಕೊಂಡಿವೆ. ಅವೆಂದರೆ ಕಿನ್ನಾಳ ಕಲೆ, ಗಂಜೀಫ ಕಲೆ, ಹಚ್ಚೆ ಕಲೆ, ಕಸೂತಿ ಕಲೆ, ಕೌದಿ ಕಲೆ ಮುಂತಾದುವು. ಅಂತಹ ಕರಕುಶಲ ಕಲೆಗಳಲ್ಲಿ 'ಬಿದ್ರಿ ಕಲೆ'ಯೂ ಒಂದು.

ಕರ್ನಾಟಕದ ಇತರೆ ಕರಕುಶಲ ಕಲೆಗಳಿಗೆ ಹೋಲಿಸಿದರೆ ಬೀದರಿನ ಬಿದ್ರಿ ಕರಕುಶಲ ಕಲೆ ವಿಭಿನ್ನವಾಗಿದೆ. ಆಕರ್ಷಣೀಯವಾದ ಬಿದ್ರಿ ಕಲೆ ದೇಶ-ವಿದೇಶದ ಕಲಾಸಕ್ತರ ಮನಸೆಳೆದಿದೆ. ಸುಮಾರು ನಾಲ್ಕುನೂರು ವರ್ಷಗಳ ಇತಿಹಾಸ ಹೊಂದಿರುವ ಈ ಕಲೆ ಭಾರತದಲ್ಲಿ ಕೇವಲ ಎರಡು ಸ್ಥಳಗಳಲ್ಲಿ ಮಾತ್ರ ಕಂಡುಬರುತ್ತದೆ. ಅದರಲ್ಲಿ ಬಿಹಾರದ ಪೂರ್ಣಿಯಾ ಮೊದಲನೆಯ ಕೇಂದ್ರವಾದರೆ, ಕರ್ನಾಟಕದ ಬೀದರ ಇನ್ನೊಂದು ಕೇಂದ್ರವಾಗಿದೆ. ಆನುವಂಶಿಕವಾಗಿ ಕರಗತಮಾಡಿಕೊಂಡು ಬಂದ ಬಿದ್ರಿ ಕಲೆಯ ಮೇಲೆ ಸಮಕಾಲೀನ ಜಗತ್ತಿನ ಪ್ರಭಾವವನ್ನು ಗುರುತಿಸಬಹುದು. ಕರಕುಶಲ ಕಲಾವಿದರು ತಮ್ಮ ಕಲಾಕೃತಿಗಳನ್ನು ಇಂದು ದೇಶ-ವಿದೇಶಗಳಲ್ಲಿ ಪ್ರದರ್ಶನ ಏರ್ಪಡಿಸುತ್ತಿರುವುದರಿಂದ ಹೆಚ್ಚು ಹೆಚ್ಚು ಬೆಳಕಿಗೆ ಬಂದಿದ್ದಾರೆ. ರಾಷ್ಟ್ರೀಯ - ಅಂತರರಾಷ್ಟ್ರೀಯ ಮಟ್ಟದ ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ನೀಡುವುದರ ಮೂಲಕ ಸರಕಾರ ಇವರನ್ನು ಗುರುತಿಸಿದೆ.

**ಬೀದರ ಮತ್ತು ಬಿದ್ರಿ ಕಲೆಯ ನೆಲೆ ಮತ್ತು ಹಿನ್ನೆಲೆ**

ಬೀದರ್‌ನ ಇತಿಹಾಸ ಬಹಳ ಪುರಾತನವಾದದ್ದು. ಮಹಾಭಾರತದ ನಳ-ದಮಯಂತಿ ಕಥಾ ಸನ್ನಿವೇಶದಲ್ಲಿ 'ವಿಧುರ ನಗರ' ಅಥವಾ 'ವಿದರ್ಭಪುರ'ವನ್ನು ವಿಧುರನೆಂಬ ಯುವರಾಜ ಆಳುತ್ತಿದ್ದನು. ಆಗಿನ ವಿಧುರ ನಗರ ಕಾಲಕ್ರಮೇಣ ಬೀದರ ಆಗಿರಬಹುದೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಬಿದಿರು ಪದವೆ ಬೀದರ ಆಯಿತೆಂದು ಇನ್ನೂ ಕೆಲವರು ತರ್ಕಿಸುತ್ತಾರೆ. ಅಂತೆಯೆ ಇದಕ್ಕೆ ಬೀದರ್ - ಭಿದರಿಪುರ > ಬಿದರೂರು > ಬಿದರೆ > ಬೀದರ ಹೀಗೆ ಹೆಸರು ರೂಪಾಂತರವಾಗಿದೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಈ ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ಎಲ್ಲಿಯೂ 'ಬೀದರ'ನ ಹೆಸರು ಉಲ್ಲೇಖ ಗೊಂಡಿಲ್ಲ. ಆದರೆ ನಿಜಾಮರ ಕಾಲದಲ್ಲಿ ರಚಿಸಲ್ಪಟ್ಟ ಬೀದರ ನಕ್ಷೆಯಲ್ಲಿ 'Beder' ಎಂದು ಆಂಗ್ಲಭಾಷೆಯಲ್ಲಿ ನಮೂದಿಸಲಾಗಿದೆ. ಬಹಮನಿ ಸುಲ್ತಾನರ ಕಾಲದಲ್ಲಿ ಇದು 'ಮೊಹಮದಾಬಾದ ಬೀದರ್' ಎಂದು ಪ್ರಸಿದ್ಧಿ ಹೊಂದಿದ್ದರಿಂದ ಕಳೆದ ದಶಕಗಳಲ್ಲಿಯೂ ಇದನ್ನು 'ಎಂ. ಬೀದರ್' ಎಂದೇ ಕರೆಯಲಾಗುತ್ತಿತ್ತೆಂದು ಡಾ|| ಕೆ. ಎಂ. ಮೇತ್ರಿಯವರು ಹೇಳುತ್ತಾರೆ. ೧೭೫೯ರಲ್ಲಿ ಪರ್ಶಿಯನ್ ಭಾಷೆಯಲ್ಲಿ ಬರೆದ 'ಚಾರ ಗುಲಶನ್' ಎಂಬ ಗ್ರಂಥದಲ್ಲಿ ಬೀದರ ನಗರದ ಹೆಸರನ್ನು 'ಬಿದರಿಕಲೆ'ಯಿಂದ ಗುರುತಿಸಲ್ಪಟ್ಟಿದೆ ಎಂದು ಹೇಳಿದೆ.

ಜನಪದರು 'ಬಿದ್ರಿಕಲೆ'ಗೆ ಬಂದಿರುವ ಹೆಸರಿನ ಕುರಿತು ಹಲವು ಕಥೆಗಳನ್ನು ಹೇಳುತ್ತಾರೆ. ಯಾವುದೇ ಕಲಾರೂಪ ಬಿದ್ರಿ ಕಲೆಯ ರೂಪ ಪಡೆದುಕೊಂಡಾಗ ಅದು ಹಾಗೆ ಕಂಡುಕೊಂಡವನ ಭಾಗ್ಯವಾಗಿರುತ್ತದೆ ಯಾದರೂ ವಿಧಿ(ಅದೃಷ್ಟ)ಯಿಂದಲೆ ಈ ಕಲೆ ತನಗೆ ಕರಗತವಾಗಿದೆಯೆಂದು ಕಲಾವಿದ ತಿಳಿಯುತ್ತಾನೆ. ಆದ್ದರಿಂದ ಈ ಕಲೆಯನ್ನು 'ವಿಧಿ' ಎಂದು ಕರೆದಿದ್ದಾನೆ. ವಿಧಿ > ಬಿದಿ ಎಂದು ರೂಪಾಂತರ ಹೊಂದಿ 'ಬಿದ್ರಿ' ಆಯಿತೆಂದು ಹೇಳಲಾಗಿದೆ. ಮತ್ತೆ ಕೆಲವರ ಪ್ರಕಾರ, ಈ ಕಲೆಯ ರೂಪವನ್ನು ಕಂಡುಕೊಂಡ ಕಲಾವಿದ ಬಣ್ಣ ಏರಿಸಲು ಬಿದ್ರಿ ಕಲೆಯ ಕಲಾಕೃತಿಯನ್ನು ತಡಕಾಡುವಾಗ ಅದು ಹೇಗೋ ಕೆಸರಲ್ಲಿ ಬಿದ್ದಿತು. ಆಗ ಕೋಟೆಯ ಮಣ್ಣಿನಾಂಶದಲ್ಲಿ ಕಲೆಯ ಬಣ್ಣ ಬದಲಾಗುವುದನ್ನು ಗಮನಿಸಿದ. ಹೀಗೆ ಕಲೆಗಾರ ಕಲೆಗೆ ಬಣ್ಣ ಏರಿಸಲು ಬೀದರ ಕೋಟೆಯ ಮಣ್ಣನ್ನು ಬಳಸಿಕೊಳ್ಳಲು ಪ್ರಾರಂಭಿಸಿದ. ಈ ರೀತಿಯಾಗಿ ಕಲೆಯ ಒಂದು ಹೊಸ ಶೋಧವಾಯಿತು. ಪ್ರಾದೇಶಿಕ ಭಾಷೆಯಲ್ಲಿ ಬಿದ್ದೆ, ಬಿದ್ದಿವಿ , ಬಿದ್ದಿವಿರಿ, ಬಿದ್ದಿರಿ, ಬಿದ್ರಿ ಎಂದು ಬದಲಾಗಿ ಕೊನೆಯ ರೂಪವೇ ಈ ಕಲೆಯ ಹೆಸರಾಗಿ ನಿಂತಿತೆಂದು ಜನಪದರ ಅಭಿಪ್ರಾಯವನ್ನು ರಾಜೇಂದ್ರ ಯರನಾಳೆ ಉಲ್ಲೇಖಿಸುತ್ತಾರೆ.

**ಬಿದ್ರಿ ಕರಕುಶಲ ಕಲೆಯ ಐತಿಹಾಸಿಕ ಹಿನ್ನೆಲೆ**

ಕ್ರಿ.ಶ. ೧೧೯೨ರಲ್ಲಿ ಇರಾನಿನಿಂದ ಭಾರತ್ಕೆ ಬಂದ ಸೂಫಿ ಸಂತ ಖ್ವಾಜಾ ಮೊಯಿನುದ್ದೀನ್ ಹಸನ್ ಚಿಸ್ತಿ ಧರ್ಮ ಪ್ರಚಾರವನ್ನು ಮೊದಲು ಅಜಮೀರದಲ್ಲಿ ಆರಂಭಿಸಿ ನಂತರ ಬಿಜಾಪುರಕ್ಕೆ ಪ್ರವೇಶಿಸಿದ. ಅವನ ಜೊತೆಯಲ್ಲಿಯೆ ಈ ಕಲೆ ಭಾರತಕ್ಕೆ ಪ್ರವೇಶಿಸಿತು ಎನ್ನಲಾಗಿದೆ. ಬಿಜಾಪುರದ ಸುಲ್ತಾನರು ಎರಡನೆಯ ಅಲ್ಲಾವುದ್ದೀನ್ ಬಹಮನಿಯ ಪಟ್ಟಾಭಿಷೇಕ ಸಂದರ್ಭದಲ್ಲಿ ಅವನಿಗೆ ಕರಕುಶಲ ಕಲಾಕೃತಿಯೊಂದನ್ನು ಕಾಣಿಕೆಯಾಗಿ ನೀಡಿದರು. ಈ ಕಲಾಕೃತಿಯಿಂದ ಪ್ರಭಾವಿತನಾದ ಎರಡನೆಯ ಅಲ್ಲಾವುದ್ದೀನ್ ಬಹಮನಿ ಕ್ರಿ.ಶ. ೧೪೩೬-೫೭ರಲ್ಲಿ ವಿಜಾಪುರದಲ್ಲಿದ್ದ ಕರಕುಶಲ ಕಲಾಕಾರರು ತನ್ನ ಬೀದರ್‌ನ ಆಸ್ಥಾನದಲ್ಲಿ ನೆಲೆಸಲು ಅವಕಾಶ ನೀಡಿದನೆಂದು ಸೂಸನ್ ಸ್ಟ್ರಾಂಜ್ ಹೇಳುತ್ತಾರೆ.

ಡಮಾಸ್ಕಸ್‌ನಲ್ಲಿ ಕರಕುಶಲ ಕಲಾವಿದರು ಬಂಗಾರ ಬೆಳ್ಳಿಯ ಕುಸುರಿ ಕೆಲಸದಲ್ಲಿ ನಿಪುಣರಾಗಿದ್ದರು. ಅಲ್ಲಿನ ಒಂದು ಗುಂಪು ಸಿರಿಯಾ ಮೂಲಕ ರಾಜಸ್ಥಾನದ



**ಬಿದ್ರಿ ಕರಕುಶಲ ಕಲೆಯನ್ನು ೧೫ನೆಯ ಶತಮಾನದ ಆರಂಭದಲ್ಲಿ ಬೀದರದಲ್ಲಿ ಮೊಟ್ಟಮೊದಲಿಗೆ ಪರಿಚಯಿಸಿದ್ದು ಬಹಮನಿ ಸುಲ್ತಾನನಾದ ಅಹಮದ್ ಶಹವಲಿ ಬಹಮನಿ (ಕ್ರಿ.ಶ. ೧೪೨೨-೩೬). ಈತ ತನ್ನ ರಾಜಧಾನಿಯನ್ನು ಕಲಬುರ್ಗಿಯಿಂದ ಬೀದರಿಗೆ ವರ್ಗಾಯಿಸಿದಾಗ ರಂಗೀನ ಮಹಲ್, ಅರಮನೆ ಹಾಗೂ ಇತರ ಕಲಾತ್ಮಕ ಕಟ್ಟಡಗಳನ್ನು ಕಟ್ಟಿಸಲು ಇರಾನ್‌ನಿಂದ ಕುಶಲಕರ್ಮಿಗಳನ್ನು ಕರೆಸಿದ. ಇವರಲ್ಲಿ 'ಅಬ್ದುಲ್ಲಾ ಬಿದ್ ಖೈಸರ್' ಎಂಬಾತ ಸತುವಿನ ಮಿಶ್ರಲೋಹದ ಮೇಲೆ ಚಿನ್ನದ ಕುಸುರಿ ಕೆಲಸ ಮಾಡಿ ಸುಂದರ ಕಲಾತ್ಮಕ ವಸ್ತುಗಳನ್ನು ತಯಾರಿಸಬಲ್ಲವನಾಗಿದ್ದ.**

ಅಜಮೀರದಲ್ಲಿ ಬಂದು ನೆಲೆಸಿದರೆಂದು ಸೇನ್ ಸೂಜಿತ್ ನಾರಾಯಣ್ ಅಭಿಪ್ರಾಯಪಡುತ್ತಾರೆ. ಡಮಾಸ್ಕಸ್ ಕರಕುಶಲ ಕಲಾವಿದರಿಗೆ ರಾಜಸ್ಥಾನದಲ್ಲಿ ಝಿಂಕ್ ಹಾಗೂ ತಾಮ್ರದ ಮಿಶ್ರಣವುಳ್ಳ ಪಾತ್ರೆಗಳ ಮೇಲೆ ಡಮಾಸ್ಕನ್ ಚಿತ್ತಾರವನ್ನು ರಚಿಸುವ ವಿಚಾರ ಹೊಳೆಯಿತು ಎಂದು ಎಲ್. ಕೆ. ಗುಜ್ರಾಲ್ ಮತ್ತು ಕೆ. ಟಿ. ಎಮ್. ಹೆಗಡೆ ಅಭಿಪ್ರಾಯಪಡುತ್ತಾರೆ.

ಬಿದ್ರಿ ಕರಕುಶಲ ಕಲೆಯನ್ನು ೧೫ನೆಯ ಶತಮಾನದ ಆರಂಭದಲ್ಲಿ ಬೀದರದಲ್ಲಿ ಮೊಟ್ಟಮೊದಲಿಗೆ ಪರಿಚಯಿಸಿದ್ದು ಬಹಮನಿ ಸುಲ್ತಾನನಾದ ಅಹಮದ್ ಶಹವಲಿ ಬಹಮನಿ (ಕ್ರಿ.ಶ. ೧೪೨೨-೩೬). ಈತ ತನ್ನ ರಾಜಧಾನಿಯನ್ನು ಕಲಬುರ್ಗಿಯಿಂದ ಬೀದರಿಗೆ ವರ್ಗಾಯಿಸಿದಾಗ ರಂಗೀನ ಮಹಲ್, ಅರಮನೆ ಹಾಗೂ ಇತರ ಕಲಾತ್ಮಕ ಕಟ್ಟಡಗಳನ್ನು ಕಟ್ಟಿಸಲು ಇರಾನ್‌ನಿಂದ ಕುಶಲಕರ್ಮಿಗಳನ್ನು ಕರೆಸಿದ. ಇವರಲ್ಲಿ ಅಬ್ದುಲ್ಲಾ ಬಿದ್ ಖೈಸರ್ ಎಂಬಾತ ಸತುವಿನ ಮಿಶ್ರಲೋಹದ ಮೇಲೆ ಚಿನ್ನದ ಕುಸುರಿ ಕೆಲಸ ಮಾಡಿ ಸುಂದರ ಕಲಾತ್ಮಕ ವಸ್ತುಗಳನ್ನು ತಯಾರಿಸಬಲ್ಲವನಾಗಿದ್ದ. ಈ ಕಲೆ ತಮ್ಮ ಆಸ್ಥಾನದಲ್ಲಿ ಬೆಳೆಯಬೇಕು ಹಾಗೂ ಜನಸಾಮಾನ್ಯರು ಕಲಿತು ತಮ್ಮ ಉಪಜೀವನಕ್ಕಾಗಿ ಬಳಸಿಕೊಳ್ಳಬೇಕೆನ್ನುವುದು ಸುಲ್ತಾನರ ಆಶಯವಾಗಿತ್ತು.

ಈ ಕಲೆಯ ಬೆಳವಣಿಗೆಗಾಗಿ ಬಹಮನಿ ಸುಲ್ತಾನರು ಅನೇಕ ಯೋಜನೆಗಳನ್ನು ಹಮ್ಮಿಕೊಂಡರು. ಇವರು ಲಲಿತ ಕಲೆ, ಕರಕುಶಲ ಕಲೆಗಳಿಗೆ, ಅಷ್ಟೆ ಅಲ್ಲದೆ ಶಿಕ್ಷಣಕ್ಕೂ ಮಹತ್ವ ನೀಡಿದರು. 'ಮದರಸಾ' ಎಂಬ ವಿಶ್ವವಿದ್ಯಾಲಯವನ್ನು ಬೀದರಲ್ಲಿ ಆರಂಭಿಸಿ, ವೈಜ್ಞಾನಿಕ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಶಿಕ್ಷಣಕ್ಕೆ ಮಹತ್ವ ನೀಡಿದರು. ಮೊಘಲ, ಪರ್ಶಿಯಾ, ಇರಾಕ, ಟರ್ಕಿಗಳಿಂದ ಜನರು ಬೀದರ್‌ಗೆ ಶಿಕ್ಷಣ ಪಡೆಯಲು ಆಗಮಿಸುತ್ತಿದ್ದರು. ಇಂದಿಗೂ ಕಾಣುವ 'ಮದರಸಾ ಮಹಮೂದ್ ಗವಾನ್' ಸ್ಮಾರಕ ಈ ವಿಶ್ವವಿದ್ಯಾಲಯದ ಕಟ್ಟಡವೇ ಆಗಿದೆ. ಇದನ್ನು ಇಂದು 'ಗಾಜಿನ ಕಂಬ' ಎಂದು ಕರೆಯುತ್ತಾರೆ.

೧೮೯೦ರ ಔದ್ಯೋಗೀಕರಣದಿಂದಾಗಿ ಭಾರತದಲ್ಲಿ ಬಿದರಿ ಕಲೆ ಅಭಿವೃದ್ಧಿಹೊಂದಿತು. ಮುಂದೆ ದೇಶ ವಿದೇಶಗಳಿಗೆ ರಫ್ತು ಆಯಿತು. ೧೮೫೧ರಲ್ಲಿ ಇದರ ಮೊದಲನೆಯ ಅಂತರರಾಷ್ಟ್ರೀಯ ಪ್ರದರ್ಶನವೂ ನಡೆಯಿತು. ಬೀದರ-ಪೂರ್ಣಿಯಾ ನಂತರ ಲಕ್ನೋ, ಹೈದರಾಬಾದ್, ಮುರ್ಷಿದಾಬಾದ್ ಮುಂತಾದವು ನಿರ್ಯಾತದ ಕೇಂದ್ರಗಳಾಗಿದ್ದವು. ವಿಶ್ವದಲ್ಲಿ ಬಿದ್ರಿ ಕಲೆಯ ಬೇಡಿಕೆ ಹೆಚ್ಚುತ್ತಿದ್ದಂತೆ ಕಲಾವಿದರು ಹೆಚ್ಚಲಾರಂಭಿಸಿದರು. ಗುಲಾಮ್ ಸತ್ತಾರ, ಬಸಪ್ಪಾ, ಶೇಖ್ ಅಹಮದ್ ಸಾಹೇಬ್, ಗುಲಾಮ್ ಕದ್ದೂಸ್, ಮಾಶಿಕಪ್ಪ, ಮಹಮ್ಮದ ಶರೀಫ್, ಸಯ್ಯದ್ ರಷೀದ, ಅಹ್ಮದ ಖಾದ್ರಿ, ಅಬ್ದುಲ್ ಖಲೀಮ್, ಅಬ್ದುಲ್ ರೋಫ್, ಅಬ್ದುಲ್ ಹಮೀದ್, ಮಹ್ಮದ ಅಹ್ಮದ ಮತ್ತು ಸಯ್ಯದ ಷಾ ರಶೀದ್, ಶಿವಣ್ಣ ಮುಂತಾದ ಕಲಾವಿದರು ಈ ಕಲೆಯಲ್ಲಿ ಹೆಸರು ಪಡೆದರು. ಭಾರತ ಸರಕಾರ ಈ ಕಲಾವಿದರಿಗೆ ಉಪಯುಕ್ತವಾಗಲೆಂದು 'ಬೀದರಿ ಕಾಲನಿ' ನಿರ್ಮಾಣ ಮಾಡಿ ಅವರು ಒಂದೇ ಕಡೆ ನೆಲೆಸುವ ಅವಕಾಶ ಮಾಡಿಕೊಟ್ಟಿದೆ. ಅಲ್ಲದೆ ಬಿದ್ರಿ ಕಲಾಕೃತಿ ರಚನೆಗೆ

## ತಿಳುವಳಿಕೆ



ಕೆ. ಜಿ. ಕವಿತ
ಆಯ್ಕೆಶ್ರೇಣಿ ಉಪನ್ಯಾಸಕಿ
ಕನ್ನಡ ವಿಭಾಗ, ಪಿ.ಎಂ.ಎಸ್. ಕಾಲೇಜು
ಕೊಣನೂರು

ಮಗಳೇ,
ಬಾಗಿಲೆಳೆದುಕೋ,
ಹಾಕಿಬಿಡು ಚಿಲುಕ ಭದ್ರವಾಗಿ
ಪರದೆ ಇಲ್ಲದ ಬತ್ತಲ ಬಾಗಿಲೆಡೆಗೆ
ಹಣಕಿಯಾವು ಕುತೂಹಲದ ಕಣ್ಣುಗಳು ಹತ್ತು ಹಲವು !

ಬಯಲಾಗಬಾರದು ನೋಡು
ಬಚ್ಚಿಟ್ಟದ್ದು - ಮುಚ್ಚಿಟ್ಟದ್ದು
ಹಳತು - ಹೊಸತು ಬೇಕಾಗಿದ್ದು
ಬೇಡದ್ದು, ಕದ್ದಿದ್ದು - ಮರೆತಿದ್ದು.

ಪರದೆ ಬೀಳುವ ತನಕ
ಮರೆಸಿದರಾಯಿತು ಹರಿದಿದ್ದು
ಒಡೆದಿದ್ದು, ಬಣ್ಣಗೆಟ್ಟಿದ್ದು
ಮೂಲೆಯ ರಾಶಿಯ ಮೇಲೆ
ಹಾಸಿಬಿಡು ಬಣ್ಣ ಬಣ್ಣದ
ಕಸೂತಿ ವಸ್ತ್ರಗಳ
ಇರಿಸಿಬಿಡು ನಗುವ ಹೂದಾನಿ
ಇದೀಗ - ಸಂತೃಪ್ತಿಯ ನೋಟ !

ಕಟ್ಟಿದ ಬಲೆಗಳ ಮೇಲೆ
ಸೊಳ್ಳೆ-ನುಸಿಗಳ ಮೆರವಣಿಗೆಯೆ ?
ಸದ್ಯಕ್ಕೆ ಗುಡಿಸಿಬಿಡು.
ಬಳಿದರಾಯಿತು ಬಣ್ಣ
ಎಳೆದರಾಯಿತು ಪರದೆ !
ಈಗೇನು ಚಿಂತೆಯಿಲ್ಲ ಬಿಡು
ಕ್ಷಣಕ್ಕೊಂದು ಹೊಸ ಮಾಡೆಲ್
ಬದಲಾಯಿಸಬಹುದು ಹರಿದ,
ಬಣ್ಣಗೆಟ್ಟು ಮಾಸಲಾದ ಪರದೆಯನ್ನ !

ಗೋಡೆಯ ಬಿರುಕಿನ ಮೇಲೆ
ಏರಿಸಿದರಾಯಿತು ರವಿವರ್ಮನ
ಸುಂದರಿಯನ್ನು
ಕಲಾಸಕ್ತಿಗೆ ಭೇಷ್ ಎನ್ನಲಾರರೆ ?
ಮರೆಸಿದರಾಯಿತು ಕಸದ ರಾಶಿ !
ಸಂದು-ಗೊಂದುಗಳಲ್ಲಿ ಸಜ್ಜೆ-ಅಟ್ಟಗಳಲ್ಲಿ
ನೋಡಲಾಗುವುದಿಲ್ಲ ಕಾಣದ್ದನ್ನು
ಕೇಳುವುದಿಲ್ಲ ಒಳಗಿನದ್ದನ್ನು
ಬೆಲೆಯೆಲ್ಲಾ ಥಳುಕು-ಬಳುಕಿನ ನೋಟಕ್ಕೆ !

ಮಗಳೇ, ಹಾಕಬೇಕು - ವೇಷ
ಕಟ್ಟಬೇಕು - ಬಣ್ಣ
ಕಲಿಯಬೇಕು - ಹೊಸತನ್ನು
ಕಟ್ಟಬೇಕು ಕೋಲವನ್ನು
ಕಾಲಕ್ಕೆ - ತಕ್ಕಂತೆ !

ಲೋಕದ ಡೊಂಕ ತಿದ್ದಲು
ನಾನ್ಯಾರು - ನೀನ್ಯಾರು ?
ಇಡಬೇಕು ಹೆಜ್ಜೆ
ಸವೆದ ಹಾದಿಯ ಮೇಲೆ
ಕಾಲಿಗೆ ಹತ್ತದಂತೆ
ಕಲ್ಲು-ಮುಳ್ಳುಗಳು
ನಡೆಯಬೇಕು ಜೋಪಾನ !

ಮಗಳೇ, ಬಾಗಿಲೆಳೆದು ಹಾಕಿಬಿಡು ಚಿಲುಕ ಭದ್ರ
ಮರೆಸಿದರಾಯಿತು ಒಳಗೆ !

ಬೇಕಾದ ಕಚ್ಚಾವಸ್ತು ತುಂಬಾ ದುಬಾರಿ ಇರುವುದರಿಂದ ಕಲಾವಿದರಿಗೆ ಕಚ್ಚಾವಸ್ತುಗಳನ್ನು ಸರಬರಾಜು ಮಾಡುತ್ತಿದೆ. ನಿರ್ಮಾಣ ಮಾಡಿದ ಕೃತಿಗಳಿಗೆ ದೇಶ-ವಿದೇಶಗಳಲ್ಲಿ ಪ್ರದರ್ಶನ ಮಾರುಕಟ್ಟೆ ಒದಗಿಸಿದೆ. 'ಬಿದರಿ ಕಲಾ ತರಬೇತಿ ಕೇಂದ್ರ'ವನ್ನು ಬೀದರ್‌ನಲ್ಲಿ ತೆರೆದಿದ್ದು, ಬಿದ್ರಿ ಕಲೆ ಕಲಿಯುವ ಆಸಕ್ತರಿಗೆ ತರಬೇತಿ ನೀಡುತ್ತಿದೆ.

**ಬಿದ್ರಿ ಕರಕುಶಲ ಕಲಾಕೃತಿಗಳ ವರ್ಗೀಕರಣ**

**೧. ಆಲಂಕಾರಿಕ ಬಿದ್ರಿ ಕಲೆ :** ಆಲಂಕಾರಿಕ ತಟ್ಟೆ, ಆಯುಧಗಳು, ಹೂದಾನಿಗಳು, ಪ್ರಾಣಿ ಪಕ್ಷಿಗಳು, ಹೂಜಿ, ಸುರಾಹಿಗಳು ಇದರಲ್ಲಿ ಸೇರುತ್ತವೆ.

**೨. ಗೃಹೋಪಯೋಗಿ ಬಿದ್ರಿ ಕಲೆ :** ಉಗುಳುವ (ಪೀಕದಾನಿ) ಪಾತ್ರೆಗಳು, ಹುಕ್ಕಾಗಳು, ಪಾನ್‌ದಾನ್‌ಗಳು, ಬಟ್ಟಲುಗಳು ಮತ್ತು ಭರಣಿಗಳು ಈ ಗುಂಪಿನಲ್ಲಿವೆ.

**೩. ವಸ್ತ್ರಾಭರಣ ಬಿದ್ರಿ ಕಲೆ :** ಕುಂಕುಮ ಪೆಟ್ಟಿಗೆ, ಕೈ ತೋಳ ಹಾರ, ಮೇಣಬತ್ತಿ ಸ್ಟ್ಯಾಂಡ್, ಅಂಗಿ ಗುಂಡಿ, ಬಿಂಡಗೋಲಿ, ಸೊಂಟಪಟ್ಟಿ, ಕೀಚೈನ್ ಮತ್ತು ಸಿಗರೇಟ್ ಪೆಟ್ಟಿಗೆ ಮುಂತಾದುವು.

**೪. ಇತರೆ ಬಿದ್ರಿ ಕಲೆ :** ಕಾಗದ ಕತ್ತರಿಸುವ ಚಾಕು, ಕಾಗದ ಹಿಡಿ, ಭಾರದ ವಸ್ತು ಮತ್ತು ಲೇಖನಿ ಪೆಟ್ಟಿಗೆ ಮತ್ತು ಇತರೆ.

**ಬಿದ್ರಿ ಕರಕುಶಲ ಕಲೆಯಲ್ಲಿ ಬಳಸುವ ಕಚ್ಚಾ ಸಾಮಗ್ರಿಗಳು**

ತವರ, ರಾಳ, ಸತು, ತಾಮ್ರ, ಬೆಳ್ಳಿ-ಬಂಗಾರದ ತಂತಿ, ತಾಮ್ರದ ಸಲ್ಫೇಟ್, ಅಮೋನಿಯಂ ಕ್ಲೋರೈಡ್, ಮೇಣ, ಕಡಲೆಕಾಯಿ ಎಣ್ಣೆ, ಔಡಲ ಎಣ್ಣೆ, ಬೀದರ್ ಕೋಟೆಯ ಮಣ್ಣು ಮತ್ತು ಸಂಜೀರಾ ಪುಡಿ ಇವು ಬಿದ್ರಿ ಕರಕುಶಲ ಕಲೆಯಲ್ಲಿ ಬಳಕೆಯಾಗುವ ಕಚ್ಚಾ ಸಾಮಗ್ರಿಗಳಾಗಿವೆ.

**ಬಿದ್ರಿ ಕರಕುಶಲ ಕಲೆಯ ರಚನಾ ವಿಧಾನ**

ಈ ಕಲಾಕೃತಿ ವಿವಿಧ ಹಂತಗಳಲ್ಲಿ ರಚನೆಯಾಗುವುದನ್ನು ನಾವು ಇಲ್ಲಿ ಕಾಣುತ್ತೇವೆ. ಅವೆಂದರೆ : (೧)ಮೇಣದ ಆಕೃತಿ ರಚನೆ. (೨)ಧಾತು ಮಿಶ್ರಣ (೩)ಎರಕ ಹಾಕುವುದು (೪)ಆಕೃತಿ ಜೋಡಣೆ (೫)ನೀಲಾ ತೋತ ಲೇಪನ (೬)ವಿನ್ಯಾಸ ರಚನೆ, (೭)ವಿನ್ಯಾಸದಲ್ಲಿ ಬೆಳ್ಳಿ-ಬಂಗಾರ, (೮)ಆಕೃತಿಗೆ ಫೈಲಿಂಗ್, (೯)ಮಣ್ಣಿನಿಂದ ರಂಗೇರಿಸುವಿಕೆ.

ಈ ಮೇಲಿನ ಹಂತಗಳಲ್ಲಿ ಕಲಾಕೃತಿ ನಿರ್ಮಾಣ ಮಾಡುವ ವಿಧಾನವನ್ನು ಈ ಮುಂದೆ ವಿವರಿಸಲಾಗಿದೆ.

ಮೊದಲನೆಯ ಹಂತದಲ್ಲಿ ಮಣ್ಣು ಮತ್ತು ಸೆಗಣಿಯ ಹದವಾದ ಮಿಶ್ರಣ ಮಾಡಿ ಲೇತ್‌ನಲ್ಲಿ ಬೇಕಾದ ಆಕಾರವನ್ನು ನೀಡುತ್ತಾರೆ. ಒಣಗಿಸಿ ಅದರಲ್ಲಿ ತೆಳುವಾದ ಮೇಣವನ್ನೂ ಲೇಪಿಸುವರು. ಲೇತ್ ತಿರುಗಿಸಿ ಅದಕ್ಕೆ ಸ್ವಲ್ಪ ಶಾಖ ನೀಡುವರು. ಎರಡು ರಂಧ್ರವಿರುವ ಭಾಗಗಳಿಂದ ಮೇಣ ಹೊರಬರುತ್ತದೆ. ನಂತರ ಎರಕದ ಪೆಟ್ಟಿಗೆಯಲ್ಲಿ ದ್ರಾವಣವನ್ನು ಅಂಟಿಕೊಳ್ಳದಿರಲೆಂದು ಸಂಜೀರಪುಡಿ ಸಿಂಪಡಿಸುತ್ತಾರೆ. ಮೂಸ ಎಂಬ ಮಣ್ಣಿನ ಮಡಿಕೆಯಲ್ಲಿ ಸತು ಮತ್ತು ತಾಮ್ರದ ಸಲ್ಫೇಟ್ ಲೋಹಗಳನ್ನು ಕುದಿಸಿರುವ ಎರಕವನ್ನು ಲೇತ್ ಪೆಟ್ಟಿಗೆಯಲ್ಲಿ ಸುರಿಯುವರು. ಹೀಗೆ ರಚಿಸಿದ ಆಕೃತಿಯ ಅನುಪಯುಕ್ತವಾದ ಭಾಗವನ್ನು ಫೈಲಿಂಗ್‌ನಿಂದ ತೆಗೆಯುವರು. ಇನ್ನುಳಿದ ಆಕೃತಿಯ ಬಿಡಿ ಭಾಗಗಳನ್ನು ಪಡಿಯಚ್ಚಿನಿಂದ ಬೇರೆ ಮೌಲ್ಡ್ ಮಾಡುವರು. ನಂತರ ಬಿಡಿಭಾಗಗಳ ಜೋಡಣೆ ಮಾಡಿ ಆಕೃತಿಯ ಮೇಲ್ಭಾಗವನ್ನು ಫೈಲಿಂಗ್ ಮಾಡಲಾಗುವುದು. ಆಕೃತಿಯ ಪೊಳ್ಳಾದ ಒಳಗಿನ ಭಾಗಗಳಿಗೆ ಸಂಪೂರ್ಣ ಮೇಣ ತುಂಬಿ ನೀಲಾತೋಪಾ ಲೇಪನ ಮಾಡುವರು. ಇದನ್ನು ಚಪ್ಪಟೆ ಕಲ್ಲಿಗೆ ಮೇಲಿನಿಂದ ಅಂಟಿಸುವರು. ಆಗ ಸತು ಮತ್ತು ತಾಮ್ರಗಳ ಲೋಹಧಾತು ಹೊಳಪಿನಿಂದ ಕಂದುಬಣ್ಣಕ್ಕೆ ತಿರುಗುತ್ತದೆ. ಇಷ್ಟಾದರೆ ಆಕೃತಿಯ ವಿನ್ಯಾಸ ರಚನೆಗೆ ಸಿದ್ಧವಾದಂತೆ. ಈಗ ಕಲಾವಿದನು ತನಗೆ ಬೇಕಾದ ವಿನ್ಯಾಸವನ್ನು ಆಕೃತಿಯ ಮೇಲೆ ಚಿತ್ರಿಸುತ್ತಾನೆ.

ಅನುಭವಿ ಕಲಾವಿದನು ಚೂಪಾದ ಕಲಂನಿಂದ ವಿವಿಧ ರೀತಿಯ ಮನಮೋಹಕವಾದ ವಿನ್ಯಾಸಗಳನ್ನು ಚಿತ್ರಿಸುತ್ತಾನೆ. ವಿವಿಧ ವಿನ್ಯಾಸಗಳಲ್ಲಿ ತಮಗೆ ಅನುಕೂಲವಾದ ಬೆಳ್ಳಿ-ಬಂಗಾರವನ್ನು ತುಂಬಿ ಆಕೃತಿಗೆ ಕಲಾತ್ಮಕವಾದ ಸೌಂದರ್ಯವನ್ನು ನೀಡುತ್ತಾನೆ. ಇದಾದ ಮೇಲೆ ಆರಂಭದಲ್ಲಿ ಕಲ್ಲಿಗೆ ಅಂಟಿಸಿದ ಮೇಣವನ್ನು ತೆಗೆಯುತ್ತಾರೆ. ಅಲ್ಪ-ಸ್ವಲ್ಪ ಮೇಣ ಅಲ್ಲಿ ಉಳಿದರೆ ಅದನ್ನು ಉಷ್ಣದಿಂದ ಕರಗಿಸಿ ತೆಗೆಯುವರು. ಆಕೃತಿಯಲ್ಲಿ ಹುದುಗಿಸಿದ ಬೆಳ್ಳಿ-ಬಂಗಾರವನ್ನು ಫೈಲಿಂಗ್ ಮಾಡಿ ಅಂತಿಮ ರೂಪ ನೀಡಲಾಗುವುದು. ಮೊದಲು ಹಚ್ಚಿದ ನೀಲಾತೋಪಾ ಕೂಡ ಫೈಲಿಂಗ್ ಮಾಡುವಾಗ ಹೋಗುತ್ತದೆ. ನಂತರ ಸತು ಮತ್ತು ಬೆಳ್ಳಿ-ಬಂಗಾರಗಳ ನಡುವೆ ವ್ಯತ್ಯಾಸ ಕಾಣದಂತಾಗುತ್ತದೆ.

ಇಲ್ಲಿ ೧ ಕಿ.ಗ್ರಾಂ ಬೀದರ್ ಕೋಟೆಮಣ್ಣು, ಅದಕ್ಕೆ ೨೦ ಗ್ರಾಂ ಅಮೋನಿಯಂ ಕ್ಲೋರೈಡ್ (ನವರಸ) ನೀರಿನಲ್ಲಿ ಮಿಶ್ರಣ ಮಾಡಿ ಕುದಿಸುವರು. ಕುದಿಸಿದ ದ್ರವದಲ್ಲಿ ರಚಿಸಿದ ಆಕೃತಿಯನ್ನು ೧೫-೨೦ ನಿಮಿಷಗಳ ಕಾಲ ಇಟ್ಟು ನಂತರ ಅದನ್ನು ತೆಗೆಯುವರು. ನಂತರ ಕಲಾಕೃತಿಯನ್ನು ನೀರಿನಿಂದ ಸ್ವಚ್ಛವಾಗಿ ತೊಳೆದು ಕಡಲೆಕಾಯಿ ಅಥವಾ ಕೊಬ್ಬರಿ ಎಣ್ಣೆಯಿಂದ ಉಜ್ಜುತ್ತಾರೆ. ಇದರಿಂದ ಕಲಾಕೃತಿ ಸತು ಕಪ್ಪು ಬಣ್ಣದಿಂದ ಕೂಡಿ ಹೊಳಪಾಗುತ್ತದೆ. ಹೊಳೆಯುವ ಕಪ್ಪು ಸತುವಿನ ಮಧ್ಯ ಬೆಳ್ಳಿ-ಬಂಗಾರಗಳ ವಿನ್ಯಾಸ ಆಕರ್ಷಕವಾಗಿ ಹೊಳೆಯುತ್ತದೆ. ಹೀಗೆ ಬಿದ್ರಿ ಕಲಾಕೃತಿ ಹಂತ-ಹಂತವಾಗಿ ನಿರ್ಮಾಣಗೊಂಡು ಕಲಾಸಕ್ತರ ಮನಸ್ಸನ್ನು ಸೆಳೆಯುತ್ತದೆ.

**ಪ್ರಭಾವ**

ಹೈದರಾಬಾದಿನ ರಾಜ್ಯ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹಿಸಿರುವ ಬಿದರಿ ಕಲೆಗಳು ೧೬ ಹಾಗೂ ೧೭ನೇ ಶತಮಾನಕ್ಕೆ ಸೇರಿದವು. ಇವುಗಳ ಮೇಲೆ ದಖನಿ ಲಘು ಚಿತ್ತಾರಗಳಿರುವುದನ್ನು ಜಗದೀಶ ಮಿತ್ತಲ್ ತೋರಿಸಿಕೊಟ್ಟಿದ್ದಾರೆ. ರಾಬರ್ಟ್ ಅಂಡ್ ಲಿಸಾ ಸೇನ್ಸ್‌ಬರಿ ಕಲೆಕ್ಷನ್, ಯೂನಿವರ್ಸಿಟಿ ಆಫ್ ಈಸ್ಟ್ ಆಂಗ್ಲಿಯಾ ಸಂಗ್ರಹಾಲಯದಲ್ಲಿ ಸಂಗ್ರಹಿಸಿರುವ ಬಿದ್ರಿ ಕಲೆ (ಹುಕ್ಕಾ) ದಖನಿ ಲಘು ಚಿತ್ತಾರಗಳನ್ನು ಹೊಂದಿದ್ದು, ಅದರ ಆಕಾರ ಮೊಘಲ ಕಲಾ ಶೈಲಿಯೊಂದಿಗೆ ಹೋಲಿಕೆಯಾದರೆ, ಅದರ ಕಲಾಕೃತಿಯ ಚಿತ್ತಾರಗಳು ಪರ್ಷಿಯಾ ದೇಶದ ಕಲೆಗೆ ಹೋಲುತ್ತವೆ. ೧೬ ಹಾಗೂ ೧೭ನೇ ಶತಮಾನದ ಬಿದ್ರಿ ಕಲೆಯ ಮೇಲೆ ಮೊಘಲರ ಹಾಗೂ ಪರ್ಷಿಯನ್ನರ ವಿನ್ಯಾಸ ಕಲೆಯ ಪ್ರಭಾವ ಕಂಡುಬಂದಿರುವುದನ್ನು ಮಾರ್ಕ್ ಜೇಬ್ರೋವಸ್ಕಿ ಬರೆದ ದಖನಿ ಲಘು ಚಿತ್ತಾರ ಕುರಿತ ಪುಸ್ತಕದಲ್ಲಿ ಹೇಳಿದ್ದಾರೆ.

ಪ್ರವಾದಿ ಮೊಹಮ್ಮದರ ಮರಣವಾಗಿ ಸುಮಾರು ಐದುನೂರು ವರ್ಷಗಳ ನಂತರ ಇಸ್ಲಾಂ ಧರ್ಮ ತನ್ನ ಮೂಲ ಸ್ಥಾನವಾದ ಅರೇಬಿಯಾದಿಂದ ದೂರ ದೂರದ ಪ್ರದೇಶಗಳಿಗೆ ಹರಡಿತು. ಮಧ್ಯ ಪೂರ್ವದ ಇನ್ನಿತರ ಭಾಗಗಳಾದ ಉತ್ತರ ಆಫ್ರಿಕಾ, ಸ್ಪೇನ್, ಮಧ್ಯ ಏಷಿಯಾ ಮತ್ತು ಭಾರತದ ಉತ್ತರ ಮಧ್ಯ ಭಾಗಗಳನ್ನು ಮೊಹಮ್ಮದರ ಅನುಯಾಯಿಗಳಾದ ಮುಸಲ್ಮಾನರು ಜಯಿಸಿದರು. ಇಸ್ಲಾಂ ಧರ್ಮದ ಪ್ರಚಾರದೊಂದಿಗೆ ಮುಸ್ಲಿಂ ಕಲೆಯ ವಿಶೇಷವಾದ ಶೈಲಿ ಕ್ರಮೇಣ ವಿಕಾಸ ಹೊಂದಿತು. ಪ್ರಮುಖವಾಗಿ ಧಾರ್ಮಿಕ ವಾಸ್ತುಶಿಲ್ಪ, ಚಿತ್ರರೂಪಗಳಲ್ಲಿ ಬಳಕೆಗೊಂಡಿತು. ಮುಸ್ಲಿಂ ಕಲೆಯ ಮೇಲೆ ರೋಮನ್, ಬೈಝಂಟೈನ್ ಮತ್ತು ಪರ್ಶಿಯನ್ ಕಲೆಗಳು ಪ್ರಭಾವ ಬೀರಿದ್ದವು.

ಮುಸ್ಲಿಂ ಕಲೆಯ ಬೆಳವಣಿಗೆಯ ಮೇಲೆ ಎರಡು ಧಾರ್ಮಿಕ ನಿಬಂಧನೆಗಳು ಪ್ರಭಾವ ಬೀರಿವೆ. ಜೀವಂತವಾಗಿರುವ ಪ್ರಾಣಿಗಳ ಪ್ರತಿಮೆ ಅಥವಾ ಪ್ರತಿಕೃತಿಯನ್ನು ನಿರ್ಮಿಸುವುದು, **ಜೀವಿಗಳನ್ನೆಲ್ಲ ಸೃಷ್ಟಿಸಿದ ಎಲ್ಲಾ ಹೂವುಗಳು ಅನುಕರಣೆಯೆನಿಸುವುದರಿಂದ** ಅದನ್ನು ಮಾಡಬಾರದೆಂದು ಮಹಮ್ಮದರು ಕಲಾವಿದರಿಗೆ ಎಚ್ಚರಿಕೆ ನೀಡಿದ್ದಾರೆ. ಹಾಗಾಗಿ ಧಾರ್ಮಿಕ ಕಲೆಯಲ್ಲಿ ಮನುಷ್ಯ ಅಥವಾ ಪ್ರಾಣಿಗಳ ಚಿತ್ರಣವಿಲ್ಲದ ಇತರ ಆಲಂಕಾರಿಕ ವಿನ್ಯಾಸಗಳೆ ತುಂಬಿಕೊಂಡಿವೆ. ಎರಡನೆಯ ನಿಬಂಧನೆಯಂತೆ ಕಲಾಕೃತಿಗಳ ನಿರ್ಮಾಣಕ್ಕೆ ಬೆಲೆ ಬಾಳುವ ವಸ್ತುಗಳ ಬಳಕೆಗೆ ಉತ್ತೇಜನವಿಲ್ಲ, ಹಾಗಾಗಿಯೆ ಮುಸ್ಲಿಂ ಕಲಾವಿದರು ಬಹುಮಟ್ಟಿಗೆ ಹಿತ್ತಾಳೆ, ಮಣ್ಣು ಮತ್ತು ಕಟ್ಟಿಗೆಯಂತಹ ಅಗ್ಗದ ವಸ್ತುಗಳನ್ನು ಬಳಸಿಕೊಂಡು ಆಲಂಕಾರಿಕ ಕೌಶಲ್ಯ ಕರಗತ ಮಾಡಿಕೊಂಡಿದ್ದರು. ಅವು ಬೆಲೆಬಾಳುವ ಬೆಳ್ಳಿ-ಬಂಗಾರದ ವಸ್ತುಗಳಂತೆ ಸುಂದರವಾಗಿ ಕಾಣುವಂತೆ ರಚಿಸುತ್ತಿದ್ದರು.

ಒಟ್ಟಾರೆ, ಭಾರತೀಯ ಚಿಕಣಿ ಚಿತ್ರಕಲೆಯಲ್ಲಿ ಎಷ್ಟು ಸೂಕ್ಷ್ಮವಾಗಿ ಕಲಾವಿದನು ತನ್ನ ಕುಂಚದ ಮೂಲಕ ಚಿತ್ರಿಸುತ್ತಾನೋ ಅಷ್ಟೇ ಸೂಕ್ಷ್ಮವಾಗಿ ಸುಂದರವಾಗಿ ಬಿದ್ರಿ ಕಲಾವಿದನು ಧಾತುವಿನ ಮೇಲೆ ಸೂಜಿಯಿಂದ ಚಿತ್ರಿಸುತ್ತಾನೆ. ಹಾಗಾಗಿಯೆ ಹೂವು, ಬಳ್ಳಿ ಮತ್ತು ಎಲೆಗಳನ್ನು ಚಿತ್ರಿಸುವುದರಲ್ಲಿ ಬಿದ್ರಿ ಕಲಾವಿದನ ಕೌಶಲ್ಯ ಪರಿಪೂರ್ಣವಾಗಿ ಕಾಣುತ್ತದೆಯಾದರೂ ಪ್ರಾಣಿ ಪಕ್ಷಿಗಳ ಆಕೃತಿಯ ರಚನೆಯಲ್ಲಿ ಅಷ್ಟೊಂದು ಪರಿಪೂರ್ಣತೆ ಕಾಣುವುದಿಲ್ಲ. ಅನೇಕ ಆಧುನಿಕ ವಸ್ತು ವಿಷಯಗಳ ಪ್ರಭಾವ ಬಿದ್ರಿ ಕಲೆಯ ಮೇಲೆ ಕಾಣಿಸಿದರೂ ಭಾರತೀಯ ಕಲಾ ಶೈಲಿಯ ಪ್ರಭಾವ ಬಿದ್ರಿ ಕಲೆಯ ಮೇಲೆ ಇದುವರೆಗೂ ಕಂಡುಬರುವುದಿಲ್ಲ. ಈ ಕಲಾ ಮಾಧ್ಯಮದಲ್ಲಿ ಪರ್ಷಿಯಾ ದೇಶದ ವಿನ್ಯಾಸ ಮತ್ತು ಅರ್‍ಯಾಬಿಕ್ ಬರಹಗಳು ಎಷ್ಟು ಕಲಾತ್ಮಕವಾಗಿ ಮನಮೋಹಕವಾಗಿರುತ್ತವೆಯೋ ಅಷ್ಟೇ ಪ್ರಮಾಣದಲ್ಲಿ ಆಧುನಿಕ ವಿಷಯಗಳ ವಿನ್ಯಾಸಗಳಲ್ಲಿ ಆಕರ್ಷಣೆ ಕಂಡುಬರುವುದಿಲ್ಲ. ಭಾರತೀಯ ಶೈಲಿಯ ಪರಿಪೂರ್ಣ ಅನುಭವ ಹೊಂದಿದ ಕಲಾವಿದರು ಈ ಬಿದ್ರಿ ಕಲೆಯತ್ತ ಗಮನಹರಿಸದೇ ಇರುವುದು ಮತ್ತು ಚಿತ್ರಕಲೆಯಲ್ಲಿ ಶಾಸ್ತ್ರೋಕ್ತವಾದ ಶಿಕ್ಷಣ ಪಡೆದು ತೊಡಗಿಸಿಕೊಳ್ಳದೆ ಇರುವುದು ಇದಕ್ಕೆ ಕಾರಣಗಳಾಗಿದ್ದಿರಬಹುದು.

**ಡಾ|| ಮೋಹನ್ ಬಿ. ಪಂಚಾಳ**
ಅತಿಥಿ ಉಪನ್ಯಾಸಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೫೮೩ ೨೭೬



# ಅರಿಯುವಿಕೆಯ ಸಾರ್ಥಕತೆ

ಜೀವನದಲ್ಲಿ ಒಳ್ಳೆಯದು ಎನ್ನುವುದು ಏನಿದೆಯೋ ಅದನ್ನು ಅಂದರೆ ಕಣ್ಣಿಗೆ ಗೋಚರಿಸುವ, ಕಿವಿಗೆ ಕೇಳಿಸುವ, ಮನಕ್ಕೆ ಮುದ ನೀಡುವ ಮುಂತಾದವುಗಳೆಲ್ಲವನ್ನು ದಿನ ದಿನಕ್ಕೂ ಅರಿಯುತ್ತಾ ಹೋದಾಗ ನಮ್ಮ ಜ್ಞಾನದ ಮಟ್ಟ ಇನ್ನಷ್ಟು ತೀಕ್ಷ್ಣ ಹಾಗೂ ವಿಸ್ತಾರವಾಗುತ್ತಾ ಹೋಗುತ್ತದೆ. ಅಂದರೆ ಚಿಕ್ಕದಾಗಿ ಬೆಳಗುತ್ತಿರುವ ದೀಪವನ್ನು ಸ್ವಲ್ಪಸ್ವಲ್ಪ ಎತ್ತರಿಸುತ್ತಾ ಹೋದಾಗ ತುಂಬಿರುವ ಕತ್ತಲು ಮಾಯವಾಗುತ್ತಾ ಅಲ್ಲಿ ಬೆಳಕು ಆವರಿಸಿಕೊಳ್ಳುತ್ತಾ ಹೋಗುತ್ತದೆ. ಬಸವಣ್ಣನವರು ಹೇಳುತ್ತಾರೆ :

ಕಂಗಳು ತುಂಬಿದ ಬಳಿಕ ನೋಡಲಿಲ್ಲ,  
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ,  
ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ,  
ಮನ ತುಂಬಿದ ಬಳಿಕ ನೆನೆಯಲಿಲ್ಲ,  
ಮಹಾಂತ ಕೂಡಲಸಂಗಮ ದೇವನ.

ಭಗವಂತ ಕರುಣಿಸಿರುವ ಕಣ್ಣು, ಕಿವಿ, ಕೈ, ಮನಸ್ಸು ಹೀಗೆ ದೇಹದ ಸರ್ವಾಂಗಗಳೂ ಸುಸ್ಥಿತಿಯಲ್ಲಿರುವಾಗ ಸಮರ್ಥ ರೀತಿಯಲ್ಲಿ ಉಪಯೋಗ ಮಾಡಿಕೊಳ್ಳದಿದ್ದರೆ ಮನುಷ್ಯನಾಗಿದ್ದೇನು ಪ್ರಯೋಜನ ? ಅಂದರೆ ಅರಿತುಕೊಳ್ಳುವುದಕ್ಕೆ ವಯಸ್ಸು ಅರವತ್ತಾದರೇನು ? ಮೂವತ್ತಾದರೇನು ? ಶುದ್ಧವಾದ ಮನಸ್ಸು ಮುಖ್ಯ. 'ಹೊತ್ತು ಇರುವಾಗಲೇ ಗೊತ್ತು ಸೇರು' ಎನ್ನುವಂತೆ ಸಮಯ ಅನುಕೂಲಗಳು ಹತ್ತಿರ ಬಂದಾಗ ಧ್ಯಾನಸ್ಥಿತಿ ಕೈಗೆಟುಕಿದಾಗ ವಿಷಯಗಳನ್ನು ಮನನ ಮಾಡಿಕೊಳ್ಳಬೇಕು. ತಿಳಿದರಾಯ್ತು, ಓದಿದರಾಯ್ತು, ನೋಡಿದರಾಯ್ತು, ಕೇಳಿದರಾಯ್ತು, ಮಾಡಿದರಾಯ್ತು ಎಂದು ಮುಂದೂಡಬಾರದು. ಅರಿತರಿತು ಬಾಳುವುದರಲ್ಲಿ ಸಿಗುವ ಆನಂದಕ್ಕೆ ಬೆಲೆ ಕಟ್ಟಲಾದೀತೆ ? ಕತ್ತಲೆಯಿಂದ ಬೆಳಕಿನೆಡೆಗೆ, ನೋವಿನಿಂದ ನಲಿವಿನೆಡೆಗೆ, ಸೋಲಿನಿಂದ ಗೆಲುವಿನೆಡೆಗೆ, ಚಿಂತೆಯಿಂದ ಚಿಂತನೆಯೆಡೆಗೆ, ಭ್ರಮೆಯಿಂದ ವಾಸ್ತವಿಕತೆಯೆಡೆಗೆ ತೆರಳಬೇಕಾದರೆ ನಮ್ಮ ಅರಿಯುವಿಕೆ ನಿರಂತರವಾಗಿ ವಿಸ್ತಾರವಾಗುತ್ತಾ ಹೋಗಬೇಕು. ಆಗ ನಮ್ಮ ಭವ್ಯ ಬದುಕು ಸರ್ವಾಂಗ ಸುಂದರವಾಗುತ್ತದೆ.

ನಾವು ಸೇವಿಸುವ ಆಹಾರ, ನೀರು, ಗಾಳಿ ಮತ್ತು ಮಾಡುವ ಕಾಯಕ ಎಲ್ಲವೂ ಶುದ್ಧವಾಗಿದ್ದಾಗ ಆರೋಗ್ಯ ಅತ್ಯುತ್ತಮವಾಗಿರುತ್ತದೆ. ಹಾಗೆಯೇ ನಮ್ಮ ನಡೆ-ನುಡಿಗಳಲ್ಲಿ ಶಿಸ್ತು-ಸಂಯಮಗಳು ಉತ್ತಮಗೊಳ್ಳಬೇಕಾದರೆ ಉತ್ತಮವಾದ ಸ್ನೇಹ-ಪ್ರೀತಿಯ ಸಂಪಾದನಗಳು ಬೇಕೇಬೇಕು. ಶರಣರ, ಸಂತರ, ಚಿಂತಕರ, ಅನುಭವಿಗಳ ಹಿತೋಕ್ತಿಗಳು-ತತ್ವಾದರ್ಶಗಳನ್ನು ಗ್ರಹಿಸಿದಾಗ ನಮ್ಮಲ್ಲಿರುವ ದ್ವೇಷಾಸೂಯೆಗಳೂ, ಸ್ವಾರ್ಥ-ಮೋಹಾದಿಗಳು ಮಾಯವಾಗುತ್ತವೆ. ಆಗ ಜೀವನ ಪಾವನವಾಗುತ್ತದೆ. ಜೀವನದಲ್ಲಿ ಎಂತಹ ಸಂಗ-ಸಹವಾಸಗಳು ಅತ್ಯವಶ್ಯಕವೆಂದು ಅಕ್ಕಮಹಾದೇವಿಯವರು ಹೀಗೆ ಹೇಳಿದ್ದಾರೆ :

ಅರಿಯದವರೊಡನೆ ಸಂಗವ ಮಾಡಿದರೆ  
ಕಲ್ಲ ಹೊಯ್ದು ಕಿಡಿಯು ತೆಗೆದುಕೊಂಬಂತೆ  
ಬಲ್ಲವರೊಡನೆ ಸಂಗವ ಮಾಡಿದರೆ  
ಮೊಸರ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ

ಅಲ್ಪರ, ಅಹಂಕಾರಿಗಳ, ಸೋಮಾರಿಗಳ, ಮತ್ತೊಬ್ಬರನ್ನು ಹಿಯಾಳಿಸುವವರ ಸಂಗ ಖಂಡಿತಾ ಸಾಧುವಲ್ಲ. ಅರಿಯುವುದಕ್ಕೆ ಅಥವಾ ಭಕ್ತಿಯಿಂದ ಕೈ ಮುಗಿಯುವುದಕ್ಕೆ ದೇವಸ್ಥಾನಕ್ಕೆ ಹೋಗಲೇಬೇಕೆಂಬ ಕಟ್ಟಳೆಗಳೇನೂ ಇಲ್ಲ. ಏಕೆಂದರೆ ದೇವರು ಎಲ್ಲೆಡೆಯಲ್ಲಿಯೂ ಇದ್ದಾನೆ. ನಿತ್ಯವೂ ಭಗವಂತನ ನಾಮಸ್ಮರಣೆ ಮಾಡುತ್ತ, ಕಾಯಕದ ಮೂಲಕ ಅರಿತರಿತು ಬಾಳಿದಾಗ ಜೀವನದ ಪ್ರತಿಕ್ಷಣದಲ್ಲಿಯೂ ಆನಂದವನ್ನು ನಮ್ಮದಾಗಿಸಿಕೊಳ್ಳಬಹುದು. ಎಲ್ಲರೊಡನೆ ವಿಶ್ವಾಸ-ಪ್ರೀತಿಗಳಿಂದ ಬೆರೆತಾಗ ನಮ್ಮನ್ನು ಕಾಡುವ ಎಲ್ಲ ನಕಾರಾತ್ಮಕ ಚಿಂತೆಗಳಿಂದ ಮುಕ್ತರಾಗಬಹುದು. 'ಎಣ್ಣೆ ಇದ್ದ ಕಾಲಕ್ಕೆ ಕಣ್ಣು ಮುಚ್ಚಿಕೊಂಡರು' ಎನ್ನುವಂತಾಗದೇ, ಅವಕಾಶ ಕೈಗೂಡಿದಾಗ, ಎಣ್ಣೆ ಇದ್ದ ಕಾಲದಲ್ಲಾದರೂ ದೀಪ ಹೊತ್ತಿಸಿ ಬೆಳಕಿನಲ್ಲಿ ಬಾಳಬೇಕು. ಆ ಬೆಳಕಿನಲ್ಲಿ ಸಂಕೀರ್ಣವಾದ ಜಗತ್ತನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸಬೇಕು.

ಅದೇ ಆರುವ ದೀಪವನ್ನು ನೋಡಿದಾಗ ಬದುಕಿನ ನಶ್ವರತೆ ದರ್ಶನವಾಗುತ್ತದೆ. ಹಾಗೆಂದುಕೊಂಡು ಸುಮ್ಮನೆ ಕೂಡಲಾದೀತೆ ? ಎಲ್ಲವೂ ಕಾಲಾಂತರದಲ್ಲಿ ಮರೆಯಾಗುತ್ತಿರುತ್ತದೆ. ಈ ಸತ್ಯದ ಅರಿವಿನಿಂದ, ನಶ್ವರತೆಯ ಬಾಧೆಯಿಂದ ಮುಕ್ತನಾಗಬಹುದು. ನಾವೆಲ್ಲಾ ಮುಕ್ತರೆ ! ಕಟ್ಟಿದ್ದೆಲ್ಲವೂ ಒಮ್ಮೆ ಬೀಳುತ್ತದೆ, ಹಚ್ಚಿದ್ದೆಲ್ಲವೂ ಒಮ್ಮೆ ಆರುತ್ತದೆ, ಹತ್ತಿದ್ದೆಲ್ಲವೂ ಇಳಿಯುತ್ತದೆ, ಬದುಕಿದ್ದೆಲ್ಲವೂ ಸಾಯುತ್ತದೆ. ಆದರೂ ನಾವು ಕಟ್ಟಬೇಕು, ಹಚ್ಚಬೇಕು, ಹತ್ತಬೇಕು, ಬಾಳಲೇಬೇಕು. ಅದೇ ಮುಕ್ತವಾದ ಜೀವನ, ನಿಶ್ಚಿಂತವಾದ ಬಾಳು. 'ಅರಿತರೆ ಶರಣ ಮರೆತರೆ ಮಾನವ' ಎನ್ನುವಂತೆ ಇಂತಹ ಪರಮಾರ್ಥ ಜ್ಞಾನವನ್ನು ನಿತ್ಯವೂ ಅರಿತುಕೊಳ್ಳುವುದರಲ್ಲಿ ಜೀವನದ ಸಾರ್ಥಕ್ಯವಿದೆ.

**ಡಾ|| ರಾಜಶೇಖರ ಜಮದಂಡಿ**  
ಜೆಎಸ್‌ಎಸ್ ಕನ್ನಡ ಸ್ನಾತಕೋತ್ತರ ಕೇಂದ್ರ  
ಚಾಮರಾಜನಗರ - ೫೭೧ ೩೧೩, ಚಾಮರಾಜನಗರ ಜಿಲ್ಲೆ

## ಸಾದರ ಸ್ವೀಕಾರ

**ಶ್ರೀರಂಗ** (ಬದುಕು-ಬರೆಹ)  
ಡಾ|| ಬಿ. ಎನ್. ಸುಮಿತ್ರಾಬಾಯಿ  
ಪುಟ : ೧೨೦ ಬೆಲೆ : ರೂ. ೬೦

**ಬೆಳಕು** (ಭೌತವಿಜ್ಞಾನ) ಪ್ರೊ|| ಡಿ. ಆರ್. ಬಳೂರಗಿ  
ಪುಟ : ೧೧೨ ಬೆಲೆ : ರೂ. ೬೦

**ಕಾರ್ಬನ್** (ರಸಾಯನ ವಿಜ್ಞಾನ)  
ಡಾ|| ಸರ್ವೋತ್ತಮ ವೈ. ಅಂಬೇಕರ  
ಪುಟ : ೧೦೪ ಬೆಲೆ : ರೂ. ೬೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು  
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಕರ್ನಾಟಕ ನೀರು-ನೀರಾವರಿ**  
ಡಾ|| ಕೃಷ್ಣ ಕೊಲ್ಹಾರ ಕುಲಕರ್ಣಿ  
ಪುಟ : ೧೯೨ ಬೆಲೆ : ರೂ. ೧೨೦  
**ರವಿ ಗರಣಿ ಪ್ರಕಾಶನ,** ನಂ. ೯೬, ೧೦ನೇ 'ಸಿ' ಕ್ರಾಸ್, ೬ನೇ 'ಎ' ಮುಖ್ಯರಸ್ತೆ, ಡಬ್ಲ್ಯುಒಸಿ, ನಾಗಪುರ, ಬೆಂಗಳೂರು - ೫೬೦ ೦೮೬

**ನೆಲದ ಕರುಣೆಯ ದನಿ** (ಕವಿತೆಗಳು) ವೀರಣ್ಣ ಮಡಿವಾಳರ  
ಪುಟ : ೧೧೬ ಬೆಲೆ : ರೂ. ೫೦  
**ಕೆಂಗುಲಾಬಿ ಪ್ರಕಾಶನ,** ೧೧೮, ೫ನೇ ವಾರ್ಡ್, ಆಝಾದ್‌ನಗರ, ಕೂಡ್ಲಗಿ, ಬಳ್ಳಾರಿ ಜಿಲ್ಲೆ

**ವಿಳಾಸ ಇಲ್ಲದವರ ಹುಡುಕುತ್ತ** (ಕತೆಗಳು)  
ಗವಿಸಿದ್ಧ ಬಿ. ಹೊಸಮನಿ  
ಪುಟ : ೧೨೦ ಬೆಲೆ : ರೂ. ೯೦  
**ಮೇ ಫ್ಲವರ್,** ೪೫೦/೧/೧೪ ೩ನೇ ಮಹಡಿ, ಲಕ್ಷ್ಮಿ ಕಾಂಪ್ಲೆಕ್ಸ್, ೧೦ನೇ ಮುಖ್ಯರಸ್ತೆ, ೨೭ನೇ ಅಡ್ಡರಸ್ತೆ, ೪ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೧೧

**ಪ್ರವಾಸ ಸಲ್ಲಾಪ** (ಪ್ರವಾಸ ಕಥನ) ನೆ. ವಿಶ್ವನಾಥ  
ಪುಟ : ೧೬೦ ಬೆಲೆ : ರೂ. ೫೦  
**ಸಂವಹನ,** ೧೦, 'ಶ್ರದ್ಧಾ', ೮ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಶ್ರೀನಿಧಿ ಬಡಾವಣೆ, ಕೋಣನಕುಂಟೆ, ಬೆಂಗಳೂರು - ೫೬೦ ೦೬೨

**ಎಲ್ಲಾ ಕಾಲದ ಬೆಳಕು** (ಲೇಖನ ಸಂಗ್ರಹ)  
ಪ್ರ.ಸಂ. : ಭೀಮನಗೌಡ ಇಟಗಿ  
ಸಂ.: ಡಾ|| ದಸ್ತಗೀರ್ ಸಾಬ್ ದಿನ್ನಿ  
ಪುಟ : ೨೨೦ ಬೆಲೆ : ರೂ. ೧೦೦  
**ಕನಸು ಪ್ರಕಾಶನ,** ನಂ. ೪-೪-೫೭೮/೧, ಜಹೀರಾಬಾದ್, ರಾಯಚೂರು

**ಕನ್ನಡ ಜಗದ್ಗುರು** (ಬದುಕು ಸಾಧನೆ) ಚಂದ್ರಶೇಖರ ವಸ್ತ್ರದ  
ಪುಟ : ೧೭೦ ಬೆಲೆ : ರೂ. ೧೦೦  
**ಸವಿಚೇತನ ಪ್ರಕಾಶನ,** 'ಗೋಧೂಳಿ', ಆದರ್ಶ ನಗರ, ಗದಗ - ೫೮೨ ೧೦೧

**ಜೀವನ್ಮುಖಿ** (ಕವನ ಸಂಕಲನ) ಟಿ. ಸತೀಶ್ ಜವರೇಗೌಡ  
ಪುಟ : ೮೦ ಬೆಲೆ : ರೂ. ೮೦  
**ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,** ೧ನೇ ಅಡ್ಡರಸ್ತೆ, ಬಂದಿಗೌಡ ಬಡಾವಣೆ, ಮಂಡ್ಯ - ೫೭೧ ೪೦೧

# ಪಾರಂಪರಿಕ ಸಿರಿಯ ಶಿವಕುಮಾರ್



ದೊಡ್ಡ ಗಡಿಯಾರ, ಮೈಸೂರು

**ದೊ**ಡ್ಡ ಅರಸಿನಕೆರೆಯ ಎಚ್. ಶಿವಕುಮಾರ್ ಗ್ರಾಮೀಣ ಪ್ರತಿಭೆ. ಕಲೆಯಲ್ಲಿ ಮಿಡಿತವಿದ್ದುದರಿಂದ ಮೈಸೂರಿನ ಶ್ರೀ ಕಲಾನಿಕೇತನ್ ಸ್ಕೂಲ್ ಆಫ್ ಆರ್ಟ್ಸ್ ಸೇರಿ ಐದು ವರ್ಷಗಳ ಚಿತ್ರಕಲೆ ವ್ಯಾಸಂಗವನ್ನು ಮುಗಿಸಿದರು. ಅಧ್ಯಾಪಕ ಚಿಕ್ಕಣ್ಣ ಅವರ ಕೃತಿಗಳಿಂದ ಪ್ರಭಾವಿತರಾದರು. ೧೯೯೯-೨೦೦೧ರವರೆಗೆ ದಸರಾ ಕಲಾ ವಿಭಾಗ, ೨೦೦೨ರಲ್ಲಿ ಏಡ್ಸ್ ಜಾಗೃತಿ, ನವದೆಹಲಿ, ೨೦೦೪ ಭಾಗವಹಿಸಿದ್ದು, ಪ್ರಚೋದಯಾತ್ ಸಂಘ, ಮೈಸೂರು ಅವರಿಂದ ೨೦೦೪ರಲ್ಲಿ 'ಕಲಾತಪಸ್ವಿ' ಬಿರುದು ಪಡೆದರಲ್ಲದೆ ಇವರ ಮನಸೆಳೆವ ವಿಶಿಷ್ಟ ಶೈಲಿಯಿಂದಾಗಿ ವಿದೇಶಗಳಲ್ಲೂ ಪ್ರಸಿದ್ಧರಾಗಿದ್ದಾರೆ. ಗ್ರಾಮೀಣ ಪರಿಸರದ ಬದುಕಲ್ಲಿ ಬೆಳೆದ ಶಿವಕುಮಾರ್ ಅವರು ಹಳ್ಳಿಯ ಪರಿಸರ, ಹಳೆಯ ಮನೆಗಳ ಬಾಗಿಲಿನ ಕಲಾತ್ಮಕ ವೈಖರಿಯನ್ನು ಯಥಾವತ್ತಾಗಿ ಚಿತ್ರಿಸುವುದರಲ್ಲಿ ನಿಷ್ಣಾತರು.

■ **ಪಿ. ಎಂ. ರಾಜನ್, ಎಂ.ಎ.,** ಗಿರಿದರ್ಶಿನಿ ನಗರ, ಮೈಸೂರು.



ಹಳ್ಳಿಯ ಹಳೆಯ ಮನೆ





ಪೊಲೀಸ್ ತರಬೇತಿ ಕೇಂದ್ರ



ಕುಕ್ಕರಹಳ್ಳಿ ಕೆರೆ, ಮೈಸೂರು

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / AUGUST 2010 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)